ಶ್ರೀರಸ್ತು

## ಮುಹೂರ್ತದೀಪಿಕಾ

ಮತ್ತು

# ಮುಹೂರ್ತದರ್ಪಣವು

ತಾತ್ಪರ್ಯಸಹಿತ



**ಪಂಡಿತರಿಂದ ಪರಿಶೋಧಿಸಲ್ಪಟ್ಟಿದೆ.**

ಪ್ರಕಾಶಕರು :

**ಟಿ. ಯರ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್**

ಬುಕ್‌ಡಿಪ್ರೋ, ಚಿಕ್ಕಪೇಟೆ, ಬೆಂಗಳೂರು ಸಿಟಿ.

ಬೆಲೆ ರೂ. [illegible]

# ಮುಹೂರ್ತದೀಪಿಕೆಯ ವಿಷಯಾನುಕ್ರಮಣಿಕೆ



ಮುಹೂರ್ತದೀಪಿಕೆಯ ವಿಷಯಾನುಕ್ರಮಣಿಕೆ ಸಂಪೂರ್ಣಂ

# ಮುಹೂರ್ತದರ್ಪಣ ವಿಷಯಾನುಕ್ರಮಣಿಕೆ

ಮುಹೂರ್ತದರ್ಪಣದ ವಿಷಯಾನುಕ್ರಮಣಿಕೆ ಸಂಪೂರ್ಣಂ



ಶ್ರೀರಸ್ತು

# ಮುಹೂರ್ತ ದೀಪಿಕಾ



**ಜಯತ್ಯುದ್ದಂಡದೋರ್ದಂಡ ಖಂಡಿತಾ ರಾತಿಮಂಡಲಃ ।**
**ಅಪಾರಮಹಿಮಾಸೋಽಯಂ ಜನಾನಾಂನಂದವರ್ಧನಃ ॥**

## ನಕ್ಷತ್ರ ನಿಘಂಟು

**ಶ್ಲೋ ॥ ಯಃಕರ್ತಾ ಜಗತಾಂಭರ್ತಾ ಸಂಹರ್ತಾ ಮಹತಾಂನಿಧಿಃ ।**
**ಪ್ರಣಮಾಮಿ ತಮಾದಿತ್ಯಂ ಬಹಿರಂತಸ್ತಮೋಪಹಂ ॥**

ಯಾವನು ಲೋಕಗಳಿಗೆ ಕರ್ತನೋ, ರಕ್ಷಕನೋ, ಸಂಹಾರವನ್ನು ಮಾಡುವವನೋ, ತೇಜಸ್ಸುಗಳಿಗೆ ಮುಖ್ಯಸ್ಥಾನವಾಗಿ ಇದ್ದಾನೋ, ಒಳಗೆ ತಮೋಗುಣವನ್ನೂ, ಹೊರಗೆ ಅಂಧಕಾರವನ್ನೂ ನಹ ಹರಿಸುವನೋ, ಅಂಥಾ ಆದಿತ್ಯನನ್ನು ನಾನು ವಂದಿಸುತ್ತೇನೆಂದು ಶ್ಲೋಕಾರ್ಥವು.

**ಭವತ್ಯಶ್ವಿನಿ ನಕ್ಷತ್ರಂ ಅಶ್ವೀದಸ್ರಸ್ತುರಂಗಮಃ ।**
**ಆದ್ಯಸ್ತುರಂಗಸ್ತುರಗಃ ಅಶ್ವೋ ವಾಜೀ ಹಯೋ ಹರಿಃ ॥**

ಅಶ್ವಿ, ದಸ್ರ, ತುರಂಗಮಃ, ಆದ್ಯಃ, ತುರಂಗಃ, ತುರಗಃ, ಅಶ್ವಃ, ವಾಜೀ, ಹಯಃ, ಹರಿಃ ಈ ಹತ್ತು ಶಬ್ದಗಳೂ ಅಶ್ವಿನೀ ನಕ್ಷತ್ರದ ಹೆಸರು

**ಭರಣೀಸ್ಯಾದ್ಯಮೋಯಾಮ್ಯಸ್ಯಂತಕೋಯಮಸಂಜ್ಞಿಕಃ ॥**

ಯಮಃ, ಯಾಮ್ಯಃ, ಅಂತಕಃ, ಯಮಸಂಜ್ಞಿಕಃ ಈ ನಾಲ್ಕು ಶಬ್ದಗಳು ಭರಣಿ ನಕ್ಷತ್ರದ ಹೆಸರುಗಳು.

**ಕೃತ್ತಿಕಾಬಹುಳಾಜ್ಞೇಯಾ ಹುತಭುಗ್ವಹ್ನಿಸಂಜ್ಞಿಕಾ ।**
**ಷಟ್ತಾರಕೋಽಪಾವಕಶ್ಚ ಅನಲೋಽಜ್ವಲನಸ್ತಥಾ ॥**

ಕೃತ್ತಿಕಾ, ಬಹುಳಾ, ಹುತಭುಕ್, ವಹ್ನಿಸಂಜ್ಞಿಕಾ, ಷಟ್ತಾರಕಃ, ಪಾವಕಃ, ಅನಲಃ, ಜ್ವಲನಃ, ಈ ಎಂಟು ಶಬ್ದಗಳು ಕೃತ್ತಿಕಾ ನಕ್ಷತ್ರದ ಹೆಸರುಗಳು.

**ರೋಹಿಣೀ ಚ ವಿಧಿರ್ಬ್ರಹ್ಮಾ ಪ್ರಾಜಾಪತ್ಯಶ್ಚತುರ್ಮುಖಃ |**
**ಪ್ರಜಾಪತಿಃ ಪ್ರಜೇಶಶ್ಚ ವಿಧಾತಾ ಪಂಕಜಾಸನಃ ||**
**ಆತ್ಮಭೂಃ ಪದ್ಮಯೋನಿಸ್ಸ್ಯಾದ್ಬ್ರಹ್ಮನಾಮ ತತಃಪರಂ ||**

ರೋಹಿಣೀ, ವಿಧಿಃ, ಬ್ರಹ್ಮಾ, ಪ್ರಾಜಾಪತ್ಯಃ, ಪದ್ಮಜಃ, ಪ್ರಜಾಪತಿಃ, ಪ್ರಜೇಶಃ, ವಿಧಾತಾ, ಪಂಕಜಾಸನಃ, ಆತ್ಮಭೂಃ, ಪದ್ಮಯೋನಿಃ, ಬ್ರಹ್ಮ ನಾಮ ಈ ಹನ್ನೆರಡು ಶಬ್ದಗಳು ರೋಹಿಣಿ ನಕ್ಷತ್ರದ ಹೆಸರುಗಳು.

**ಮೃಗಶೀರ್ಷೆ ಮೃಗಶ್ಚಂದ್ರಃ ಐಂದವೋ ಹಿಮದೀಧಿತಿಃ |**
**ಸ್ಯಾಚ್ಚಂದ್ರ ಶಶಿಭಂ ಸೌಮ್ಯೋ ನಿಶಾನಾಥೋ ನಿಶಾಕರಃ ||**

ಮೃಗಶೀರ್ಷ, ಮೃಗಃ, ಚಂದ್ರಃ, ಐಂದವಃ, ಹಿಮದೀಧಿತಿಃ, ಚಂದ್ರಃ, ಶಶಿಭಂ, ಸೌಮ್ಯಃ, ನಿಶಾನಾಥಃ, ನಿಶಾಕರಃ ಈ ಎಂಟು ಶಬ್ದಗಳು ಮೃಗಶಿರ ನಕ್ಷತ್ರದಲ್ಲಿ ವರ್ತಿಸುವುವು.

**ಆರ್ದ್ರಾರೌದ್ರೇ ಚ ಪುರಜಿಚ್ಛರ್ವಸ್ಥಾಣುರ್ಭವೋ ಹರಃ ||**

ಆರ್ದ್ರಾ, ಪುರಜಿತ್, ಶರ್ವಃ, ಸ್ಥಾಣುಃ, ಭವಃ, ಹರಃ ಈ ಆರು ಶಬ್ದ ಗಳು ಆರ್ದ್ರಾನಕ್ಷತ್ರದ ಹೆಸರುಗಳು

**ಪುನರ್ವಸ್ಸ್ವದಿತಿರ್ದೇವಮಾತಾ ಆದಿತ್ಯಮೇವ ಚ ||**

ಪುನರ್ವಸು, ಅದಿತಿಃ, ದೇವಮಾತಾ, ಆದಿತ್ಯಃ ಈ ನಾಲ್ಕು ಶಬ್ದಗಳು ಪುನರ್ವಸು ನಕ್ಷತ್ರದ ನಾಮಗಳು

**ಇಜ್ಯಾತ್ಯಾತಿಷ್ಯ ಪುಷ್ಯೇತು ಪೂಜಿತೋಗುರುನಾಮಕಃ ||**
**ವಾಗೀಶಶ್ಚಾಮರೇಜ್ಯಶ್ಚ ಜೀವೋದೇವಪುರೋಹಿತಃ ||**

ಇಜ್ಯಃ, ಆರ್ಯಃ, ತಿಷ್ಯಃ, ಪುಷ್ಯಃ, ಪೂಜಿತಃ, ಗುರುನಾಮಕಃ, ವಾಗೀಶಃ, ಅಮರೇಜ್ಯಃ, ಜೀವಃ, ದೇವಪುರೋಹಿತಃ ಈ ಹತ್ತು ಶಬ್ದಗಳು ಪುಷ್ಯ ನಕ್ಷತ್ರದ ಹೆಸರುಗಳು.

**ಆಶ್ಲೇಷೋರಗಸಾರ್ಪಾಹಿ ಭುಂಜಗ ವ್ಯಾಳಸಂಜ್ಞಿಕಃ ||**

ಆಶ್ಲೇಷಃ, ಉರಗಃ, ಸಾರ್ಪಃ, ಅಹಿಃ, ಭುಜಂಗಃ, ವ್ಯಾಳಸಂಜ್ಞಿಕಃ ಈ ಆರು ಶಬ್ದಗಳು ಆಶ್ಲೇಷಾ ನಕ್ಷತ್ರದ ಹೆಸರುಗಳು.

**ಮಖಾಪಿತಾ ಚ ಪೈತೃಶ್ಚ ಮೇಖಲಾ ಪಿತೃಭಂ ತಥಾ ||**

ಮಘಾ, ಪಿತಾ, ಪೈತೃಃ, ಮೇಖಲಾ, ಪಿತೃಭಂ ಈ ಐದು ಶಬ್ದಗಳು ಮಘಾ ನಕ್ಷತ್ರದ ನಾಮಗಳು.

**ಭಾಗ್ಯಂ ಪೂರ್ವಾಫಲ್ಗುನೀ ಭಗಾಖ್ಯಂ ಭಗಸಂಜ್ಞಿಕಂ ||**

ಭಾಗ್ಯಂ, ಪೂರ್ವಫಲ್ಗುನೀ, ಭಗಾಖ್ಯಂ, ಭಗಸಂಜ್ಞಿಕಂ ಈ ನಾಲ್ಕು ಶಬ್ದಗಳು ಪೂರ್ವಫಲ್ಗುನೀ ನಕ್ಷತ್ರದ ಹೆಸರುಗಳು.

**ಅರ್ಯಮರ್ಯಮಣಂಚೈವ ಅರ್ಯಮ್ಣಂಚೋತ್ತರಂ ತಥಾ ||**

ಅರ್ಯಮಾ, ಅರ್ಯಮಣಂ, ಅರ್ಯಮ್ಣಂ, ಉತ್ತರಂ ಈ ನಾಲ್ಕು ಶಬ್ದಗಳು ಉತ್ತರಫಲ್ಗುನೀ ನಕ್ಷತ್ರದ ಹೆಸರುಗಳು.

**ಹಸ್ತಸ್ಸವಿತೃಸಾವಿತ್ರ ಅರ್ಕಸ್ಸೂರ್ಯೋದಿವಾಕರಃ ||**

ಹಸ್ತಃ, ಸವಿತಾ, ಸಾವಿತ್ರಃ, ಅರ್ಕಃ, ಸೂರ್ಯಃ, ದಿವಾಕರಃ ಈ ಆರು ಶಬ್ದಗಳು ಹಸ್ತ ನಕ್ಷತ್ರದ ಹೆಸರುಗಳು

**ಚಿತ್ರಸ್ತ್ವಾತ್ವಷ್ಟೃದೈವತ್ಯಂ ತ್ವಾಷ್ಟ್ರೇಂದ್ರೇ ಸುರವರ್ಧಕಂ ||**

ಚಿತ್ರಾ, ತ್ವಷ್ಟೃದೈವತ್ಯಂ, ತ್ವಾಷ್ಟ್ರೇಂದ್ರಂ, ಸುರವರ್ಧಕಂ ಈ ನಾಲ್ಕು ಶಬ್ದಗಳು ಚಿತ್ರಾ ನಕ್ಷತ್ರದ ಹೆಸರುಗಳು.

**ಸ್ವಾತೀ ಸಮೀರಣೋ ವಾಯುಃ ಪವನಶ್ಚಾನಿಲೋಮರುತ್ ||**

ಸ್ವಾತೀ, ಸಮೀರಣಃ, ವಾಯುಃ, ಪವನಃ, ಅನಿಲಃ, ಮರುತ್ ಈ ಆರು ಶಬ್ದಗಳು ಸ್ವಾತೀ ನಕ್ಷತ್ರದ ಹೆಸರುಗಳು

**ವಿಶಾಖಂ ಶೂರ್ಪಮಿಂದ್ರಾಗ್ನಿಂ ದ್ವಿದೈವತ್ಯಂ ವಿಶಾಖಭಂ ||**

ವಿಶಾಖಾ, ಶೂರ್ಪಂ, ಇಂದ್ರಾಗ್ನಿಂ, ದ್ವಿದೈವತ್ಯಂ, ವಿಶಾಖಭಂ ಈ ಐದು ಶಬ್ದಗಳು ವಿಶಾಖಾ ನಕ್ಷತ್ರದ ಹೆಸರು.

**ಮಿತ್ರಂ ಮೈತ್ರಮನೂರಾಧ ಮನೂರಾಧಸ್ಯ ಸಂಜ್ಞಿಕಂ ||**

ಮಿತ್ರಂ, ಮೈತ್ರಂ, ಅನೂರಾಧಾ ಈ ಮೂರು ಶಬ್ದಗಳು ಅನೂರಾಧಾ ನಕ್ಷತ್ರದ ನಾಮಗಳು

**ಜ್ಯೇಷ್ಠೇಂದ್ರೋ ಪುರುಹೂತಶ್ಚ ಇಂದ್ರಶ್ಶತಮುಖಸ್ತಥಾ ||**

ಜ್ಯೇಷ್ಠಾ, ಇಂದ್ರಃ, ಪುರುಹೂತಃ, ಇಂದ್ರಃಶತಮುಖಃ ಈ ನಾಲ್ಕು ಶಬ್ದಗಳು ಜ್ಯೇಷ್ಠಾ ನಕ್ಷತ್ರದ ಹೆಸರುಗಳು,

**ಮೂಲಂ ನಿಶಾಚರಂಪ್ರೋಕ್ತಮಾಸುರಂ ನಿರೃಋತಿಂತಥಾ ।**
**ನಕ್ತಂಚರಂಕೋಣಪಂ ಚ ರಾಕ್ಷಸಂ ಪಿಶಿತಾಸನಂ ॥**

ಮೂಲಂ, ನಿಶಾಚರಂ, ಅಸುರಂ, ನಿರೃಋತಿ, ನಕ್ತಂಚರಂ, ಕೋಣಪಂ, ರಾಕ್ಷಸಂ, ಪಿಶಿತಾಸನಂ ಈ ಎಂಟು ಶಬ್ದಗಳು ಮೂಲಾ ನಕ್ಷತ್ರದ ಹೆಸರುಗಳು

**ಪೂರ್ವಾಷಾಢಾ ಜಲಂತೋಯಮುದಕಂಚಾಪಂಏವ ಚ ॥**

ಪೂರ್ವಾಷಾಢಾ, ಜಲಂ, ತೋಯಂ, ಉದಕಂ, ಆಪಃ ಈ ಐದು ಶಬ್ದಗಳು ಪೂರ್ವಾಷಾಢಾ ನಕ್ಷತ್ರದ ಹೆಸರುಗಳು.

**ಉತ್ತರಾಷಾಢವಿಶ್ವಂಚ ಅಭಿಜಿದ್ವಾಪ್ರಕಾಶಕಂ ॥**

ಉತ್ತರಾಷಾಢ, ವಿಶ್ವಂ ಈ ಎರಡು ಶಬ್ದಗಳು ಉತ್ತರಾಷಾಢಾ ನಕ್ಷತ್ರದ ಹೆಸರುಗಳು. ಅಭಿಜಿತ್, ಅಪ್ರಕಾಶಕಂ ಈ ಶಬ್ದಗಳು ಅಭಿಜಿತ್ ನಕ್ಷತ್ರದ ಹೆಸರುಗಳು

**ಶ್ರವಣಂ ವೈಷ್ಣವಂ ಶ್ರೀಶಂ ಶ್ರೀಕಾಂತಮುರಜಿದ್ಧನಂ ॥**

ಶ್ರವಣಂ, ವೈಷ್ಣವಂ, ಶ್ರೀಕಾಂತಂ, ಮುರಜಿತ್, ಧನಂ ಈ ಐದು ಶಬ್ದಗಳು ಶ್ರವಣ ನಕ್ಷತ್ರದ ಹೆಸರುಗಳು.

**ಶ್ರವಿಷ್ಠಾ ಚ ಧನಿಷ್ಠಾ ಚ ವಸುರ್ವಾಸವ ಏವಚ ॥**

ಶ್ರವಿಷ್ಠಾ, ಧನಿಷ್ಠಾ, ವಸುಃ, ವಾಸವಃ ಈ ನಾಲ್ಕು ಶಬ್ದಗಳು ಧನಿಷ್ಠಾ ನಕ್ಷತ್ರದ ಹೆಸರುಗಳು.

**ಪ್ರಾಚೇತಸೋ ಜಲನಿಧಿಶ್ಶತತಾರಶ್ಚ ವಾರುಣಃ ॥**

ಪ್ರಾಚೇತಸಃ, ಜಲನಿಧಿಃ, ಶತತಾರಃ, ವಾರುಣಃ ಈ ನಾಲ್ಕು ಶಬ್ದಗಳು ಶತಭಿಷಕ್ ನಕ್ಷತ್ರದ ಹೆಸರುಗಳು

**ಅಜೈಕಪಾತ್ಪ್ರೋಷ್ಠಪದಾ ಪೂರ್ವಾಭಾದ್ರಾಪದಾತಥಾ ॥**

ಅಜೈಕಪಾತ್, ಪ್ರೋಷ್ಠಪದಾ, ಪೂರ್ವಾಭಾದ್ರಪದಾ ಈ ಮೂರು ಪೂರ್ವಾಭಾದ್ರಾ ನಕ್ಷತ್ರದ ನಾಮಗಳು.

**ಉತ್ತರಾಭಾದ್ರಕಂ ಚೈವ ಅಹಿರ್ಬುಧ್ನಿ ನಿಶಾಮುಖಂ ॥**

ಉತ್ತರಾಭಾದ್ರಕಂ, ಅಹಿರ್ಬುಧ್ನಿ, ನಿಶಾಮುಖಂ ಈ ಮೂರು ಉತ್ತರಾಭಾದ್ರಾ ನಕ್ಷತ್ರದ ನಾಮಗಳು.

**ರೇವತೀಪೌಷ್ಣ ಇತ್ಯಾಹುರಂತ್ಯಃ ಪೂಷಾತಥೈವಚ ||**

ರೇವತಿ, ಪೌಷ್ಣಃ, ಅಂತ್ಯಃ, ಪೂಷಾ ಈ ನಾಲ್ಕು ರೇವತಿ ನಕ್ಷತ್ರದ ಹೆಸರುಗಳು.

ನಕ್ಷತ್ರ ನಿಘಂಟು ಸಂಪೂರ್ಣಂ

---

# ರಾಶಿ ನಿಘಂಟು

**ಅಜಾಕ್ರಿಯಾಖ್ಯಾಗಬಸ್ತಾ ತೂಬರಾಜಿಶ್ವಭೇಷಜೀ |**
**ಮೇಷಮಾದ್ಯಾಕ್ರಿಯಾಬಸ್ತಾಭಾಗೀವಾಗೀರಯಸ್ತಥಾ ||**

ಅಜ, ಕ್ರಿಯಂ, ಭಾಗಃ, ಬಸ್ತಾ, ತೂಬರಃ, ವಿಶ್ವ, ಭೇಷಜೀ, ಮೇಷಃ, ಅದ್ಯಃ, ಕ್ರಿಯಃ, ಭಾಗೀ, ವಾಗೀ, ಅಯಃ ಈ ಹನ್ನೊಂದು ಶಬ್ದಗಳು ಮೇಷ ರಾಶಿಯ ಹೆಸರು.

**ವೃಷಭಸ್ತಾ ಉರುಗೌಶ್ಚವೃಷಉಕ್ಷಾ ತಥೈವಚ |**
**ಅನಡ್ವಾನ್ಸೌರಭೇಯಶ್ಚ ದೂರಕ್ಷೋಭೀವೃಷಾಹ್ವಯಃ ||**

ವೃಷಭಃ, ತಾವುರುಃ, ಗೌಃ, ವೃಷಃ, ಉಕ್ಷಾ, ಅನಡ್ವಾನ್, ಸೌರ ಭೇಯಃ, ದೂರಕ್ಷೋಭೀ ಈ ಎಂಟೂ ವೃಷಭರಾಶಿಯ ಹೆಸರುಗಳು.

**ಮಿಥುನಂ ಯಮಳಂ ಯುಗ್ಮಂ ನೃಯುಗ್ಮಂಚ ಯುಗಂತಥಾ||**

ಮಿಥುನಂ, ಯಮಳಂ, ಯುಗ್ಮಂ, ನೃಯುಗ್ಮಂ, ಯುಗಂ ಈ ಐದು ಮಿಥುನರಾಶಿಯ ಹೆಸರುಗಳು.

**ಕುಳೀರ ಕರ್ಕಿ ಕಟಕಃ ಕರ್ಕಿಣೀ ನಿಚಳೀಝುಮಾರ್ನ ||**

ಕುಳೀರಃ, ಕರ್ಕೀ, ಕಟಕಃ, ಕರ್ಕಿಣಿ, ನೀಚಳಿ, ಝುಮಾರ್ನ ಈ ಆರು ಕಟಕರಾಶಿಯ ನಾಮಗಳು.

**ಸಿಂಹೋಮೃಗಾರಿರ್ಮೃಗರಾಟ್ ಮೃಗೇಂದ್ರೋಮೃಗನಾಯಕಃ|**
**ಹರಿಃ ಪಂಚಾನನೋ ರಾಜಾ ಲೇಯೋ ಕಂಠೀರವಸ್ತಥಾ ||**

ಸಿಂಹಃ, ಮೃಗಾರಿಃ, ಮೃಗರಾಟ್, ಮೃಗೇಂದ್ರಃ, ಮೃಗನಾಯಕಃ, ಹರಿಃ, ಪಂಚಾನನಃ, ರಾಜಾ, ಲೇಯಃ, ಕಂಠೀರವಃ ಈ ಹತ್ತು ಶಬ್ದಗಳು ಸಿಂಹರಾಶಿಯ ಹೆಸರುಗಳು

**ಅಂಗನಾಸ್ತ್ರೀವಧೂಃ ಕನ್ಯಾಪಾರ್ಷೇಯಂ ಕನ್ಯಕಾಬಲಾ ||**

ಅಂಗನಾ, ಸ್ತ್ರೀ, ವಧೂಃ, ಕನ್ಯಾ, ಪಾರ್ಷಾ, ಕನ್ಯಕಾ, ಅಬಲಾ ಈ ಏಳು ಕನ್ಯಾರಾಶಿಯ ಹೆಸರುಗಳು.

**ತುಲಾತೌಳಿವಣಿಗ್ಜೂಕಃ ತುಲಾಭೃದ್ಘಟಿ ಸಂಜ್ಞಿಕಃ ||**

ತುಲಾ, ತೌಳೀ, ವಣಿಕ್, ಜೂಕಃ, ತುಲಾಭೃತ್, ಘಟ ಈ ಆರು ತುಲಾರಾಶಿಯ ಹೆಸರುಗಳು.

**ಅಳಿಸ್ಸರೀಸೃಪಃ ಕೌರ್ಪಿ ಕೀಟೋ ವೃಶ್ಚಿಕವಾಚಕಃ ||**

ಅಳಿಃ, ಸರೀಸೃಪಃ, ಕೌರ್ಪಿಃ, ಕೀಟಃ ಈ ನಾಲ್ಕು ಶಬ್ದಗಳು ವೃಶ್ಚಿಕ ರಾಶಿಯ ಹೆಸರುಗಳು.

**ಶಾರ್ಙ್ಗಂ ಶರಾಸನಂಪ್ರೋಕ್ತಂ ತೌಕ್ಷಿಕಂ ಮಾರ್ಗಣಾಸನಂ |**
**ಚಾಪತೂಣೀರಬಾಣಂ ಚ ಧನುಃ ಕೋದಂಡಕಾರ್ಮುಕಮ್ ||**

ಶಾರ್ಙ್ಗಂ, ಶರಾಸನಂ, ತೌಕ್ಷಿಕಂ, ಮಾರ್ಗಣಾಸನಂ, ಚಾಪಂ, ತೂಣೀರಂ, ಬಾಣಃ, ಧನುಃ, ಕೋದಂಡಂ, ಕಾರ್ಮುಕಂ ಈ ಹತ್ತು ಶಬ್ದ ಗಳು ಧನುರ್ರಾಶಿಯ ಹೆಸರುಗಳು

**ಮಕರಸ್ಯಾನ್ಮೃಗೋನಕ್ರಶ್ಚಾಲೋಕೇಕಶ್ಚ ಕಥ್ಯತೆ ||**

ಮಕರಃ, ಮೃಗಃ, ಆಲೋಕೇಕಃ ಈ ಮೂರು ಮಕರರಾಶಿಯ ಹೆಸರುಗಳು.

**ಕುಂಭೋ ಘಟೋ ಜಲಧರೋ ಹೃದ್ರೋಗ ಇತಿಕೀರ್ತಿತಾಃ ||**

ಕುಂಭಃ, ಘಟಃ, ಜಲಧರಃ, ಹೃದ್ರೋಗಃ ಈ ನಾಲ್ಕು ಕುಂಭರಾಶಿಯ ಹೆಸರುಗಳು.

**ಮೀನಾಂತ್ಯೋನಿಮಿಷೋಮತ್ಸ್ಯೋರ್ಝುಷಶ್ಚಾವಾರಿ**
**ಜೋಂಡಜಃ |**
**ಜಲಜೋ ಪೃಥುರೋಮಾ ಚ ಮೀನಸಂಜ್ಞಾ ಪ್ರಕೀರ್ತಿತಾಃ ||**

ಮೀನಃ, ಅಂತ್ಯಃ, ಅನಿಮಿಷಃ, ಮತ್ಸ್ಯಃ, ಝಷಃ, ವಾರಿಜಃ, ಅಂಡಜಃ, ಜಲಜಃ, ಪೃಥುರೋಮಾ ಈ ಒಂಭತ್ತು ಶಬ್ದಗಳು ಮೀನ ರಾಶಿಯ ಹೆಸರುಗಳು.

ರಾಶಿ ನಿಘಂಟು ಸಂಪೂರ್ಣಂ

---

# ಗ್ರಹ ನಿಘಂಟು

**ಆದಿತ್ಯೋರ್ಕ ರವಿರ್ಭಾನುರ್ಭಾಸ್ಕರಶ್ಚ ದಿವಾಕರಃ |**
**ಮಾರ್ತಾಂಡಸ್ಸವಿತಾಹೇಳಿಸ್ತೀಕ್ಷ್ಣಾಂಶುರ್ಮಿಹಿರೋ ರವಿಃ ||**

ಆದಿತ್ಯಃ, ಅರ್ಕಃ, ರವಿಃ, ಭಾನುಃ, ಭಾಸ್ಕರಃ, ದಿವಾಕರಃ, ಮಾರ್ತಾಂಡಃ, ಸವಿತಾಹೇಳಿಃ, ತೀಕ್ಷ್ಣಾಂಶುಃ, ಮಿಹಿರಃ ಈ ಹನ್ನೊಂದು ಸೂರ್ಯಗ್ರಹದ ಹೆಸರುಗಳು

**ಚಂದ್ರಶ್ಶಶಿ ಶಶಾಂಕಶ್ಚ ವಿಧುಸ್ಸೋಮೋ ನಿಶಾಕರಃ |**
**ಶೀತಾಂಶುರುಡುನಾಥಶ್ಚ ಇಂದುಶ್ಚಂದ್ರಮಸೋವಿಧುಃ ||**

ಚಂದ್ರಃ, ಶಶೀ, ಶಶಾಂಕಃ, ವಿಧುಃ, ಸೋಮಃ, ನಿಶಾಕರಃ, ಶೀತಾಂಶು, ಉಡುನಾಥಃ, ಇಂದುಃ ಈ ಒಂಭತ್ತು ಶಬ್ದಗಳು ಚಂದ್ರಗ್ರಹದ ನಾಮಗಳು.

**ಆರೋವಕ್ರೋಮಹೀಜಶ್ಚ ರುಧಿರೋ ರಕ್ತಯೇವಚ |**
**ಅಂಗಾರಕಃಕುಜೋಭೌಮೋ ಲೋಹಿತಾಂಗೋಮಹೀಸುತಃ||**

ಆರಃ, ವಕ್ರಃ, ಮಹಿಜಃ, ರುದಿರಃ, ರಕ್ತಃ, ಅಂಗಾರಕಃ, ಕುಜಃ, ಭೌಮಃ, ಲೋಹಿತಾಂಗಃ, ಮಹೀಸುತಃ ಮತ್ತು ಕ್ರೂರದೃಕ್, ಅವನೇಯಃ ಈ ಹನ್ನೆರಡು ಕುಜಗ್ರಹದ ಹೆಸರುಗಳು.

**ಸೌಮ್ಯೋವಿಟ್‌ಜ್ಞೋಬುಧೋಹೇಮ |**
**ಸ್ಸೋಮಜೋ ಬೋಧನಃ ಕ್ರಮೇತ್ ||**

ಸೌಮ್ಯಃ, ವಿಟ್, ಜ್ಞಃ, ಬುಧಃ, ಹೇಮ, ಸೋಮಜಃ, ಬೋಧನಃ ಈ ಏಳು ಬುಧಗ್ರಹದ ಹೆಸರುಗಳು.

**ಜೀವಆಂಗೀರಸೋವಾಚಸ್ಪತಿಶ್ಚಿತ್ರಶಿಖಂಡಿಜಃ |**
**ಆರ್ಯೋಬೃಹಸ್ಪತಿಸ್ಸೂರಿರ್ವಾಗೀಶೋವಚಸಾಂಪತಿಃ ||**

ಜೀವಃ, ಆಂಗೀರಸಃ, ವಾಚಸ್ಪತಿಃ, ಚಿತ್ರಶಿಖಂಡಿಜಃ, ಆರ್ಯಃ, ಬೃಹಸ್ಪತಿಃ, ಸೂರಿಃ, ವಾಗೀಶ, ವಚನಾಂಪತಿಃ ಈ ಒಂಭತ್ತು ಶಬ್ದಗಳು ಬೃಹಸ್ಪತಿಯ ಹೆಸರುಗಳು.

**ಶುಕ್ರೋ ಭೃಗು ಭೃಗುಸುತಸ್ತ್ವಪ್ಸುಜಶ್ಚಶಿತಶ್ಚಸಃ |**
**ಉಶನಾದೈತ್ಯಪೂಜ್ಯಶ್ಚ ಕಾವ್ಯಃ ಕವಿರಿತಿಸ್ಮೃತಃ ||**

ಶುಕ್ರಃ, ಭೃಗು, ಭೃಗುಸುತಃ, ಅಪ್ಸುಜಃ, ಸಿತಃ, ಉಶನಾಃ, ದೈತ್ಯಪೂಜ್ಯಃ, ಕಾವ್ಯಃ, ಕವಿಃ, ಈ ಒಂಭತ್ತು ಶಬ್ದಗಳು ಶುಕ್ರಗ್ರಹದ ಹೆಸರುಗಳು

**ಕೋಣೋ ಮಂದಶ್ಶನಿಃ ಕೃಷ್ಣ ಸೂರ್ಯಪುತ್ರೋ ಯಮಶ್ಚಸಃ |**
**ಪಂಗುಶ್ಶನೈಶ್ಚರಸ್ಸೌರಿಃ ಕಾಲಚ್ಛಾಯಾಸುತಶ್ಚಸಃ ||**

ಕೋಣಃ, ಮಂದಃ, ಶನಿಃ, ಕೃಷ್ಣಃ, ಸೂರ್ಯಪುತ್ರಃ, ಯಮಃ, ಪಂಗುಃ, ಶನೈಶ್ಚರಃ, ಸೌರಿಃ, ಕಾಲಃ, ಛಾಯಾಸುತಃ ಈ ಹನ್ನೊಂದು ಶನಿಗ್ರಹದ ನಾಮಗಳು

**ರಾಹುಸ್ತಮಸ್ಸುರೋಗಶ್ಚಸ್ವರ್ಭಾನುಶ್ಚವಿಧುಂತುದಃ |**
**ಪಾತುಶ್ಚ ಸೈಂಹಿಕೇಯಶ್ಚ ಭುಜಗಾಖ್ಯ ಇತಿಸ್ಮೃತಃ ||**

ರಾಹುಃ, ತಮಃ, ಸುರೋಗಃ, ಸ್ವರ್ಭಾನುಃ, ವಿಧುಂತುದಃ, ಪಾತುಃ, ಸೈಂಹಿಕೇಯಃ, ಭುಜಗಾಖ್ಯಃ ಈ ಎಂಟು ರಾಹುಗ್ರಹದ ಹೆಸರುಗಳು.

**ಕೇತುಶ್ಶಿಖಿಧ್ವಜೋಧೂಮ್ರ ಉತ್ಪಾತೋಬಹುರೂಪಕೃತ್ |**
**ಶಿರೋಹೀನೋಘೋರರೂಪಶ್ಚಿತ್ರವರ್ಣಸ್ಸುಕೇತವಃ ||**

ಕೇತುಃ, ಶಿಖಿ, ಧ್ವಜಃ, ಧೂಮ್ರಃ, ಉತ್ಪಾತಃ, ಬಹುರೂಪಕೃತ್ಃ, ಶಿರೋಹೀನಃ, ಘೋರರೂಪಃ, ಚಿತ್ರವರ್ಣಃ, ಸುಕೇತುಃ, ಈ ಹತ್ತು ಶಬ್ದಗಳು ಕೇತುಗ್ರಹದ ಹೆಸರುಗಳು.

ಗ್ರಹ ನಿಘಂಟು ಸಂಪೂರ್ಣಂ.

# ಸ್ಥಾನ ನಿಘಂಟು

**ಕ್ಷಿತೀಶೋಽಪ್ಯುದಯೋರಾಶಿರ್ಲಗ್ನಂ ಹೋರೋದಯಸ್ತನುಃ ।**
**ಕಲ್ಯೋವಿಲಗ್ನಮಾತ್ಮಾ ಚ ಭಾವೋಯಂಪ್ರಥಮೋಭವೇತ್ ॥**

ಕ್ಷಿತೀಶಃ, ಉದಯಃ, ರಾಶಿಃ, ಲಗ್ನಂ, ಹೋರೋದಯಃ, ತನುಃ, ಕಲ್ಯಃ, ವಿಲಗ್ನಂ, ಆತ್ಮಾ ಈ ಶಬ್ದಗಳು ಲಗ್ನಭಾವದ ಹೆಸರುಗಳು

**ದ್ವಿತೀಯಂ ಧನವಾಗ್ವಿತ್ತಂ ಕುಟುಂಬಂ ನೇತ್ರಸಂಜ್ಞಿಕಂ ॥**

ದ್ವಿತೀಯಂ, ಧನಂ, ವಾಕ್, ವಿತ್ತಂ, ಕುಟುಂಬಂ, ನೇತ್ರಸಂಜ್ಞಿಕಂ ಈ ಆರು ದ್ವಿತೀಯಭಾವದ ಹೆಸರುಗಳು.

**ತೃತೀಯಂ ವಿಕ್ರಮಭ್ರಾತೃ ದುಶ್ಚಿಕ್ಯಂಸಹಜಸ್ತಥಾ ॥**

ತೃತೀಯಂ, ವಿಕ್ರಮಃ, ಸಹಜಃ, ಭ್ರಾತಾ, ದುಶ್ಚಿಕ್ಯಂ ಈ ಐದು ತೃತೀಯಭಾವದ ಹೆಸರುಗಳು.

**ಚತುರ್ಥಂ ಹಿಬುಕಂ ವೇಶ್ಮ ಬಂಧುರಬ್ಧಿ ಸುಖಂ ಜಲಂ ।**
**ಪಾತಾಳಂ ಜನನೀಮಾತ್ರ ಉದಕಂ ಚ ವಯೋಽಮೃತಂ ॥**

ಚತುರ್ಥಂ, ಹಿಬುಕಂ, ವೇಶ್ಮಃ, ಬಂಧುಃ, ಅಬ್ಧಿಃ, ಸುಖಂ, ಜಲಂ, ಪಾತಾಳಂ, ಜನನೀ, ಮಾತಾ, ಉದಕಂ, ವಯಃ ಈ ಹನ್ನೆರಡು ಚತುರ್ಥಭಾವದ ಹೆಸರುಗಳು.

**ಪಂಚಮಂ ತನಯೋಮಂತ್ರೀಹ್ಯಾತ್ಮಾ ಚ ಸುತ ಉಚ್ಯತೇ ॥**

ಪಂಚಮಂ, ತನಯಃ, ಮಂತ್ರೀ, ಆತ್ಮಾ, ಸುತಃ ಈ ಐದು ಪಂಚಮಭಾವದ ಹೆಸರುಗಳು.

**ಷಷ್ಠಮಂ ರಿಪುಯಿತ್ಯಾಹುಃ ಕ್ಷತಇತ್ಯಭಿಧೀಯತೇ ॥**

ಷಷ್ಠಮಂ, ರಿಪು, ಋಣಂ, ಕ್ಷತ ಈ ನಾಲ್ಕು ಷಷ್ಠಭಾವದ ಹೆಸರುಗಳು

**ಸಪ್ತಮಂದ್ಯೂನಮಸ್ತಂಚ ದ್ಯೂತಂಚಮದನಸ್ಮರಃ ।**
**ಕಾಮೋವಿವಾಹೋಜಾಮಿತ್ರಂ ಭಾರ್ಯ್ಯಾತಿವಿನಿದರ್ಶಿತಂ ॥**

ಸಪ್ತಮಂ, ದ್ಯೂನಂ, ಅಸ್ತಂ, ದ್ಯೂತಂ, ಮದನಃ, ಸ್ಮರಃ, ಕಾಮಃ, ವಿವಾಹಃ, ಜಾಮಿತ್ರಂ, ಭಾರ್ಯಾ ಈ ಹತ್ತು ಸಪ್ತಮಭಾವದ ಹೆಸರುಗಳು

**ಅಷ್ಟಮಂ ನಿಧನಂ ರಂಧ್ರಂ ಪಾಪಮಾಯುಮೃತೀರುಜಾ ॥**

ಅಷ್ಟಮಂ, ನಿಧನಂ, ರಂಧ್ರಂ, ಪಾಪಂ, ಆಯುಃ, ಮೃತಿಃ, ರುಜಾ ಈ ಏಳು ಅಷ್ಟಮಭಾವದ ಹೆಸರುಗಳು

**ನವಮಂ ಚ ತ್ರಿಕೋಣಂ ಚ ಸುಕೃತಂ ಗುರುಭಾಗ್ಯಕಂ ।**
**ಪಿತೃ ಜ್ಞಾನೋದಯೋಭಕ್ತಿರ್ದೇವತೋಪಾಸನಸ್ತಥಾ ॥**

ನವಮಂ, ತ್ರಿಕೋಣಂ, ಸುಕೃತಂ, ಗುರು, ಭಾಗ್ಯಂ, ಪಿತಾ, ಜ್ಞಾನೋದಯಃ, ಭಕ್ತಿಃ, ದೇವತೋಪಾಸನಂ ಈ ಒಂಭತ್ತು ನವಮ ಭಾವದ ಹೆಸರುಗಳು

**ದಶಮೋಮಾನಆಜ್ಞಾಪಿ ಕರ್ಮಸ್ಥಾನಮಿತಿಸ್ಮೃತಃ ।**
**ವೃತ್ತಿಕರ್ಮಾಭಿಧಾನಂ ಚ ವಜ್ರೀಸಂಜ್ಞಯ ಉಚ್ಯತೇ ॥**

ದಶಮಃ, ಮಾನಃ, ಆಜ್ಞಾ, ಕರ್ಮ, ಸ್ಥಾನಂ, ವೃತ್ತಿಃ, ಕರ್ಮಾಭಿಧಾನಂ, ವಜ್ರೀ, ಸಂಜ್ಞಯ ಈ ಒಂಭತ್ತು ದಶಮಭಾವದ ನಾಮಗಳು.

**ಏಕಾದಶೋಭವೇಲ್ಲಾಭ ಆಯುಶ್ಚ ವಿಜಯಾಶುಭಃ ॥**

ಏಕಾದಶಃ, ಲಾಭಃ, ಆಯುಃ, ವಿಜಯಾ, ಶುಭಃ ಈ ಐದು ಏಕಾದಶಭಾವದ ನಾಮಗಳು

**ದ್ವಾದಶಂ ಚ ವ್ಯಯಸ್ಥಾನಂ ಪಾಪಸ್ಥಾನಂ ಪ್ರಶಸ್ಯತೇ ॥**

ದ್ವಾದಶಂ, ವ್ಯಯಸ್ಥಾನಂ, ಪಾಪಸ್ಥಾನಂ ಈ ಮೂರು ದ್ವಾದಶಭಾವದ ಹೆಸರುಗಳು.

ಸ್ಥಾನ ನಿಘಂಟು ಸಂಪೂರ್ಣಂ

---

## ಭಾವ ನಿಘಂಟು

**ಲಗ್ನಂಸ್ಯಾದುದಯೋರಾಶಿಃ ಕಲ್ಯಂ ಹೋರೋದಯಸ್ತನುಃ ॥**
**ಆದ್ಯೋದೇಹಶ್ಶರೀರಂಚ ವಿಲಗ್ನಾಧಾರಮೂರ್ತಯಃ ॥**
**ಸ್ವಭಾವೋಜನ್ಮಚಾತ್ಮಾಚ ಭಾವೋಯಂಪ್ರಥಮಸ್ಸ್ಮೃತಃ ॥**

ಲಗ್ನಂ, ಉದಯಃ, ರಾಶಿಃ, ಕಲ್ಯಂ, ಹೋರಾ, ಉದಯಃ, ತನುಃ, ಆದ್ಯಃ, ದೇಹಃ, ಶರೀರಂ, ವಿಲಗ್ನಂ, ಆಧಾರಃ, ಮೂರ್ತಯಃ, ಸ್ವಭಾವಃ, ಜನ್ಮ, ಆತ್ಮಾ ಈ ಹದಿನಾರು ಶಬ್ದಗಳು ಲಗ್ನಭಾವದ ಹೆಸರುಗಳು.

**ದ್ವಿತೀಯಂ ದ್ರವಿಣಂಸ್ವಾರ್ಥೌ ಕುಟುಂಬೋಧನವೇಶ್ಮಕಂ ||**
**ಸತ್ಯವಾಚಿಕವಾಕ್‌ಸ್ಥಾನೇ ಯುಗ್ಮಂ ಕೋಶೋ ಹಿರಣ್ಯಕಂ |**
**ಕರ್ಣಃ ಪ್ರಯಾಣನೇತ್ರಂಚ ಮುಖಂ ದಕ್ಷಿಣನೇತ್ರಕಂ ||**
**ಲೋಹಂ ಮುಕ್ತಾಫಲಂ ಸ್ವರ್ಣಂ ವಿದ್ಯಾಭುಕ್ತಿಸ್ತುಕಂಬಳಃ |**
**ರತ್ನಂಧಾತುಶ್ಚವಿತ್ತಂಚ ಭಾವೋಯಂಚ ದ್ವಿತೀಯಕಃ ||**

ದ್ವಿತೀಯಂ, ದ್ರವಿಣಂ, ಸ್ವಂ, ಅರ್ಥಃ, ಕುಟುಂಬಃ, ಧನವೇಶ್ಮ, ಸತ್ಯವಾಚಿಕಂ, ವಾಕ್‌ಸ್ಥಾನಂ, ಯುಗ್ಮಂ, ಕೋಶಃ, ಹಿರಣ್ಯಕಂ, ಕರ್ಣಃ, ಪ್ರಯಾಣಂ, ನೇತ್ರಂ, ಮುಖಂ, ದಕ್ಷಿಣನೇತ್ರಂ, ಲೋಹಂ, ಮುಕ್ತಾಫಲಂ, ಸ್ವರ್ಣಂ, ವಿದ್ಯಾ, ಭುಕ್ತಿಃ, ಕಂಬಳಂ, ರತ್ನಂ, ಧಾತುಃ, ವಿತ್ತಂ ಈ ಇಪ್ಪತ್ತೈದು ದ್ವಿತೀಯಭಾವದ ನಾಮಗಳು

**ತೃತೀಯಂ ಭಗಿನೀ ಭ್ರಾತಾ ಸಹಜಶ್ಚಾಗ್ರಜೋನುಜಃ |**
**ಸಹಭಾವೋಕ್ರುಧಾಯೋಗಃ ದಾಸೀದಾಸ್ಯಾದಿವರ್ಗಕಂ ||**
**ಸತ್ವಂ ಪರಾಕ್ರಮಃ ಕೋಪಃ ರೌದ್ರಂ ಶಾಂತಮುಪಾಯಕಂ |**
**ಕಾರ್ಯಸಂಧಾನಮಿತ್ರೇ ಚ ಸ್ವರೋ ಗರಳಭಕ್ಷಣಂ ||**
**ಆಪೋಕ್ಲೀಬಂದರಕ್ಷೇತ್ರಂ ಭಾವೋಯಂ ಚ ತೃತೀಯಕಂ ||**

ತೃತೀಯಂ, ಭಗಿನೀ, ಭ್ರಾತಾ, ಸಹಜ, ಅಗ್ರಜ, ಅನುಜ, ಸಹಭಾವ, ಕ್ರುಧಾರಯೋಗ, ದಾಸೀ, ದಾಸ್ಯಾದಿವರ್ಗಃ, ಸತ್ವಂ, ಪರಾಕ್ರಮಃ, ಕೋಪಃ, ರೌದ್ರಂ, ಶಾಂತಂ, ಉಪಾಯಕಂ, ಕಾರ್ಯಸಂಧಾನಂ, ಮಿತ್ರಃ, ಸ್ವರ, ಗರಳಭಕ್ಷಣಂ, ಆಪೋಕ್ಲೀಬಂ, ದರಕ್ಷೇತ್ರಂ ಈ ಇಪ್ಪತ್ತೊಂದು ತೃತೀಯ ಭಾವದ ಹೆಸರುಗಳು.

**ಚತುರ್ಥಂ ಜಲ ಪಾತಾಳ ಬಂಧುಶ್ಚ ಹಿಬುಕಂ ಸುಖಂ ||**
**ವಾಪೀ ಕೂಪ ತಟಾಕಶ್ಚ ಪ್ರವಾಹೋದ್ವಾರಮೇದಿನೀ |**
**ಪುಸ್ತಕಂ ಗೃಹ ಶಯ್ಯಾ ಚ ಪಶುಸಸ್ಯಂಚಧಾನ್ಯಕಂ ||**
**ವಿದ್ಯಾವಾಹನಕಾರ್ಯೇಚ ಮಾತೃಷ್ವೌಷಧಮಂತ್ರಕಂ |**
**ವಿವಾದಸಾಕ್ಷಿಪೌರಾಣಂ ಭಾವೋಯಂ ಚ ಚತುರ್ಥಕಂ ||**

ಚತುರ್ಥಂ, ಜಲಂ, ಪಾತಾಳಂ, ಬಂಧುಃ, ಹಿಬುಕಂ, ಸುಖ, ವಾಪೀ, ಕೂಪಃ, ತಟಾಕಃ, ಪ್ರವಾಹಃ, ದ್ವಾರಂ, ಮೇದಿನೀ, ಪುಸ್ತಕಂ,

ಗೃಹಂ, ಶಯ್ಯಾ, ಪಶುಃ, ಸಸ್ಯಂ, ಧಾನ್ಯಕಂ, ವಿದ್ಯಾ, ವಾಹನಂ, ಕಾರ್ಯಂ, ಮಾತಾ, ಔಷಧಂ, ಮಂತ್ರಕಂ, ವಿವಾದಸಾಕ್ಷಿ, ಪೌರಾಣಂ ಈ ಇಪ್ಪತ್ತಾರು ಚತುರ್ಥಭಾವದ ಹೆಸರುಗಳು

**ಪಂಚಮಂ ಮಂತ್ರಿ ಪುತ್ರಶ್ಚ ತನಯೋಃಪ್ರತಿಭಾತ್ಮಜಃ ।**
**ಪಣಾಪರಶ್ಚಶ್ಯಕ್ತಿಶ್ಚ ಭಾವೋಽಯಂ ಪಂಚಮಸ್ಮೃತಃ ॥**

ಪಂಚಮಂ, ಮಂತ್ರೀ, ಪುತ್ರಃ, ತನಯಃ, ಪ್ರತಿಭಾ, ಆತ್ಮಜಃ, ಪಣಾಪರಃ, ಶಕ್ತಿಃ ಈ ಎಂಟು ಪಂಚಮಭಾವದ ಹೆಸರುಗಳು.

**ಷಷ್ಠೋಽ ವೈರಿ ರಿಪುಶ್ಶತ್ರುಃ ಕ್ಷತಾರೀಃ ರೋಗಭೀತಿದಂ ।**
**ಜ್ಞಾತಿಶಸ್ತ್ರಾಪಣಂ ಪಾಪಂ ಭಾವೋಽಯಂ ಷಷ್ಠಮಸ್ಮೃತಃ ॥**

ಷಷ್ಠಃ, ವೈರೀ, ರಿಪುಃ, ಶತ್ರುಃ, ಕ್ಷತಃ, ರೋಗಃ, ಭೀತಿಃ, ಜ್ಞಾತಿಃ, ಶಸ್ತ್ರ, ಆಪಣಂ ಈ ಹನ್ನೆರಡು ಶಬ್ದಗಳು ಷಷ್ಠಭಾವದ ಹೆಸರುಗಳು

**ಜಾಮಿತ್ರಂಜಾಕಮಸ್ತಂಚ ಕಾಮೋಭಾರ್ಯೇತಿಚಸ್ಮರಃ ।**
**ಕಟಕೋದ್ಯೂತವಾಣಿಜ್ಯೇ ಕ್ರಯವಿಕ್ರಯಸಂಗ್ರಹಃ ॥**
**ಕಳತ್ರಂ ಸೌಖ್ಯವೈವಾಹ ಭೋಗಸ್ಥಾನಂ ಮನೋಹರಂ ।**
**ಆಲಂಕೃತಿಶ್ಚ ಸರ್ವೇಷಾಂ ಭಾವೋಽಯಂ ಸಪ್ತಮಸ್ಮೃತಃ ॥**

ಜಾಮಿತ್ರಂ, ಜಾಕಂ, ಅಸ್ತಂ, ಕಾಮಃ, ಭಾರ್ಯಾ, ಸ್ಮರಃ, ಕಟಕಃ, ದ್ಯೂತಂ, ವಾಣಿಜ್ಯಂ, ಕ್ರಯಃ, ವಿಕ್ರಮಸಂಗ್ರಹಃ, ಕಳತ್ರಂ, ಸೌಖ್ಯಂ, ವೈವಾಹಂ, ಭೋಗಸ್ಥಾನಂ, ಮನೋಹರಂ, ಅಲಂಕೃತಿಃ ಈ ಹದಿನೇಳು ಸಪ್ತಮಭಾವದ ಹೆಸರುಗಳು.

**ಅಷ್ಟಮಂ ನಿಧನಂರಂಧ್ರಂ ಮೃತಿನಾಶಶ್ಚ ನೈಧನಂ ।**
**ಆಯುಷ್ಯಂ ಜೀವನೋಪಾಯಂ ಮೋಕ್ಷೋಲಯನಿವಾರಣೇ॥**
**ಭಕ್ಷ್ಯಭೋಜ್ಯಾದಿನಾಶಶ್ಚ ಭಾವೋಽಯಮಷ್ಟಮಸ್ಮೃತಃ ॥**

ಅಷ್ಟಮಂ, ನಿಧನಂ, ರಂಧ್ರಂ, ಮೃತೀ, ನಾಶಃ, ನೈಧನಂ, ಆಯುಷ್ಯಂ, ಜೀವನೋಪಾಯಂ, ಮೋಕ್ಷಃ, ಲಯನಿವಾರಣಂ, ಭಕ್ಷ್ಯ, ಭೋಜ್ಯಾದಿನಾಶಃ ಈ ಹನ್ನೆರಡು ಶಬ್ದಗಳು ಅಷ್ಟಮಭಾವದ ಹೆಸರುಗಳು.

**ನವಮಂ ತಪದೀಕಂ ಚ ಸುಕೃತಂ ಗುರುಭಾಗ್ಯಕಂ ||**
**ಪಿತೃ ಜ್ಞಾನಂ ದಯಾಭಕ್ತಿರ್ದೇವತೋಪಾಸನಸ್ತಥಾ |**
**ಚಿತ್ರಾನಂದದಥಾಸ್ವಾಮೀ ಭಾವೋಯಂ ನವಮಃಸ್ಮೃತಃ ||**

ನವಮಂ, ತಪದೀಕಂ, ಸುಕೃತಂ, ಗುರುಃ, ಭಾಗ್ಯಕಂ, ಪಿತೃಜ್ಞಾನಂ, ದಯಾಭಕ್ತಿಃ, ದೇವತೋಪಾಸನಂ, ಚಿತ್ರ, ಆನಂದಃ, ಸ್ವಾಮೀ ಈ ಹನ್ನೆರಡು ನವಮಭಾವದ ಹೆಸರುಗಳು.

**ದಶಮಂ ಮಾನಸಂ ಕರ್ಮ ವ್ಯಾಪಾರೋಂಬರಮೇವಚ |**
**ಕಾರ್ಯಂಚವ್ಯೋಮಮಾಕಾಶಃ ಅಜಾಪುಣ್ಯಂಚ ರಾಜ್ಯಕಂ ||**
**ವೀರ್ಯಸ್ಥಾನಂಚ ಸತ್ಕರ್ಮ ಭಾವೋಯಂದಶಮಃಸ್ಮೃತಃ ||**

ದಶಮಂ, ಮಾನಸಂ, ಕರ್ಮಂ, ವ್ಯಾಪಾರಃ, ಅಂಬರಂ, ಕಾರ್ಯಂ, ವ್ಯೋಮಃ, ಆಕಾಶಃ, ಅಜಾ, ಪುಣ್ಯಂ, ರಾಜ್ಯಕಂ, ವೀರ್ಯಂ, ಸತ್ಕರ್ಮಃ ಈ ಹದಿಮೂರು ದಶಮಭಾವದ ಹೆಸರುಗಳು.

**ಏಕಾದಶಂ ಭವೇತ್ಯಾಯುರರ್ಥಲಾಭೋಜಯಸ್ತಥಾ ||**
**ಪೃಷ್ಠಂಸ್ಯಾದಥಪೃಷ್ಟಂ ಚ ಭಾವೋಚ್ಚೈಕಾದಶಸ್ಮೃತಃ ||**

ಏಕಾದಶಂ, ಆಯುಃ, ಅರ್ಥಲಾಭಃ, ಜಯಃ, ಪೃಷ್ಠಂ, ಅಧಃಪೃಷ್ಟಂ ಈ ಆರು ಏಕಾದಶಭಾವದ ಹೆಸರುಗಳು

**ದ್ವಾದಶಾಂತೋವ್ಯಯೋರಿಫ್ಫಃ ಆಪೋಕ್ಲೀಬೋಪವರ್ಗಕೌ |**
**ಲಾಕ್ಷೀಣನಾರಕೋನಾಶೋ ಭಾವೋಯಂ ದ್ವಾದಶಸ್ಮೃತಃ ||**

ದ್ವಾದಶ, ಅಂತ್ಯಃ, ವ್ಯಯಃ, ರಿಫ್ಫಃ, ಆಪೋಕ್ಲೀಬಃ, ಅಪವರ್ಗಃ, ಲಾಕ್ಷೀಣಃ, ನರಕಃ, ನಾಶಃ ಈ ಒಂಭತ್ತು ದ್ವಾದಶಭಾವದ ಹೆಸರುಗಳು.

ಭಾವ ನಿಘಂಟು ಸಂಪೂರ್ಣಂ

---

# ಕಾರಕ ನಿಘಂಟು

**ಆತ್ಮಾಪ್ರಭಾವೋಶಕ್ತಿಶ್ಚ ಪಿತೃಚಿಂತಾರವೇಃಫಲಂ।**

ಆತ್ಮಾ, ಪ್ರಭಾವ, ಶಕ್ತಿ ಇವುಗಳಿಗೆ ಕಾರಕನು ಸೂರ್ಯನು

**ಮನೋಬುದ್ಧಿಃಪ್ರಸಾದಂಚ ಮಾತೃಚಿಂತಾಚ ಚಂದ್ರಮಾಃ ॥**

ಮನಸ್ಸು, ಬುದ್ಧಿ, ಪ್ರಸಾದ, ಮಾತೃಚಿಂತಾ ಇವುಗಳಿಗೆ ಕಾರಕನು ಚಂದ್ರನು.

**ಭ್ರಾತಾಭೃತ್ಯಗಣೋಭೂಮಿರ್ಭೌಮಣೇವವಿಚಿಂತಯೇತ್ ॥**

ಭ್ರಾತೃ, ಭೃತ್ಯಗಣಃ, ಭೂಮಿ, ಇವುಗಳನ್ನು ಅಂಗಾರಕನಿಂದಲೇ ಎಣಿಸತಕ್ಕದ್ದು, ಅಂಗಾರಕನು ಇವುಗಳಿಗೆ ಕಾರಕನು

**ಪ್ರಜ್ಞಾಚ ಕರ್ಮವಿಜ್ಞಾನಂ ಬುಧೇನೈವವಿಚಿಂತಯೇತ್ ॥**

ಪ್ರಜ್ಞಾ, ಕರ್ಮ, ವಿಜ್ಞಾನ ಈ ಮೂರಕ್ಕೂ ಬುಧನೇ ಕಾರಕನು.

**ಗುರುಣಾದೇಹಪುಷ್ಟಿಶ್ಚ ಬುದ್ಧಿ ಪುತ್ರಾರ್ಥಸಂಪದಃ ॥**

ದೇಹಪುಷ್ಟಿ, ಬುದ್ಧಿ, ಪುತ್ರ, ಅರ್ಥಸಂಪತ್ತು ಇವುಗಳಿಗೆ ಗುರು ಕಾರಕನು.

**ಶುಕ್ರೋ ವಿವಾಹಂ ಭಾಗ್ಯಂ ಚ ಭೋಗಸ್ಥಾನಂಚವಾಹನಂ ॥**

ಶುಕ್ರನು ವಿವಾಹ, ಭಾಗ್ಯ, ಭೋಗಸ್ಥಾನ, ವಾಹನ ಇವುಗಳಿಗೆ ಕಾರಕನು

**ಆಯುಷ್ಯಂ ಜೀವನೋಪಾಯಂ ಮರಣಂ ಚ ಶನೈಶ್ಚರಃ ॥**

ಶನೈಶ್ಚರನು ಆಯುಷ್ಯ, ಜೀವನೋಪಾಯ, ಮರಣ ಇವುಗಳಿಗೆ ಕಾರಕನು.

**ತಟಾಕಾರಾಮವಿಶ್ರಾಮಾ ರಾಹೋರ್ಮಾತಾಮಹಂಭವೇತ್ ॥**

ರಾಹುವು ತಟಾಕ, ಉದ್ಯಾನ, ವಿಶ್ರಾಮ, ಮಾತಾಮಹ ಇವುಗಳಿಗೆ ಕಾರಕನು.

**ಕೇತೋಃಪಿತಾಮಹಶ್ಚಿಂತಾ ಬಹುದಾನಶ್ಚಮೋಕ್ಷದಃ ॥**

ಕೇತುವು ಪಿತಾಮಹ, ಚಿಂತಾ, ಬಹುದಾನ, ಮೋಕ್ಷ ಇವುಗಳಿಗೆ ಕಾರಕನು.

ಕಾರಕ ನಿಘಂಟು ಸಂಪೂರ್ಣಂ

# ಅಂಕೆಗಳ ಸಂಜ್ಞಾ ನಿಘಂಟು

**ಶಶೀಸೋಮಶ್ಶಶಾಂಕಶ್ಚ ಇಂದುಶ್ಚಂದ್ರ ಕಳಾನಿಧಿಃ ।**
**ರಾಜಾವಿಧುಸ್ಸುಧಾಂಶುಶ್ಚ ಯಮುಏಕಜನಸ್ತಥಾ ॥**

ಶಶೀ, ಸೋಮ, ಶಶಾಂಕಃ, ಇಂದುಃ, ಚಂದ್ರಃ, ಕಳಾನಿಧಿಃ, ರಾಜಾ ವಿಧುಃ, ಸುಧಾಂಶುಃ, ಯಮಃ, ಏಕಃ, ಜನಃ ಈ ಹನ್ನೆರಡು ಒಂದು ಅಂಕೆಯ ಹೆಸರುಗಳು.

**ಅಕ್ಷೀ ಚಕ್ಷು ಕರಂ ನೇತ್ರಂ ಲೋಚನಂ ಬಾಹು ಕರ್ಣಕಾಃ ।**
**ಪಕ್ಷದೃಷ್ಟಿದ್ವಯಂ ಯುಗ್ಮಂ ಅಂಬಕಾ ನಯನೇಕ್ಷಣೇ ॥**

ಅಕ್ಷಿ, ಚಕ್ಷುಃ, ಕರಂ, ನೇತ್ರಂ, ಲೋಚನಂ, ಬಾಹುಃ, ಕರ್ಣಕಃ, ಪಕ್ಷಃ, ದೃಷ್ಟಿಃ, ದ್ವಯಂ, ಯುಗ್ಮಂ, ಅಂಬಕಾ, ನಯನ, ಈಕ್ಷಣಂ ಈ ಹದಿ ನಾಲ್ಕು ಎರಡೆಂಬ ಸಂಖ್ಯೆಯ ಹೆಸರುಗಳು.

**ವಹ್ನಿರಾಮಶ್ಶಿಖೀಚಾಗ್ನಿಃ ಪಾವಕೋ ದಹನಾನಲೌ ।**
**ಶಂಕರಾಕ್ಷೀಪುರೀಲೋಕಾ ತ್ರೀಣೀಕಾಲೋ ತ್ರಯೋಗುಣಃ॥**

ವಹ್ನಿಃ, ರಾಮಃ, ಶಿಖೀ, ಅಗ್ನಿಃ, ಪಾವಕಃ, ದಹನಃ, ಅನಲಃ, ಶಂಕ ರಾಕ್ಷೀ, ಪುರೀ, ಲೋಕಃ, ತ್ರೀಣೀ, ಕಾಲಃ, ತ್ರಯಂ, ಗುಣಃ ಈ ಹದಿ ನಾಲ್ಕು ಮೂರೆಂಬ ಅಂಕೆಯ ಹೆಸರುಗಳು.

**ಅಬ್ಧಿಸಾಗರಚತ್ವಾರೀವನರಾಶಿಯುಗೋಂಬುಧಿಃ ।**
**ಚತುರ್ವಾರ್ಧಿಗತಿಶ್ಚಾಪಿ ಜಲಧೀನೀರಧಿಸ್ತಥಾ ॥**

ಅಬ್ಧಿಃ, ಸಾಗರಃ, ಚತ್ವಾರೀ, ವನರಾಶಿಃ, ಯುಗಃ, ಅಂಬುಧಿಃ, ಚತುಃ, ವಾರಿಧಿಃ, ಗತಿಃ, ಜಲಧಿಃ, ನೀರಧಿಃ ಈ ಹನ್ನೊಂದು ನಾಲ್ಕರ ಅಂಕೆಯ ಹೆಸರುಗಳು.

**ಇಂದ್ರಿಯಂ ಪಂಚಮಂ ಜ್ಞಾನಂ ಇಷುರ್ಬಾಣಶ್ಚ ಮಾರ್ಗಣಃ ।**
**ಪ್ರೇತೋಭೂತಂ ಶರಃ ಪರ್ವಾ ಪ್ರಾಣಶ್ಚ ವಿಷಯಸ್ತಥಾ ॥**

ಇಂದ್ರಿಯಂ, ಪಂಚಮಂ, ಜ್ಞಾನಂ, ಇಷುಃ, ಬಾಣಃ, ಮಾರ್ಗಣಃ, ಪ್ರೇತಂ, ಭೂತಂ, ಶರಃ, ಪರ್ವಾ, ಪ್ರಾಣ, ವಿಷಯಃ, ಈ ಹನ್ನೆರಡು ಐದರ ಅಂಕೆಯ ಹೆಸರುಗಳು.

**ಶಾಸ್ತ್ರಂ ಷಟ್ ರುಚಿಶ್ಚೈವ ಕಾಲಶ್ಚ ಋತುಸಂಜ್ಞಿಕಂ ।**
**ರಸದ್ರವ್ಯಂಚಕೋಃಶಶ್ಚ ಷಡ್ದರ್ಶನಷಡಾಗವಾ ॥**

ಶಾಸ್ತ್ರಂ, ಷಟ್, ರುಚಿಃ, ಕಾಲಃ, ಋತುಃ, ರಸಃ, ದ್ರವ್ಯಂ, ಕೋಃಶಃ, ಷಟ್, ದರ್ಶನಂ, ಷಡಾಗಮಃ ಈ ಒಂಭತ್ತು ಆರರ ಅಂಕೆಯ ಹೆಸರುಗಳು.

**ಶೈಲೋದ್ರಿದ್ವೀಪವಾಯುಶ್ಚ ಮುನಿಸ್ಸಪ್ತಾಚಲೋಗಿರಿಃ ।**
**ತುರಗಾಶ್ವನಗಾಗೋತ್ರಾ ಮಹೀಂದ್ರ ಋಷಿಸಂಜ್ಞಿಕಃ ॥**

ಶೈಲಃ, ಅದ್ರಿಃ, ದ್ವೀಪಃ, ವಾಯುಃ, ಮುನಿಃ, ಸಪ್ತ, ಅಚಲಃ, ಗಿರಿಃ, ತುರಗಃ, ಅಶ್ವಃ, ನಗಃ, ಗೋತ್ರಃ, ಮಹೀಂದ್ರಃ, ಋಷಿಃ ಈ ಹದಿನಾಲ್ಕು ಏಳರ ಅಂಕೆಯ ಹೆಸರುಗಳು.

**ಅಷ್ಟಮಂ ಗಜಕರ್ಣೀಚ ದಿಗ್ಗಜೋ ದಂತಿ ಹಸ್ತಿಚ ।**
**ಸಾಮಜೋಮತ್ತಮಾತಂಗಃ ದಿಕ್ಪಾಲವಸುವಾರಣಾಃ ॥**

ಅಷ್ಟಮಂ, ಗಜಃ, ಕರ್ಣೀ, ದಿಗ್ಗಜಃ, ದಂತೀ, ಹಸ್ತಿ, ಸಾಮಜಃ, ಮತ್ತಮಾತಂಗಃ, ದಿಕ್ಪಾಲಃ, ವಸುಃ, ವಾರಣಃ ಈ ಹನ್ನೊಂದು ಎಂಟರ ಅಂಕೆಯ ಹೆಸರುಗಳು.

**ನವಮಂ ನವರತ್ನಂಚ ಬ್ರಹ್ಮಾಚ ಕಮಲಾಸನಃ ।**
**ನಿಧಿಗ್ರಹಶ್ಚ ಖಂಡಂಚ ರಂಧ್ರಭಾವಶ್ಚ ಲಬ್ಧಕಃ ॥**

ನವಮಂ, ನವರತ್ನಂ, ಬ್ರಹ್ಮಾ, ಕಮಲಾನನಃ, ನಿಧಿಃ, ಗ್ರಹಃ, ಖಂಡಂ, ರಂಧ್ರಃ, ಭಾವಃ ಈ ಒಂಭತ್ತು ಒಂಭತ್ತರ ಸಂಖ್ಯೆಗೆ ಹೆಸರುಗಳು

**ಆಕಾಶಂ ಗಗನಂ ಶೂನ್ಯಂ ಅಂತರಿಕ್ಷಂ ಮರುತ್ಪಥಂ ॥**

ಆಕಾಶಂ, ಗಗನಂ, ಶೂನ್ಯಂ, ಅಂತರಿಕ್ಷಂ, ಮರುತ್ಪಥಂ ಈ ಐದು ಸೊನ್ನೆಗಳಿಗೆ ಹೆಸರುಗಳು

**ಕಾದಿರ್ನವೋ ಟಾದಿನವಃ ಪಾದಿಪಂಚಶ್ಚಯಾಷ್ಟಕಃ ॥**

ಕಕಾರ ಮೊದಲು ೯ ಅಕ್ಷರಗಳೂ, ಟಕಾರ ಮೊದಲು ೯ ಅಕ್ಷರಗಳೂ, ಪಕಾರ ಮೊದಲು ೫ ಅಕ್ಷರಗಳೂ, ಯಕಾರ ಮೊದಲು ೮ ಅಕ್ಷರಗಳೂ ಅಂಕೆಗಳ ಹೆಸರುಗಳೆಂದು ತಿಳಿಯತಕ್ಕದ್ದು. ಅಂದರೆ ೧-ಕ, ೨-ಖ, ೩-ಗ, ೪-ಘ, ೫-ಙ, ೬-ಚ, ೭-ಛ, ೮-ಜ, ೯-ಝ. ೧-ಟ, ೨-ಠ, ೩-ಡ, ೪-ಢ, ೫-ಣ,

೬-ತ, ೭-ಥ, ೮-ದ, ೯-ಧ ೧-ಪ, ೨-ಫ, ೩-ಬ, ೪-ಭ, ೫-ಮ. ೧-ಯ, ೨-ರ, ೩-ಲ, ೪-ವ, ೫-ಶ, ೬-ಷ, ೭-ಸ, ೮-ಹ ಈ ಮೇರೆ ಕವರ್ಗ-೯, ಟವರ್ಗ-೯, ಪವರ್ಗ-೫, ಯವರ್ಗ-೮ ಎಂಬುದಾಗಿ ವರ್ಗಾಕ್ಷರಗಳನ್ನು ತಿಳಿಯುವುದು.

ಅಂಕಸಂಜ್ಞಾ ನಿಘಂಟು ಸಂಪೂರ್ಣಂ

# ರಾಶಿಗಳ ನಾಮಾಂತರ ಅಧಿಪತಿಗಳು

**ಕ್ರಿಯತಾವುರುಜಿತಮಕುಳೀರಲೇಯ ಪಾಕೌನಜೂಕಕೌರ್ಪ್ಯಾಖ್ಯಾಃ | ತೌಕ್ಷಿಕಆಕೋಕೇಕೋ ಹೃದ್ರೋಗಶ್ಚಾಂತ್ಯಂ ಚದಂ | ಕ್ಷಿತಿಜಸಿತಜ್ಞಚಂದ್ರರವಿಸೌಮ್ಯಸಿತಾವನಿಜಾಃಸುರಗುರುಮಂದಸೌರಿಗುರುವಶ್ಚಗೃಹಾಂಶುಪಾಃ ||**

ಕ್ರಿಯ, ತಾವುರು, ಜಿತಮ, ಕುಳೀರ, ಲೇಯ, ಪಾಕೌನಜೂಕ, ಕೌರ್ಪಿ, ತೌಕ್ಷಿಕ, ಆಕೋಕೇರ, ಹೃದ್ರೋಗ, ಅಂತ್ಯ ಈ ಹನ್ನೆರಡು ಮೇಷ ಮೊದಲು ಮೀನದವರೆಗೂ ರಾಶಿಗಳ ನಾಮಾಂತರಗಳು ಮೇಷಕ್ಕೆ ಕುಜನು, ವೃಷಭಕ್ಕೆ ಶುಕ್ರನು, ಮಿಥುನಕ್ಕೆ ಬುಧನು, ಕಟಕಕ್ಕೆ ಚಂದ್ರನು, ಸಿಂಹಕ್ಕೆ ಸೂರ್ಯನು, ಕನ್ಯೆಗೆ ಬುಧನು, ತುಲೆಗೆ ಶುಕ್ರನು, ವೃಶ್ಚಿಕಕ್ಕೆ ಅಂಗಾರಕನು, ಧನುಸ್ಸಿಗೆ ಗುರುವು, ಮಕರಕ್ಕೆ ಶನಿಯು, ಕುಂಭಕ್ಕೆ ಶನಿಯು, ಮೀನಕ್ಕೆ ಗುರುವು ಈ ಮೇರೆ ರಾಶ್ಯಾಧಿಪತಿಗಳನ್ನು ತಿಳಿಯುವುದು

# ಗ್ರಹಗಳ ಶತ್ರುಮಿತ್ರತ್ವವು

ಸೂತ್ರವು—**ಸ್ವಸ್ಯಾಂತಧೀಧರ್ಮಸ್ವೋಚ್ಚಾಯುಸ್ಸುಖಪಾಃ ||**

ಸೂರ್ಯನಿಗೆ ಶನಿ ಶುಕ್ರರು ಶತ್ರುಗಳು, ಬುಧನು ಸಮನು, ಚಂದ್ರ ಕುಜ ಗುರುವು ಮಿತ್ರರು ಚಂದ್ರನಿಗೆ ರವಿ ಬುಧರು ಮಿತ್ರರು, ಕುಜ ಗುರುವು ಶುಕ್ರನು ಶನಿ ಇವರು ಸಮರು ಕುಜನಿಗೆ ಗುರು, ಚಂದ್ರ, ರವಿಗಳು ಮಿತ್ರರು, ಬುಧನು ಶತ್ರುವು, ಶುಕ್ರ ಶನಿಗಳು ಸಮರು ಬುಧನಿಗೆ ರವಿ ಶುಕ್ರರು ಮಿತ್ರರು, ಚಂದ್ರನು ಶತ್ರುವು, ಕುಜ ಗುರು ಶನಿಗಳು ಸಮರು. ಗುರುವಿಗೆ ಬುಧ ಶುಕ್ರರು ಶತ್ರುಗಳು, ಶನಿ ಸಮನು, ರವಿ, ಚಂದ್ರ ಕುಜರು ಮಿತ್ರರು ಶುಕ್ರನಿಗೆ ಬುಧ, ಶನಿಗಳು ಮಿತ್ರರು; ಕುಜ, ಗುರುಗಳು

ಸಮರು ; ರವಿ, ಚಂದ್ರರು ಶತ್ರುಗಳು. ಶನಿಗೆ, ಶುಕ್ರ, ಬುಧರು ಮಿತ್ರರು : ಗುರು ಸಮನು ; ರವಿ, ಚಂದ್ರ, ಕುಜರು ಶತ್ರುಗಳೆಂದು ತಿಳಿಯತಕ್ಕದ್ದು.

## ಉಚ್ಚ ನೀಚ ಗ್ರಹಗಳು

**ಅಜೋಕ್ಷನಕ್ರಸಾದೋನ ಕರ್ಕೀಮತ್ಸ್ಯತುಲಾಕ್ರಮಾತ್**
**ರವ್ಯಾದಿತುಂಗಾನೀಚಂತು ತತ್ತತ್ಸಪ್ತಮಮಾಚರೇತ್ ||**

ಸೂರ್ಯನಿಗೆ ಮೇಷವು ಉಚ್ಚರಾಶಿಯು, ಅದಕ್ಕೇಳನೇ ತುಲಾರಾಶಿ ನೀಚ ರಾಶಿ. ಚಂದ್ರನಿಗೆ ವೃಷಭ ಉಚ್ಚ, ಅದಕ್ಕೇಳನೇ ವೃಶ್ಚಿಕ ನೀಚರಾಶಿ. ಅಂಗಾರಕನಿಗೆ ಮಕರ ಉಚ್ಚ, ಕರ್ಕಾಟಕ ನೀಚರಾಶಿ. ಬುಧನಿಗೆ ಕನ್ಯೆಯು ಉಚ್ಚರಾಶಿ, ಅದಕ್ಕೇಳನೇ ಮೀನ ನೀಚರಾಶಿ. ಗುರುವಿಗೆ ಕಟಕ ಉಚ್ಚ, ಅದಕ್ಕೇಳನೇ ಮಕರ ನೀಚರಾಶಿ. ಶುಕ್ರನಿಗೆ ಮೀನ ಉಚ್ಚರಾಶಿ, ಅದಕ್ಕೇಳನೇ ಕನ್ಯೆ ನೀಚರಾಶಿ. ಶನಿಗೆ ತುಲಾ ಉಚ್ಚರಾಶಿ, ಅದಕ್ಕೇಳನೇ ಮೇಷ ನೀಚರಾಶಿ ಎಂಬುದಾಗಿ ತಿಳಿಯತಕ್ಕದ್ದು.

## ಗ್ರಹಗಳ ದೃಷ್ಟಿಗಳು

ಸೂತ್ರ—**ನಗಧಾಮಜಝಸೇಕ್ಷಣಂ ||**

ಶನಿಗೆ ೩–೭–೧೦ ನೇ ರಾಶಿಗಳಲ್ಲಿ ದೃಷ್ಟಿ. ಗುರುವಿಗೆ ೫–೭–೯ ನೇ ರಾಶಿಗಳಲ್ಲಿ ದೃಷ್ಟಿಯು. ಕುಜನಿಗೆ ೪–೭–೮ ನೇ ರಾಶಿಗಳಲ್ಲಿ ದೃಷ್ಟಿ. ರವಿ, ಚಂದ್ರ, ಬುಧ, ಶುಕ್ರ, ರಾಹು, ಕೇತುಗಳಿಗೆ ೭ನೇ ರಾಶಿಗಳಲ್ಲಿ ದೃಷ್ಟಿಯೆಂದು ತಿಳಿಯುವುದು.

## ಷಡ್ವರ್ಗ

ಸೂತ್ರ—**ಓಜಯುಗ್ಮ ರವಿಚಂದ್ರಾ ||**

ದ್ವಾದಶ ರಾಶಿಗಳಲ್ಲಿ ಒಂದು ಓಜ, ಒಂದು ಯುಗ್ಮ ಎಂಬುದಾಗಿ ಮೇಷ ಮೊದಲು ೧-೩-೫-೭-೯-೧೧ ಈ ೬ ರಾಶಿಗಳು ಓಜಗಳು. ೨-೪-೬-೮-೧೦-೧೨ ಈ ೬ ಯುಗ್ಮಗಳು. ಇವುಗಳಲ್ಲಿ ಓಜದಲ್ಲಿ ಮೊದಲನೇ ಅರ್ಧ ಭಾಗ ಸೂರ್ಯಹೋರೆ, ೨ನೇ ಅರ್ಧಭಾಗ ಚಂದ್ರಹೋರೆ ಎಂಬುದಾಗಿಯೂ, ಯುಗ್ಮದಲ್ಲಿ ೧ ನೇ ಅರ್ಧಭಾಗ ಚಂದ್ರಹೋರೆ, ೨ ನೇ ಅರ್ಧಭಾಗ ಸೂರ್ಯ ಹೋರೆ ಎಂಬುದಾಗಿಯೂ ತಿಳಿಯತಕ್ಕದ್ದು

## ದ್ರೇಕ್ಕಾಣ

ಸೂತ್ರ— **ಲಗ್ನತ್ರಿಭಾಗೋದ್ರೇಕ್ಕಾಣಃ ||**

ಮೇಷಾದಿ ೧೨ ರಾಶಿಗಳಲ್ಲಿ ಮೇಷ ಚರ, ವೃಷಭ ಸ್ಥಿರ, ಮಿಥುನ ಉಭಯರಾಶಿ ಈ ಮೇರೆ ಮೇಷ, ಕಟಕ, ತುಲಾ, ಮಕರ ಈ ೪ ರಾಶಿಗಳು ಚರಗಳು. ವೃಷಭ, ಸಿಂಹ, ವೃಶ್ಚಿಕ, ಕುಂಭ ಈ ೪ ರಾಶಿಗಳು ಸ್ಥಿರಗಳು ಮಿಥುನ, ಕನ್ಯಾ, ಧನುಸ್ಸು, ಮೀನ ಈ ೪ ರಾಶಿಗಳು ದ್ವಿಸ್ವಭಾವಗಳು. ಇವುಗಳಲ್ಲಿಯೊಂದೊಂದು ರಾಶಿಯನ್ನು ಮೂರು ಭಾಗ ಮಾಡಿದರೆ ಆ ಭಾಗಗಳಿಗೆ ದ್ರೇಕ್ಕಾಣವೆಂದು ಸಂಜ್ಞೆಯು. ಇದಕ್ಕೆ ಚರರಾಶಿಯಲ್ಲಿ ಮೊದಲು ದ್ರೇಕ್ಕಾಣಭಾಗವು. ಆ ಲಗ್ನನೇ ಎರಡನೇ ಭಾಗವು. ಅದಕ್ಕೆ ೫ನೇ ರಾಶಿ ೩ನೇ ಭಾಗವು ಅದಕ್ಕೆ ೯ನೇ ರಾಶಿಯು. ಈ ಮೇರೆ ಸ್ಥಿರರಾಶಿಗೆ ೧ನೇ ಭಾಗ ನವಮರಾಶಿ, ೨ನೇ ಭಾಗ ಲಗ್ನವು, ೩ನೇ ಭಾಗ ಪಂಚಮರಾಶಿ, ದ್ವಿಸ್ವಭಾವ ರಾಶಿಗೆ ೧ನೇ ಭಾಗ ಪಂಚಮರಾಶಿ, ೨ನೇ ಭಾಗ ನವಮರಾಶಿ, ೩ನೇ ಭಾಗ ಲಗ್ನರಾಶಿ ಎಂಬುದಾಗಿಯೂ ಆ ರಾಶ್ಯಾಧಿಪತಿಗಳು ದ್ರೇಕ್ಕಾಣಾಧಿಪತಿಗಳೆಂಬು ದಾಗಿಯೂ ತಿಳಿಯುವುದು.

## ನವಾಂಶ

ಸೂತ್ರ— **ನವಾಂಶೋನವದಂಶಕಃ ಅಜಮೃಗತೌಳಿಚಂದ್ರಭವನಾದಿಃ||**

ಲಗ್ನವನ್ನು ೯ ಭಾಗ ಮಾಡಿದರೆ ಆ ಭಾಗಗಳಿಗೆ ನವಾಂಶಗಳೆಂದು ಹೆಸರು. ಆ ಭಾಗಗಳನ್ನು ಮೇಷ, ಸಿಂಹ, ಧನಸ್ಸು ಈ ಮೂರು ರಾಶಿಗಳ ಪೈಕಿ ಯಾವ ರಾಶಿಗೆ ನವಾಂಶ ನೋಡಬೇಕಾದರೂ ಮೇಷ ಮೊದಲು ಎಣಿಸ ಬೇಕು. ವೃಷಭ, ಕನ್ಯಾ, ಮಕರ ಈ ಮೂರರ ಪೈಕಿ ಯಾವುದಕ್ಕಾದರೂ ತುಲಾ ಮೊದಲು ಎಣಿಸಬೇಕು. ಕಟಕ, ವೃಶ್ಚಿಕ, ಮೀನ ಇವುಗಳ ಪೈಕಿ ಯಾವುದಕ್ಕಾದರೂ ಕಟಕ ಮೊದಲು ಎಣಿಸತಕ್ಕದ್ದು. ಹೀಗೆ ಎಣಿಸುವಾಗ ಜನನ ಮೊದಲಾದ ಕಾರ್ಯಗಳು ಎಷ್ಟನೇ ಭಾಗದಲ್ಲಾಗುತ್ತವೋ ಆ ಭಾಗ ಯಾವ ಲಗ್ನವೋ ಅದೇ ನವಾಂಶಲಗ್ನವೆಂದು ತಿಳಿಯಬೇಕು.

## ದ್ವಾದಶಾಂಶ

ಸೂತ್ರ— **ರಯಭಾಗೋದ್ವಾದಶಾಂಶಃ ||**

ಲಗ್ನವನ್ನು ಹನ್ನೆರಡು ಭಾಗ ಮಾಡಿ ಅದನ್ನು ಒಂದು ಭಾಗಕ್ಕೆ ಒಂದು ರಾಶಿಯಾಗಿ ಎಣಿಸುವಲ್ಲಿ ಯಾವ ಭಾಗದಲ್ಲಿ ಕಾಲ ನಿಲ್ಲುತ್ತದೋ ಅದೇ ದ್ವಾದಶಾಂಶರಾಶಿ ಎಂಬುದಾಗಿಯೂ ಅದಕ್ಕಧಿಪತಿಯೇ ದ್ವಾದಶಾಂಶಾಧಿಪತಿ ಎಂಬುದಾಗಿಯೂ ತಿಳಿಯುವುದು.

## ತ್ರಿಂಶಾಂಶಗಳು

ಸೂತ್ರ—**ಭೌಮಮಂದಗುರುಜಶ್ಶುಕ್ರಾಃ ಮಾಮಾದಾಸಾಮವಕ್ರಂ ||**

ಲಗ್ನವನ್ನು ೩೦ ಭಾಗ ಮಾಡಿ ಅವುಗಳಲ್ಲಿ ಲಗ್ನ ವಿಷಮ ರಾಶಿಯಾದರೆ ಮೊದಲು ಕುಜನಿಗೆ ಭಾಗ ೫, ಶನಿಗೆ ಭಾಗ ೫, ಗುರುವಿಗೆ ಭಾಗ ೮, ಬುಧನಿಗೆ ಭಾಗ ೭, ಶುಕ್ರನಿಗೆ ಭಾಗ ೫, ಲಗ್ನ ಸಮರಾಶಿಯಾಗಿ ಇದನ್ನು ವ್ಯುತ್ಕ್ರಮವಾಗಿ ಮೊದಲು ಶುಕ್ರನಿಗೆ ಭಾಗ ೫, ಬುಧನಿಗೆ ಭಾಗ ೭, ಗುರುವಿಗೆ ಭಾಗ ೮, ಶನಿಗೆ ಭಾಗ ೫, ಕುಜನಿಗೆ ಭಾಗ ೫ ಈ ಮೇರೆ ತಿಳಿಯುವುದು.

## ರಾಹುಕಾಲವು

ಸೂತ್ರ—**ವಿಧುಸ್ಸೌರೀಭೃಗುಸುತಜಜೀವಭೌಮಾರ್ಕಃ ||**
**ತ್ರಿಪಾದತ್ರೀಣಿವೃದ್ಧಿಃ ||**

ಸೋಮವಾರದಲ್ಲಿ ೩॥ ಘಳಿಗೆಗೆ, ಶನಿವಾರದಲ್ಲಿ ೭॥ ಘಳಿಗೆಗೆ, ಶುಕ್ರವಾರದಲ್ಲಿ ೧೧।, ಬುಧವಾರದಲ್ಲಿ ೧೫, ಗುರುವಾರದಲ್ಲಿ ೧೮॥।, ಮಂಗಳವಾರದಲ್ಲಿ ೨೨॥, ಆದಿತ್ಯವಾರದಲ್ಲಿ ೨೬।, ಈ ವಾರಗಳಲ್ಲಿ ಇಷ್ಟಿಷ್ಟು ಘಳಿಗೆಗಳ ಮೇಲೆ ೩॥ ಘಳಿಗೆ ರಾಹುಕಾಲವೆಂದು ತಿಳಿಯುವುದು.

## ನಕ್ಷತ್ರ ತ್ಯಾಜ್ಯವು

**ಸೈನ್ಯಂವೀರನಲಂಬೋಭಯಂಕರಂ ನೀಲನರಂಘಾಲಿನಾ |**
**ಗೋದೀರಂಹಯಕಾರಿಣೀರಭಯ ಭೂಪೋನೇಕಭೇಕತಮಃ|**
**ಪಾರಂನೀರನಕಂನಕಂಹಯತಪೋವಾರಂನಗಂದಸ್ರತಃ |**
**ಸಂಖ್ಯೋಧ್ವರ್ಗಂವಿ ಘನಾಡಿಕಾಅದಧಯೋರ್ಲಗ್ನಸ್ಪೃಶೋ**
**ರ್ಮೃತ್ಯುದಾಃ ||**

ಅಶ್ವಿನಿಗೆ ೫೦, ಭರಣಿಗೆ ೨೪, ಕೃತ್ತಿಕೆ ೩೦, ರೋ ೪೦, ಮೃ ೧೪, ಆರ್ದ್ರ ೨೧, ಪುನ ೩೦, ಪುಷ್ಯ ೨೦, ಆಶ್ಲೇ ೩೨, ಮಖ ೩೦, ಪೂ-ಫ ೨೦,

ಉ-ಫ ೧೮, ಹ ೨೧, ಚಿ ೨೦, ಸ್ವಾತಿ ೧೪, ವಿಶಾ ೧೪, ಅನೂ ೧೦, ಜ್ಯೇ ೧೪, ಮೂ ೨೦, ಪೂಷಾ ೨೪, ಉಷಾ ೨೦, ಶ್ರ ೧೦, ಧ ೧೦, ಶತ ೧೮, ಪೂಭಾ ೧೬, ಉಭಾ ೨೪, ರೇ ೩೦, ಈ ನಕ್ಷತ್ರಗಳಿಗೆ ಈ ಘಳಿಗೆಗಳ ಮೇಲೆ ೪ ಘಳಿಗೆ ಗಳವರಿಗೂ ತ್ಯಾಜ್ಯಕಾಲ, ಆಗ ಯಾವ ಕಾರ್ಯವನ್ನೂ ಮಾಡಬಾರದು.

## ಪಕ್ಷಚ್ಛಿದ್ರಗಳು

**ಅಷ್ಟಮೀದ್ವಾದಶೀಷಷ್ಠೀ ಚತುರ್ಥೀಚ ಚತುರ್ದಶೀ ।**
**ಪಕ್ಷಚ್ಛಿದ್ರಾತಿಥಯಶ್ಶುಭಕಾರ್ಯೇಷು ನಿಂದಿತಾಃ ॥**

ಶುಕ್ಲ ಕೃಷ್ಣ ಪಕ್ಷಗಳಲ್ಲಿ ಅಷ್ಟಮೀ, ದ್ವಾದಶೀ, ಷಷ್ಠೀ, ಚತುರ್ಥೀ, ಚತುರ್ದಶೀ ಈ ತಿಥಿಗಳು ಪಕ್ಷಚ್ಛಿದ್ರಗಳು. ಇವುಗಳಲ್ಲಿ ಶುಭಕಾರ್ಯಗಳನ್ನು ಮಾಡಬಾರದು.

## ಜಾತಕರ್ಮ

**ತಸ್ಮಿನ್ಜನ್ಮಮುಹೂರ್ತೇಪಿ ಸೂತಕಾಂತೇಥವಾಶಿಶೋಃ ।**
**ಜಾತಕರ್ಮಚಕರ್ತವ್ಯಂ ಪಿತೃಪೂಜನತತ್ಪರಃ ॥**

ಮಗು ಹುಟ್ಟಿದ ಮುಹೂರ್ತದಲ್ಲಾಗಲಿ ಸೂತಕ ತೀರಿದ ಬಳಿಕಾಗಲಿ ಅದಕ್ಕೆ ಜಾತಕರ್ಮವನ್ನು ಮಾಡತಕ್ಕದ್ದು

## ನಾಮಕರಣ ಕಾಲವು

**ಉತ್ತರತ್ರಯಹಸ್ತವಾರುಣಸ್ತ್ವಾಷ್ಟ್ರಪಿ ವೈಷ್ಣವಪುನರ್ವಸು ದ್ವಯಂ । ಪೌಷಮೂಲಮೃಗವಾಸವಾಜಿಭೈನಾಮಕರ್ಮ ಶುಭದಂ ವಿದುರ್ಬುಧಾಃ ॥**

ಉತ್ತರ, ಹಸ್ತಾ, ಚಿತ್ತಾ, ಉಷಾ, ಉಭಾ, ಶತ, ಶ್ರವ, ಪುನ, ಪುಷ್ಯಾ, ರೇವ, ಮೂ, ಮೃಗ, ಧನಿ, ಅಶ್ವಿನಿ ಈ ನಕ್ಷತ್ರಗಳು ನಾಮಕರಣಕ್ಕೆ ಯೋಗ್ಯಗಳು

## ಅನ್ನಪ್ರಾಶನ ಕಾಲವು

**ಆದಿತ್ಯಸೌಮ್ಯವಸುತಿಷ್ಯಕರಾ ನಿಲಾಶ್ವಿಮೈತ್ರಾಖ್ಯವಿಷ್ಣು ವರಣೋತ್ತರಭಾಪಚಿತ್ರಾಃ । ಬಾಲಾನ್ನಭೋಜವಿಧಾದಶ ಮೇವಶುದ್ಧೇಛಿದ್ರಾಂವಿಹಾಯನವಮೀಂತಿಥಯಃಶುಭಾಸ್ಯುಃ ॥**

ಪುನ, ಮೃಗ, ಧನಿ, ಪುಷ್ಯ, ಹ, ಸ್ವಾತಿ, ಅಶ್ವಿ, ಅನೂ, ಶ್ರವ, ಶತ, ಉತ್ತ್ರ, ಉಷಾ, ಉಭಾ, ಚಿತ್ತಾ ಈ ೧೪ ನಕ್ಷತ್ರಗಳು ಉತ್ತಮಗಳು. ೮-೧೨-೬-೪-೧೪-೯-೩೦-೧೫ ಈ ತಿಥಿಗಳಲ್ಲಿಯೂ, ಕಡಮೇ ತಿಥಿಗಳಲ್ಲಿ ಲಗ್ನಕ್ಕೆ ಲಗ್ನ ಶುದ್ಧಿ ದಶಮಶುದ್ಧಿ ಇರುವಾಗಲೂ ಶಿಶುವಿಗೆ ಅನ್ನಪ್ರಾಶನ ಮಾಡಬೇಕು.

## ಕರ್ಣವೇಧನ ಕಾಲವು

**ಹರಿಹರಾಕರಜಿತ್ರಾಸೌಮ್ಯಪೌಷ್ಣೋತ್ತರಾರ್ಧ್ಯಾದಿತಿವಸುಷು ಘಟಾಳೀಸಿಂಹಲಗ್ನೆವಿವರ್ಜೆ । ಶಶಿಬುಧಗುರುಕಾವ್ಯಾನಾಂ ಸಿತೇವದ್ವಿರಿಕ್ತೇರಹತಿಥಿಷುವಿಶುದ್ಧೇನೈಧನೇಕರ್ಣವೇಧಃ॥**

ಶ್ರ, ಆರ್ದ್ರ, ಹ, ಮೃ, ರೇ, ಉತ್ತ್ರ, ಉಷಾ, ಉಭಾ, ಪುಷ್ಯ, ಪುನ, ಧನಿ, ಈ ೧೧ ನಕ್ಷತ್ರಗಳಲ್ಲೂ, ಕುಂಭ, ವೃಶ್ಚಿಕ, ಸಿಂಹರಾಶಿಗಳನ್ನು ಬಿಟ್ಟು ಕಡಮೆ ರಾಶಿಗಳಲ್ಲೂ, ಸೋಮ, ಬುಧ, ಗುರು, ಶುಕ್ರವಾರಗಳಲ್ಲೂ, ಶುಕ್ಲ ಪಕ್ಷದಲ್ಲೂ ೨-೩-೫ ೭-೧೦-೧೩ ಈ ತಿಥಿಗಳಲ್ಲೂ, ಲಗ್ನಕ್ಕೆ ಅಷ್ಟಮಶುದ್ಧಿ ಇರುವಾಗಲೂ ಕರ್ಣವೇಧನವು ಶುಭಕರವು

## ಕೇಶಖಂಡನ ಕಾಲವು

**ಅಶ್ವಿ ಪುಷ್ಯ ಪುನರ್ವಸೂ ಮೃಗಶಿರಸ್ಸ್ವಾತ್ಯಂತವಿಷ್ಣುತ್ರಯಂ । ಚಂದ್ರಜ್ಞಾಮರಪೂಜ್ಯ ಶುಕ್ರಸಹಿತಾಃ ಪೂರ್ಣಾಜಯಾಖ್ಯಾ ಶ್ಯುಭಾಃ । ಪೂರ್ವಾಹ್ಣೇಶುಭಲಗ್ನಹೋರದಿವಸೇಯುಗ್ಮೇ ಚ ಮಾಸೆ ಶಿಶೋಃ । ಕೇಶಚ್ಛೇದನಮಿಷ್ಟದಂ ಮುನಿವರ್ಯೈರುಕ್ತಂ ವರಾಹಾದಿಭಿಃ ॥**

ಅಶ್ವಿ, ಪುಷ್ಯ, ಪುನ, ಮೃ, ಸ್ವಾ, ರೇ, ಶ್ರ, ಧ, ಶತ ಈ ೯ ನಕ್ಷತ್ರ ಗಳಲ್ಲೂ, ಸೋ, ಬು, ಗು, ಶು, ಈ ವಾರಗಳಲ್ಲೂ, ೨-೫ ೭-೧೦-೧೩ ಈ ತಿಥಿ ವಾರಗಳಲ್ಲೂ, ಪೂರ್ವಾಹ್ಣದಲ್ಲೂ, ಶುಭಲಗ್ನ, ಶುಭಹೋರೆಗಳಲ್ಲೂ, ಯುಗ್ಮ ಮಾಸಗಳಲ್ಲೂ, ಶಿಶುವಿಗೆ ಕೇಶಖಂಡನ ಶುಭಕರವು.

## ಕ್ಷೌರಕ್ಕೆ ಕಾಲವು

**ಪುಷ್ಯ ಪುನರ್ವಸು ರೇವತಿ ಹಸ್ತಾ ಶ್ರವಣ ಧನಿಷ್ಠ ಮೃಗಾಶ್ವಿನಿ ಚಿತ್ತಾ । ವಾಸವವಾರುಣವಾಯುಸಮೇತಂ ದ್ವಾದಶಋಕ್ಷಂ ಕ್ಷೌರಪ್ರಶಸ್ತಂ ॥**

ಪುಷ್ಯ, ಪುನರ್ವಸು, ರೇ, ಹ, ಶ್ರ, ಧ, ಮೃ, ಅಶ್ವಿ, ಚಿ, ಜ್ಯೆ, ಶತ, ಸ್ವಾ ಈ ೧೨ ನಕ್ಷತ್ರಗಳಲ್ಲೂ ಕ್ಷೌರವು ಶುಭಕರವು

## ಕ್ಷೌರವರ್ಜ ಕಾಲವು

**ಮಾತುಶ್ಚತುರ್ಥೀಭಗಿನೀಚತುರ್ದಶೀಭ್ರಾತುಶ್ಚಷಷ್ಠೀಪಿತರೇವ ಪರ್ವಸು । ಅದ್ಯಾನವಮ್ಯಾಂಧನದಾನ್ಯನಾಶಂ ಕುಟುಂಬ ಹಾನೀ ಕ್ಷೌರಾಷ್ಟಮೀಷು ॥**

ಚತುರ್ಥೀ, ಷಷ್ಠೀ, ಚತುರ್ದಶೀ, ಪಂಚಪರ್ವಗಳು, ಪಾಡ್ಯಮಿ, ನವಮಿ, ಅಷ್ಟಮಿ ಈ ತಿಥಿಗಳಲ್ಲಿ ಕ್ಷೌರ ಅಶುಭಕರವು

## ವಿದ್ಯಾಭ್ಯಾಸ ಕಾಲವು

**ಹಸ್ತಾದಿತ್ಯಸಮೀರಮಿತ್ರಪುರಜಿತ್ಪೌಷ್ಣಾಶ್ವಿಚಿತ್ರಾಚ್ಯುತೇ ।**
**ಷ್ಟರಾರ್ಕಾರ್ಕಜವಾಸರಾದಿರಹಿತೇರಾಶೌಚರೇಚೋಭಯೋ ।**
**ಪಕ್ಷೇಪೂರ್ಣನಿಶಾಕರೇಪ್ರತಿಪದಂರಿಕ್ತಾಂವಿಹಾಯಾಷ್ಟಮೀಂ ।**
**ಷಷ್ಠೀಮಷ್ಟಮಶುದ್ಧಿಭಾಜಿಭವನೇಪ್ರೋಕ್ತಾಕ್ಷರಸ್ವೀಕೃತಿಃ ॥**

ಹಸ್ತ, ಪುನರ್ವಸು, ಸ್ವಾತಿ, ಅನೂರಾಧಾ, ಜ್ಯೇಷ್ಠಾ, ರೇವತೀ, ಅಶ್ವಿನೀ, ಚಿತ್ರಾ, ಶ್ರವಣ ಈ ನಕ್ಷತ್ರಗಳಲ್ಲೂ ರವಿವಾರ, ಮಂಗಳ, ಶನಿ ಈ ವಾರಗಳನ್ನು ಬಿಟ್ಟು ಚರರಾಶಿ, ಉಭಯರಾಶಿಗಳಲ್ಲೂ, ಶುಕ್ಲಪಕ್ಷದಲ್ಲೂ, ಚಂದ್ರನು ಪೂರ್ಣನಾಗಿ ಇರುವಾಗಲೂ, ೧-೪-೧೪-೮-೯-೬-೧೫-೩೦ ಈ ತಿಥಿಗಳನ್ನು ಬಿಟ್ಟು ಲಗ್ನಕ್ಕೆ ಅಷ್ಟಮಶುದ್ಧಿ, ಮೂಢಾದಿ ದೋಷಗಳಿಲ್ಲದಿರುವಾಗಲೂ ಅಕ್ಷರಸ್ವೀಕಾರ ಮಾಡತಕ್ಕದ್ದು.

## ಉಪನಯನ ಪ್ರಕರಣವು

**ಚಂದ್ರಾದಿತ್ಯೋತ್ತರಾಶ್ವಿಶ್ರವಣವಸು ಮರುತ್ವಷ್ಟೃಪೌಷ್ಣಾರ್ಕ ಮಿತ್ರಪ್ರಾಜೇಶಾರ್ಯೇಪುಸೌಮ್ಯಾಮರಗುರುಶಶಿಭೃಗಾರಾಂಶಕೇಷೂಪನೀತಃ । ತಕ್ತ್ವಾನಧ್ಯಾಯರಿಕ್ತಾಂಪಿತೃತಿಥಿಷುಯಮಾರ್ಕಯುಕ್ತಾನ್ಯರಾಶೌಗೋಜೋಪಾತ್ಯಂಗನಾಟಕ ತುಲಮಿಥುನೇಷ್ವಿಮೇಭಾಮ್ನಿಶುದ್ಧಿಃ ॥**

ಮೃಗಶಿರ, ಪುನ, ಉತ್ತ್ರ, ಉಷಾ, ಉಭಾ, ಅಶ್ವಿನೀ, ಶ್ರವಣ, ಧನಿಷ್ಠಾ, ಚಿತ್ತಾ, ರೇವತಿ, ಹಸ್ತ, ಅನೂರಾಧಾ, ರೋಹಿಣೀ, ಪುಷ್ಯ ಈ ಹದಿನಾಲ್ಕು ನಕ್ಷತ್ರಗಳಲ್ಲೂ, ಬುಧ, ಗುರು, ಶುಕ್ರ, ಸೋಮವಾರಗಳಲ್ಲೂ ಮಾಡಬಹುದು ಅನಧ್ಯಯನ ತಿಥಿಗಳು, ರಿಕ್ತತಿಥಿಗಳು, ಪಿತೃದಿನಗಳು, ಶನಿ, ರವಿ, ಕುಜ ವಾರಗಳಲ್ಲೂ ಉಪನಯನ ಮಾಡಬಾರದು. ಮೇಷ, ವೃಷಭ, ಮೀನ, ಕಟಕ, ಕನ್ಯಾ, ತುಲಾ, ಮಿಥುನ ಈ ರಾಶಿಗಳಲ್ಲೂ, ಅಷ್ಟಮ ರಾಶಿ ಶುದ್ಧವಾಗಿ ಇರುವಾಗಲೂ ಉಪನಯನ ಮಾಡತಕ್ಕದ್ದು.

**ಕೇಂದ್ರತ್ರಿಕೋಣೋಪಚಯೇಷು ಶುಭೈಸ್ತ್ರ್ಯಾಯಾರಿಗೈಃ ಪಾಪೈಃ ।**
**ಲಗ್ನಷಷ್ಠಾಂತ್ಯಜಾಂಹ್ಯೇನ ಚಂದ್ರೇಣ ವ್ರತಮೀರಿತಂ ॥**

ಶುಭಗ್ರಹಗಳಾದ ಸೋಮ, ಬುಧ, ಗುರು, ಶುಕ್ರನು ಇವರು ಕೇಂದ್ರ ತ್ರಿಕೋಣಗಳಲ್ಲೂ, ರವಿ, ಕುಜ ಶನಿಗಳು ೩ ೬ ೧೧ ಈ ರಾಶಿಗಳಲ್ಲೂ ಇರಬೇಕು ಚಂದ್ರನು ೧ ೬ ೧೧ ರಾಶಿಗಳಲ್ಲಿ ಇರಕೂಡದು.

**ಲಗ್ನಾತ್ಕೇಂದ್ರಗತೇ ರವೌ ಸ್ಫುಜಿತತ್ಯಾಚಾರ್ಯಶಿಷ್ಯೌ ವ್ರತೇ**
**ಭೌಮೇ ಕೂಜಿತನಾಮಕಸ್ತು ಜನನೀಂ ಹಂತ್ಯೇವ ಮಂದೇ ಕುಲಂ।**
**ದೋಷೋಯಂ ರುಧಿರಾಭಿಧಸ್ತಮಸಿ ಚೇದುಗ್ರಾಭಿದೋ ಬಾಲಕಂ**
**ರಂಧ್ರಾಖ್ಯಃ ಪಿತಂಧ್ವಜಿನಗಪಶಷೋತ್ಯಬ್ಧಿಕೇಂದ್ರಾಭಿದಾಃ ॥**

ಲಗ್ನ ಮೊದಲು ನಾಲ್ಕು ಕೇಂದ್ರಗಳಲ್ಲಿ ಸೂರ್ಯನಿದ್ದರೆ ಸ್ಫುರಜಿತವೆಂಬ ದೋಷ ಉಂಟಾಗುತ್ತದೆಯಾಗಿ ಆ ದೋಷವಾಚಾರ್ಯರಿಗೆ ಹಾನಿಕರವು ಅವುಗಳಲ್ಲಿ ಕುಜನಿದ್ದರೆ ಕೂಜಿತವೆಂಬ ದೋಷ ಉಂಟಾಗುತ್ತದೆಯಾಗಿ ಅದು ಮಾತೃಹಾನಿಕರವು. ಅವುಗಳಲ್ಲಿ ಶನಿ ಇದ್ದರೆ ರುಧಿರ ದೋಷ ಉಂಟಾಗುತ್ತದೆ. ಅದು ವಟುವಿಗೆ ಕುಲಹಾನಿಕರವು ಅಲ್ಲಿ ರಾಹುವಿದ್ದರೆ ಉಗ್ರ ದೋಷವು ಅದು ವಟುವಿಗೆ ಹಾನಿಕರವು ಕೇತುವಿದ್ದರೆ ರಂಧ್ರದೋಷವು, ವಟುವಿನ ತಂದೆಗೆ ನಾಶವುಂಟಾಗುವುದು ಕೇಂದ್ರವೆಂದರೆ ಲಗ್ನ, ಚತುರ್ಥ, ಸಪ್ತಮ, ದಶಮರಾಶಿಗಳು, ತ್ರಿಕೋಣವೆಂದರೆ ೫ ೯ನೇ ರಾಶಿಗಳು.

## ಕೂಟಗಳು-ದಿನಕೂಟಗಳು

**ಕನ್ಯಾದಿವರರುಕ್ಷಾಂತಂ ಗಣಯೇನ್ನವಸಂಖ್ಯಯಾ ।**
**ಸಮಾಂತ್ಯತಾರಕಂ ಶ್ರೇಷ್ಠಂ ದಿನಕೂಟಂ ಪ್ರಶಸ್ಯತೇ ॥**

ಕನ್ಯೆಯ ನಕ್ಷತ್ರ ಮೊದಲು ವರನ ನಕ್ಷತ್ರದವರಿಗೆ ಒಂಭತ್ತೊಂಭತ್ತಾಗಿ ತಾರಾಬಲದಂತೆ ಎಣಿಸುವಾಗ ಅಲ್ಲಿ ೨-೪-೬-೮ ಈ ಸಮಸಂಖ್ಯೆಯುಳ್ಳ ನಕ್ಷತ್ರಗಳು ಶುಭಕರಗಳು.

## ಗಣಕೂಟವು

**ಪುನರ್ವಸುದ್ವಯಂ ಸ್ವಾತಿ ಕರ ಶ್ರವಣ ತಾರಕಾಃ ।**
**ಪೌಷ್ಣಮೈತ್ರೇಂದುದಸ್ರಾಖ್ಯಾ ತಾರಾದೇವಗಣಾಸ್ಮೃತಾಃ ॥**

ಪುನರ್ವಸು, ಪುಷ್ಯ, ಸ್ವಾತಿ, ಹಸ್ತ, ಶ್ರವಣ, ರೇವತಿ, ಅನೂರಾಧಾ, ಮೃಗಶೀರ್ಷ, ಅಶ್ವಿನಿ ಈ ೯ ನಕ್ಷತ್ರಗಳು ದೇವಗಣ ನಕ್ಷತ್ರಗಳು.

**ರೋಹಿಣೀ ತ್ರೀಣಿ ಪೂರ್ವಾಣಿ ಭರಣೀ ರೌದ್ರಮೇವಚ ।**
**ತ್ರೀಣ್ಯುತ್ತರಾಶ್ಚವಿಜ್ಞೇಯಾಃಮಾನುಷಾಃ ಪರಿಕೀರ್ತಿತಾ ॥**

ರೋಹಿಣಿ, ಪೂರ್ವಫಲ್ಗುಣೀ, ಪೂರ್ವಾಷಾಢಾ, ಪೂರ್ವಾಭಾದ್ರ, ಭರಣೀ, ಆರ್ದ್ರಾ- ಉತ್ತರಫಲ್ಗುಣೀ, ಉತ್ತರಾಷಾಢಾ, ಉತ್ತರಾಭಾದ್ರ ಈ ೯ ನಕ್ಷತ್ರಗಳು ಮಾನುಷಗಣಗಳು.

**ಕೃತ್ತಿಕಾ ಚ ಮಖಾ ಜ್ಯೇಷ್ಠಾ ಧನಿಷ್ಠಾ ಚಿತ್ರರೋಹಿಣಿ ।**
**ವಿಶಾಖಾಶತತಾರಾಚ ಮೂಲಂ ರಾಕ್ಷಸ ಸಂಜ್ಞಿಕಾಃ ॥**

ಕೃತ್ತಿಕಾ, ಮಖಾ, ಜ್ಯೇಷ್ಠಾ, ಧನಿಷ್ಠಾ, ಚಿತ್ರಾ, ರೋಹಿಣಿ, ವಿಶಾಖಾ, ಶತಭಿಷಕ್, ಮೂಲ ಈ ೯ ನಕ್ಷತ್ರಗಳು ರಾಕ್ಷಸಗಣಗಳು. ಈ ಗಣಗಳಲ್ಲಿ ಸ್ತ್ರೀಪುರುಷರು ಒಂದೇ ಗಣವಾಗಿ ಇದ್ದರೆ ಶುಭವು, ದೇವಮಾನುಷ ಗಣಗಳು ಮಧ್ಯಮ, ರಾಕ್ಷಸ ದೇವಗಣಗಳು ಅಧಮ, ಮಾನುಷ ರಾಕ್ಷಸ ಗಣಗಳು ಮೃತ್ಯುಕರವು.

## ಮಾಹೇಂದ್ರಕೂಟ

**ವಧ್ವಾದೀನಾಂಚತುಸ್ಸಪ್ತ ದಶಮಂ ಚ ತ್ರಯೋದಶ ।**
**ಷೋಡಶೈಕೋನವಿಂಶಶ್ಚ ದ್ವಾವಿಂಶಃ ಪಂಚವಿಂಶತಿಃ ॥**
**ಏತೇ ಮಾಹೇಂದ್ರಯೋಗಾಸ್ಯುರ್ವಿವಾಹೇಷು ಪ್ರಶಸ್ಯತೆ ॥**

ಸ್ತ್ರೀ ನಕ್ಷತ್ರ ಮೊದಲು ಪುರುಷನಕ್ಷತ್ರದವರಿವಿಗೂ ಎಣಿಸುವಾಗ ೪-೭-೧೦-೧೩-೧೬-೧೯-೨೨-೨೫ ಈ ಅಂಕೆಗಳು ಬಂದರೆ ಶುಭವು

## ಸ್ತ್ರೀ ದೀರ್ಘಕೂಟವು

**ತ್ರಯೋದಶಭವಾದೂರ್ಧ್ವಂ ಸ್ತ್ರೀದೀರ್ಘಮತಿಶೋಭನಂ ||**

ಸ್ತ್ರೀ ನಕ್ಷತ್ರ ಮೊದಲು ೧೩ ನಕ್ಷತ್ರದ ಮೇಲೆ ಪುರುಷ ನಕ್ಷತ್ರವಿದ್ದರೆ ಶುಭವಹುದು.

## ರಾಶಿಕೂಟ

**ದ್ವಿಕೇದ್ವಾದಶಕೇಮೃತ್ಯುರಾಯುದ್ವಾರ್ದಶಕೇದ್ವಿಕೇ |**
**ತೃತೀಯೇಕಾದಶಂ ದುಃಖಂ ಸುಖಮೇಕಾದಶೇತ್ರಿಕೇ ||**
**ನೀಚಂ ಚತುರ್ಥ ದಶಮಂ ಧನಂ ದಶಚತುರ್ಥಕೇ |**
**ಶುಭಂ ಚ ಪಂಚ ನವಮಮಶುಭಂ ನವಪಂಚಕಂ |**
**ಷಷ್ಠಾಷ್ಟಕೇ ಪುತ್ರನಾಶಃ ಪುತ್ರಲಾಭೋಷ್ಟಷಷ್ಟಕೇ |**
**ಸಮಸಪ್ತೇತು ಮಾಂಗಲ್ಯಂ ದಂಪತ್ಯೋಃ ಪ್ರೀತಿವರ್ಧನಂ ||**

ಸ್ತ್ರೀರಾಶಿ ಮೊದಲು ೨, ಪುರುಷರಾಶಿ ಮೊದಲು ೧೨ರಲ್ಲಿ ಇದ್ದರೆ ಮೃತ್ಯುವನ್ನು ಕೊಡುತ್ತದೆ ಸ್ತ್ರೀರಾಶ್ಯಾದಿ ೧೨, ಪುರುಷರಾಶ್ಯಾದಿ ೨ ಆದರೆ ಆಯುರ್ವೃದ್ಧಿ. ಸ್ತ್ರೀರಾಶ್ಯಾದಿ ೩, ಪುರುಷರಾಶ್ಯಾದಿ ೧೧ ಇದ್ದರೆ ದುಃಖವು. ಸ್ತ್ರೀರಾಶ್ಯಾದಿ ೧೧, ಪುರುಷ ರಾಶ್ಯಾದಿ ೩ ಇದ್ದರೆ ಸುಖವು. ಸ್ತ್ರೀರಾಶ್ಯಾದಿ ೪, ಪುರುಷರಾಶ್ಯಾದಿ ೧೦ ಇದ್ದರೆ ತ್ಯಾಜ್ಯವು ಸ್ತ್ರೀರಾಶ್ಯಾದಿ ೧೦, ಪುರುಷ ರಾಶ್ಯಾದಿ ೪ ಇದ್ದರೆ ಧನಪ್ರಾಪ್ತಿ ಸ್ತ್ರೀರಾಶ್ಯಾದಿ ೫, ಪುರುಷರಾಶ್ಯಾದಿ ೯ ಇದ್ದರೆ ಶುಭವು ಸ್ತ್ರೀರಾಶ್ಯಾದಿ ೯, ಪುರುಷರಾಶ್ಯಾದಿ ೫ ಇದ್ದರೆ ಅಶುಭವು ಸ್ತ್ರೀರಾಶ್ಯಾದಿ ೬, ಪುರುಷರಾಶ್ಯಾದಿ ೮ ಇದ್ದರೆ ಪುತ್ರನಾಶವು ಸ್ತ್ರೀರಾಶ್ಯಾದಿ ೮, ಪುರುಷರಾಶ್ಯಾದಿ ೬ ಇದ್ದರೆ ಪುತ್ರಲಾಭವು. ಸ್ತ್ರೀರಾಶ್ಯಾದಿ ೭, ಪುರುಷ ರಾಶ್ಯಾದಿ ೭ ಇದ್ದರೆ ಮಾಂಗಲ್ಯವೃದ್ಧಿಯೆಂದು ತಿಳಿಯುವುದು.

## ರಜ್ಜುಕೂಟವು

**ಅಶ್ವೀಸಾರ್ಪಮಖಾಜ್ಯೇಷ್ಠಾ ಮೂಲಾಂತ್ಯಂಪಾದರಜ್ಜುವಃ |**
**ಯಮಾರ್ಯಭಾಗ್ಯಮೈತ್ರಾಖ್ಯಂ ಅಹಿಂಬುರ್ಧ್ನ್ಯಾಃಕಟೀರಿತಾ ||**
**ಅಗ್ನ್ಯಾದಿತ್ಯಾರ್ಯಮೋಶೂರ್ಪಾವಿಶ್ವಪ್ರೋಷ್ಠಪದೋದರೆ |**
**ಬ್ರಹ್ಮರುದ್ರೇಕರ ಸ್ವಾತೀ ಶ್ರವಣಂ ವಾರುಣಂ ತಥಾ ||**
**ಕಂಠೇದಶೇ ವಿಜಾನೀಯಾದ್ವಸುಚಿತ್ರೇಂದುಮಸ್ತಕಂ |**

**ಮುಖೇಪತಿಂಗಳೇಕನ್ಯಾಂ ಕುಕ್ಷೌ ಸ್ವಸ್ಯಾತ್ಮಜಾಂಹರೇತ್ ।**
**ದರಿದ್ರತಾಭವೇತ್ಕಟ್ಯಾಂ ಪಾದೇವಾಭ್ರಮಣಂ ತಥಾ ॥**

ಅಶ್ವಿ, ಆಶ್ಲೇ, ಮ, ಜ್ಯೆ, ಮೂ, ರೇ ಈ ೬ ಪಾದರಜ್ಜು ನಕ್ಷತ್ರಗಳು. ಭ, ಪುಷ್ಯ, ಪೂಫ, ಅನೂ, ಪೂಷಾ, ಉಭಾ ಈ ೬ ಕಟಿರಜ್ಜು ನಕ್ಷತ್ರಗಳು. ಕೃ, ಪುನ, ಉತ್ತರ, ವಿ, ಉಷಾ, ಪೂಭಾ ಈ ೬ ಉರೋರಜ್ಜು ನಕ್ಷತ್ರಗಳು. ರೋಹಿಣೀ, ಆರ್ದ್ರಾ, ಹ, ಸ್ವಾ, ಶ್ರ, ಶತ ಈ ೬ ಕಂಠರಜ್ಜು ನಕ್ಷತ್ರಗಳು. ಮೃ, ಚಿ, ಧ, ಈ ೩ ಶಿರೋರಜ್ಜು ನಕ್ಷತ್ರಗಳು ಇವುಗಳಿಗೆ ಫಲವು—ಶಿರೋರಜ್ಜು ಪತಿಯನ್ನು ಕೊಲ್ಲುತ್ತದೆ ಕಂಠರಜ್ಜು ಸ್ತ್ರೀಗೆ ನಾಶಕರವು. ಉದರ ರಜ್ಜು ಮಕ್ಕಳಿಗೆ ಹಾನಿ ಕಟಿರಜ್ಜು ದಾರಿದ್ರ್ಯವನ್ನುಂಟುಮಾಡುತ್ತದೆ. ಪಾದರಜ್ಜುವಿ ಸ್ತ್ರೀಪುರುಷರಿಗೆ ಒಂದುಕಡೆ ನೆಲೆಯಿಲ್ಲದೆ ತಿರುಗಿಸುತ್ತಲಿರುತ್ತದೆ.

## ನಾಡೀ ಕೂಟ

**ಅಶ್ವಿನ್ಯಾರ್ದ್ರಾಪುನರ್ವಸ್ವ ಉತ್ತರಾಹಸ್ತಜ್ಯೇಷ್ಠಭಂ ।**
**ಮೂಲಾವಾರುಣಾತೋಯಶ್ಚಪಾರ್ಶ್ವನಾಡೀನವಸ್ತಥಾ ॥**

ಅಶ್ವಿ, ಆರ್ದ್ರಾ, ಪುನ, ಉತ್ತರ, ಹ, ಜ್ಯೇ, ಮೂ, ಶತ, ಪೂಭಾ ಈ ೯ ಪ್ರಥಮ ಪಾರ್ಶ್ವನಾಡೀ ನಕ್ಷತ್ರಗಳು

## ಮನುಷ್ಯ ನಾಡೀಕೂಟ

**ಭರಣೀಂದುಗುರುರ್ಭಾಗ್ಯಂಚಿತ್ರಾನೂರಾಧಾ ಪೂಷಭಂ ।**
**ಶ್ರವಿಷ್ಠಾಚೋತ್ತರಾಭಾದ್ರ ಮಧ್ಯನಾಡೀನವಸ್ತಥಾ ॥**

ಭ, ಮೃ, ಪುಷ್ಯ, ಪುಫ, ಚಿ, ಅನೂ, ಪೂಷಾ, ಧ, ಉಭಾ ಈ ೯ ಮಧ್ಯೈಕನಾಡೀ ನಕ್ಷತ್ರಗಳು

**ಕೃತ್ತಿಕಾವಿಧಿರಾಶ್ಲೇಷ ಪಿತೃಸ್ವಾತಿವಿಶಾಖಭಂ ।**
**ಉತ್ತರಾಷಾಢವಿಷ್ಣ್ವರ್ಕ್ಷೇ ಅಂತ್ಯನಾಡೀಕುಪಾರ್ಶ್ವಕೇ ॥**

ಕೃ, ರೋ, ಆಶ್ಲೇ, ಮ, ಸ್ವಾ, ವಿ, ಉಷಾ, ಶ್ರ, ರೇ ಈ ೯ ದ್ವಿತೀಯ ಪಾರ್ಶ್ವನಾಡೀ ನಕ್ಷತ್ರಗಳು

## ಇದಕ್ಕೆ ಫಲವು

**ಏಕನಾಡೀ ಪತಿಂಹಂತಿ ಪಾರ್ಶ್ವನಾಡೀಷು ಕನ್ಯಕಾಂ ॥**

ದಂಪತಿಗಳ ನಕ್ಷತ್ರಗಳು ಮಧ್ಯನಾಡೀ ನಕ್ಷತ್ರಗಳಲ್ಲಿದ್ದರೆ ಪುರುಷನಿಗೆ ಹಾನಿಕರವು, ಪಾರ್ಶ್ವನಾಡಿಗಳಲ್ಲಿದ್ದರೆ ಸ್ತ್ರೀಗೆ ನಾಶಕರವು.

## ವಶ್ಯಕೂಟ

**ಸಿಂಹಾಳಿಕರ್ಕಿವಣಿಜೌ ಕನ್ಯಾ ವೃಶ್ಚಿಕ ಕಾರ್ಮುಕೌ ।**
**ತುಲಾ ಮೀನ ಯುಮೌ ನಕ್ರ ಕನ್ಯಾ ಕರ್ಕಟಿಕಸ್ತಿಮಿಃ ।**
**ಮೇಷ ಕುಂಭಾವ್ರಜೌನಕ್ರ ಮೇಷಾದೇರ್ವಶ್ಯರಾಶಯಃ ॥**

ಮೇಷರಾಶಿಗೆ ಸಿಂಹ ವೃಶ್ಚಿಕಗಳು, ವೃಷಭಕ್ಕೆ ಕರ್ಕಾಟಕ ತುಲೆಗಳು, ಮಿಥುನಕ್ಕೆ ಕನ್ಯಾರಾಶಿಯು, ಕಟಕಕ್ಕೆ ವೃಶ್ಚಿಕ ಧನುಸ್ಸುಗಳು, ಸಿಂಹಕ್ಕೆ ತುಲೆಯು, ಕನ್ಯಾರಾಶಿಗೆ ಮೀನ ಮಿಥುನಗಳು, ತುಲಾರಾಶಿಗೆ ಮಕರ ಕನ್ಯೆಗಳು, ವೃಶ್ಚಿಕರಾಶಿಗೆ ಕಟಕವು, ಧನುರ್ರಾಶಿಗೆ ಮೀನರಾಶಿಯು, ಮಕರ ರಾಶಿಗೆ ಮೇಷ ಕುಂಭಗಳು, ಕುಂಭರಾಶಿಗೆ ಮೇಷರಾಶಿಯು, ಮೀನರಾಶಿಗೆ ಮಕರವು ಈ ಮೇರೆ ಇವುಗಳು ವಶ್ಯಗಳೆಂದು ತಿಳಿಯುವುದು.

## ವರ್ಣಕೂಟವು

**ಕರ್ಕ್ಯಂತೇವೃಶ್ಚಿಕೇವಿಪ್ರಾಃ ಕ್ಷತ್ರ್ಯ ಸಿಂಹ ಧನುಸ್ತುಲಾ ।**
**ಮೇಷಯುಗ್ಮಘಟಾ ವೈಶ್ಯಾ ಶೂದ್ರೋವೃಷಮೃಗಾಂಗನಾಃ ॥**

ಕರ್ಕಟ, ಮೀನ, ವೃಶ್ಚಿಕ ಈ ೩ ರಾಶಿಗಳು ಬ್ರಹ್ಮಜಾತಿ, ಸಿಂಹ, ಧನುಸ್ಸು, ತುಲಾ ಈ ೩ ಕ್ಷತ್ರಿಯಜಾತಿ, ಮೇಷ ಮಿಥುನ ಕುಂಭ ಈ ೩ ವೈಶ್ಯಜಾತಿ, ವೃಷಭ, ಮಕರ, ಕನ್ಯಾ ಈ ೩ ಶೂದ್ರಜಾತಿ, ಈ ರಾಶಿಗಳಲ್ಲಿ ಸ್ತ್ರೀಪುರುಷರು ಏಕಜಾತಿಯಾಗಿರುವುದು ಉತ್ತಮ

## ಯೋನಿಕೂಟವು

**ಅಶ್ವಂಗಜಮಜಂಸರ್ಪಂ ಸರ್ಪಿಣೀಶುನಮಾರ್ಜರೀ ।**
**ಅಜಾಮಾರ್ಜಾಲಮೂಷಶ್ಚ ಮೂಷಿಕಾವೃಷಮಾಹಿಷೀ ॥**
**ವ್ಯಾಘ್ರಶ್ಚಮಹಿಷೋವ್ಯಾಘ್ರೀ ಮೃಗೀಮೃಗಶುನಃಕಪಿಃ ।**
**ಗೋಷಂಡೋವಾನರೀಸಿಂಹೀ ತುರಗೀಸಿಂಹಗೋಗಜೀ ॥**

ಅಶ್ವಿನಿಗೆ ಯೋನಿಯು ಕುದುರೆ, ಭರಣಿಗೆ ಆನೆ, ಕೃತ್ತಿಕೆಗೆ ಮೇಕೆ,

ರೋಹಿಣಿಗೆ ಸರ್ಪವು, ಮೃಗಶಿರಕ್ಕೆ ಹೆಣ್ಣುಹಾವು, ಆರ್ದ್ರೆಗೆ ನಾಯಿ, ಪುನರ್ವಸುವಿಗೆ ಹೆಣ್ಣುಬೆಕ್ಕು, ಪುಷ್ಯಕ್ಕೆ ಹೆಣ್ಣುಮೇಕೆಯು, ಆಶ್ಲೇಷಕ್ಕೆ ಗುಂಡುಬೆಕ್ಕು, ಮಖಕ್ಕೆ ಇಲಿಯು, ಪುಬ್ಬೆಗೆ ಹೆಣ್ಣಿಲಿ, ಉತ್ತರೆಗೆ ಎತ್ತು, ಹಸ್ತಕ್ಕೆ ಎಮ್ಮೆಯು, ಚಿತ್ತೆಗೆ ಹುಲಿಯು, ಸ್ವಾತಿಗೆ ಕೋಣ, ವಿಶಾಖೆಗೆ ಹೆಣ್ಣುಹುಲಿ, ಅನೂರಾಧಕ್ಕೆ ಹೆಣ್ಣುಹುಲ್ಲೆಯು, ಜ್ಯೇಷ್ಠೆಗೆ ಗಂಡುಹುಲ್ಲೆಯು, ಮೂಲಕ್ಕೆ ಹೆಣ್ಣುನಾಯಿ, ಪೂರ್ವಾಷಾಢೆಗೆ ಕಪಿ, ಉತ್ತರಾಷಾಢೆಗೆ ಮುಂಗಸಿ, ಶ್ರವಣಕ್ಕೆ ಹೆಣ್ಣುಕೋತಿ, ಧನಿಷ್ಠೆಗೆ ಹೆಣ್ಣುಸಿಂಹ, ಶತಭಿಷಕ್ಕೆ ಹೆಣ್ಣುಕುದುರೆ, ಪೂರ್ವಾಭಾದ್ರೆಗೆ ಗಂಡುಸಿಂಹ, ಉತ್ತರಾಭಾದ್ರೆಗೆ ಹಸುವು, ರೇವತಿಗೆ ಹೆಣ್ಣಾನೆಯು ಈ ಮೇರೆ ನಕ್ಷತ್ರಗಳಿಗೆ ಯೋನಿಗಳನ್ನು ತಿಳಿಯುವುದು ಇವುಗಳಲ್ಲಿ ದಂಪತಿಗಳ ನಕ್ಷತ್ರಗಳು ವೈರವುಳ್ಳ ಯೋನಿಗಳಾದರೆ ವೈರವುಂಟಾಗುವುದು. ವೈರವರ್ಗವಿಲ್ಲದಿದ್ದರೆ ಶುಭವು. ಒಂದೇ ಯೋನಿಯಾಗಿದ್ದರೆ ಸರ್ವೋತ್ತಮವೆಂದು ತಿಳಿಯಬೇಕು.

## ವಿವಾಹಕ್ಕೆ ಯೋಗ್ಯವಾದ ಮಾಸಗಳು

**ಮಾಘ ಫಾಲ್ಗುಣ ವೈಶಾಖ ಜ್ಯೇಷ್ಠಮಾಸಾಶ್ಶುಭಪ್ರದಾಃ |**
**ಮಧ್ಯಮಂ ಕಾರ್ತಿಕೇ ಮಾರ್ಗಶೀರ್ಷೇಪ್ಯನಿಂದಿತಾಃಪರೇ ||**

ಮಾಘ, ಫಾಲ್ಗುನ, ವೈಶಾಖ, ಜ್ಯೇಷ್ಠ ಈ ೪ ತಿಂಗಳು ಉತ್ತಮಗಳು; ಕಾರ್ತಿಕ, ಮಾರ್ಗಶಿರ ಈ ೨ ಮಾಸಗಳು ಮಧ್ಯಮಗಳು, ಕಡಮೆ ಮಾಸಗಳು ಅಧಮಗಳು.

## ನಕ್ಷತ್ರಗಳು

**ಮೂಲಮೈತ್ರಮೃಗರೋಹಿಣೀಕರೈಃ ಪೌಷಮಾರುತಮಘೋತ್ತರಾನ್ವಿತೈಃ | ವೀರ್ಯವದ್ಭಿರುಡುಭಿರ್ಮೃಗೀದೃಶಾಂಪಾಣೀಪೀಡನ ವಿಧಿರ್ವಿಧೀಯತೇ ||**

ಮೂ, ಅನೂ, ಮೃಗ, ರೋ, ಹ, ರೇ, ಸ್ವಾ, ಮ, ಉಫ, ಉಷಾ. ಉಭಾ ಈ ೧೧ ವಿವಾಹಕ್ಕೆ ಶ್ರೇಷ್ಠ ನಕ್ಷತ್ರಗಳು.

**ಶುಭಕ್ಷಿತಯುತಾಶ್ಚಸ್ತಾ ಉದ್ವಾದೇಖಿಲರಾಶಯಃ |**
**ಶುಭಷಡ್ವರ್ಗಕೇಲಗ್ನೇಮಹಾದೋಷವಿವರ್ಜಿತೇ ||**

ಲಗ್ನದಲ್ಲಿ ಶುಭಗ್ರಹಗಳಿದ್ದರೂ ನೋಡಿದರೂ ಶುಭಕರವು, ಶುಭಷಡ್ವರ್ಗವು, ಲಗ್ನಕ್ಕೆ ಮಹಾದೋಷಗಳಿಲ್ಲದಿರುವಿಕೆಯು, ಇವೆಲ್ಲ ಶುಭಪ್ರದವು.

## ಲಗ್ನಬಲವು

**ಶುಕ್ರಂಪಂಚಸಹಸ್ರಾಣಿ ಬುಧಃಪಂಚಶತಾನಿಚ ।**
**ಲಕ್ಷಮೇಕಂತುದೋಷಾಣಾಂ ಗುರುಃಕೇಂದ್ರೇವ್ಯಪೋಹತಿ ॥**

ಶುಕ್ರನು ವಿವಾಹ ಲಗ್ನಕೇಂದ್ರಗಳಲ್ಲಿದ್ದರೆ ೫ ಸಾವಿರ ದೋಷಗಳನ್ನು ಹರಿಸುತ್ತಾನೆ, ಬುಧನು ಲಗ್ನಾದಿ ಕೇಂದ್ರಗಳಲ್ಲಿದ್ದರೆ ೫ ನೂರು ದೋಷಗಳನ್ನು ಹರಿಸುತ್ತಾನೆ, ಗುರುವು ಲಗ್ನಾದಿ ಕೇಂದ್ರಗಳಲ್ಲಿದ್ದರೆ ಲಕ್ಷ ದೋಷಗಳನ್ನು ಹರಿಸುತ್ತಾನೆ.

**ಕಾವ್ಯೇಗುರೌವಾಸೌಮ್ಯೇವಾ ಯಥಾಕೇಂದ್ರತ್ರಿಕೋಣಗೇ ।**
**ನಶ್ಯಂತಿ ಸಕಲಾ ದೋಷಾ ಪಾಪಾನೀವಹರಿಸ್ಮೃತಃ ॥**

ಶು, ಗು, ಬುಧರು ವಿವಾಹಲಗ್ನಕ್ಕೆ ಕೇಂದ್ರ ತ್ರಿಕೋಣಗಳಲ್ಲಿದ್ದರೆ ಹರಿಸ್ಮರಣೆಯು ಸರ್ವ ಪಾಪಗಳನ್ನು ಹರಿಸುವಂತೆ ಅವರು ಸಕಲ ದೋಷಗಳನ್ನೂ ಹರಿಸುವರು.

## ವಿವಾಹಕ್ಕೆ ಅಯೋಗ್ಯ ತಿಥಿಗಳು

**ಮಾಸಾಂತೇಪಂಚದಿವಸಾಃ ತ್ಯಜೇದ್ರಿಕ್ತಾಮಮಾಷ್ಟಮೀಂ ।**
**ಷಷ್ಠೀಂಚಪರಿಘಾದರ್ಧಂ ವ್ಯತೀಪಾತಶ್ಚವೈಧೃತಿಂ ॥**

ಮಾಸಾಂತ್ಯದಲ್ಲಿ ೫ ತಿಥಿಗಳು, ರಿಕ್ತತಿಥಿಗಳು, ಅಮಾವಾಸ್ಯೆ, ಅಷ್ಟಮೀ, ಷಷ್ಠಿ, ಪರಿಘಾಯೋಗದ ಪೂರ್ವಭಾಗವು, ವ್ಯತೀಪಾತ, ವೈಧೃತಿ ಇವುಗಳಲ್ಲಿ ವಿವಾಹವನ್ನು ಮಾಡಕೂಡದು.

**ಜಾಮಿತ್ರಾದ್ಯೇಕವಿಂಶಚ್ಚ ಮಹಾದೋಷವಿವರ್ಜಿತಂ ॥**

ಸಪ್ತಮಶುದ್ಧಿ ಇಲ್ಲದುದೇ ಮೊದಲಾದ ಇಪ್ಪತ್ತೊಂದು ಮಹಾದೋಷಗಳನ್ನು ಅವಶ್ಯ ಬಿಡತಕ್ಕದ್ದು

## ಸ್ತ್ರೀಗೆ ಗೃಹಪ್ರವೇಶ

**ವಿವಾಹಮಾರಭ್ಯವಧೂಪ್ರವೇಶೋ ಯುಗ್ಮೇ ತಿಥೌ ಷೋಡಶವಾಸರಾಂತೇ । ಪಂಚಾಂಗಶುದ್ಧಿಶ್ಚದಿನಂವಿನಾಪೀ ತಿಥೌನಸದ್ಗೋಚರಗೇಪಿಕಾರ್ಯಃ ॥**

ವಿವಾಹದ ದಿನ ಮೊದಲು ೧೬ ದಿನಗಳಲ್ಲಿ ಸ್ತ್ರೀಗೆ ಗೃಹಪ್ರವೇಶ ಮಾಡ ತಕ್ಕದ್ದು. ಈ ದಿನಗಳಲ್ಲಿ ದೋಷಗಳಿದ್ದರೂ ಮಾಡಬಹುದೆಂದು ಮುನಿಗಳು ಹೇಳಿದರು.

## ಋತುಕಾಲ ನಿರ್ಣಯವು

**ಕರಾದಿ ಪಂಚೋತ್ತರ ಮೂಲಪೌಷ್ಣ ವಿಷ್ಣುತ್ರಯಾಶ್ವೀಜ್ಯ ವಿಧೇಂದುಭೇಷು । ಆದ್ಯಂಕಜಸ್ಸೌಖ್ಯಸುತಾಯುರರ್ಧಸೌಭಾಗ್ಯ ವೃದ್ಧಿಂಕುರುತೇಂಗನಾನಾಂ ॥**

ಹ, ಚಿ, ಸ್ವಾ, ವಿ, ಅನೂ, ಉತ್ತ್ರ, ಉಷಾ, ಉಭಾ, ಮೂ, ರೇ, ಶ್ರ, ಧ, ಶತ, ಅ, ರೋ, ಮೃ, ಪು ಈ ನಕ್ಷತ್ರಗಳಲ್ಲಿ ಕನ್ಯೆಯು ಮೊದಲು ಋತು ವಾದರ ಸೌಖ್ಯ, ಸಂತಾನ, ಆಯುಸ್ಸು, ಧನಲಾಭ, ಸೌಭಾಗ್ಯ, ಯಶೋ ವೃದ್ಧಿ ಇವುಗಳುಂಟಾಗುವುವು

## ವರ್ಜ್ಯ ತಿಥಿಗಳು

**ಅಮಾರಿಕ್ತಾಚಷಷ್ಠೀಚ ದ್ವಾದಶೀವ್ರತಪರ್ವಸು ।**
**ಪರಿಘಸ್ಯಚಪೂರ್ವಾರ್ಧೆ ವ್ಯತಿಪಾತೇಚವೈಧೃತೌ ।**
**ಸಂಧ್ಯೋರುಪ್ಲವೇವಿಷ್ಟ್ಯಾಮಶುಭಂಪ್ರಥಮಾರ್ತವಂ ॥**

೪-೬-೮-೯-೧೨-೧೪-೧೫-೩೦ ಈ ತಿಥಿಗಳು, ಪರಿಘಾಪೂರ್ವಾರ್ಧವು, ವ್ಯತೀಪಾತ ವೈಧೃತಿಗಳು ಭದ್ರಾಕರಣವು, ಸಂಧ್ಯಾಕಾಲವು, ಸೂರ್ಯಚಂದ್ರ ಗ್ರಹಣಗಳು ಇವುಗಳಲ್ಲಿ ಮೊದಲು ಋತುವಾಗಕೂಡದು.

**ಬುಧಶುಕ್ರೇಂದುಜೀವಾನಾಂ ವಾರೇಷು ಶುಭದಂಭವೇತ್ ।**
**ಶುಭಾನಾಮಂಶಕಂಶ್ರೇಷ್ಟಮಾರ್ತವೇ ಪ್ರಥಮೇ ಶುಭಂ ॥**

ಬು, ಶು, ಚಂ, ಗು, ಇವರುಗಳ ವಾರಗಳು ರಾಶಿಗಳು, ಅಂಶಗಳು ಅವುಗಳೆಲ್ಲವೂ ಶುಭಕರಗಳು

## ನಿಷೇಕ ಕಾಲ

**ವಿಷ್ಣುಪ್ರಜೇಶ ರವಿಮಿತ್ರಸಮೀರಪೌಷ್ಣಮೂಲೋತ್ತರಾವರುಣ ಭಾನೀನಿಷೇಕಕಾರ್ಯೇ । ಪೂಜ್ಯಾನಿಪುಷ್ಯವಸುಶೀತಕರಾಶ್ವಿಚಿತ್ರಾ ದಿತ್ಯಾಶ್ಚಮಧ್ಯಮಫಲಾವಿಫಲಾಸು ರನೇ॥**

ಶ್ರ, ರೋ, ಹ, ಅನೂ, ಸ್ವಾ, ಶೇ, ಮೂ, ಉತ್ತ, ಉಭಾ, ಶತ ಈ ನಕ್ಷತ್ರಗಳು ನಿಷೇಕಕ್ಕೆ ಯೋಗ್ಯಗಳು. ಪುಷ್ಯ, ಧ, ಮೃ, ಅಶ್ವಿ, ಚಿ, ಪುನ, ಈ ನಕ್ಷತ್ರಗಳು ಮಧ್ಯಮಗಳು. ಉಳಿದ ನಕ್ಷತ್ರಗಳು ಅಧಮಗಳು.

**ಷಷ್ಟ್ಯಷ್ಟಮೀಂ ಪಂಚದಶೀಂ ಚತುರ್ಥೀಂ ಚತುರ್ದಶೀಮಪ್ಯುಭಯತ್ರ ಹಿತ್ವಾ । ಶೇಷಾಶ್ಶುಭಾಸ್ಯುಸ್ತಿಥಯೋ ನಿಷೇಕೇ ವಾರಾಶ್ಶಶಾಂಕಾರ್ಯಸಿತೇಂದುಜಾನಾಂ ॥**

೪-೬-೮-೧೪-೧೫-೩೦ ಈ ತಿಥಿಗಳನ್ನು ಬಿಟ್ಟು ಕಡಿಮೆ ತಿಥಿಗಳಲ್ಲಿಯೂ ಸೋಮ, ಬುಧ, ಗುರು ಶುಕ್ರವಾರಗಳಲ್ಲಿಯೂ ನಿಷೇಕವು ಶುಭಕರವು.

**ವೃಷಭಮಿಥುನಕರ್ಕಿಸಿಂಹಕನ್ಯಾ ತುಲಘಟಚಾಪಝಷಾಶ್ಶುಭಾವಹಂತಿ । ಯದಿಶುಭಫಲಶಾಲಿನೋನುಕೂಲೇ ನಿಧನಮಿಶುದ್ಧಯುತೇ ನಿಷೇಕಕಾರ್ಯೇ॥**

ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ಕುಂಭ, ಧನಸ್ಸು, ಮೀನ ಈ ರಾಶಿಗಳು ಶುಭಗ್ರಹಗಳು, ಇವುಗಳು ಕೇಂದ್ರಾದಿ ಸ್ಥಾನಗಳಲ್ಲಿ ಬಲವಂತರಾಗಿ ಕೂಡಿರುವಾಗಲೂ ಅಷ್ಟಮಶುದ್ಧಿ ಇರುವಾಗಲೂ ನಿಷೇಕ ಮಾಡುವದು ಒಳ್ಳೆಯದು.

## ಪುಂಸವನ ಕಾಲವು

**ಕುರ್ಯಾತ್ಪುಂಸವನಂ ಪ್ರಸಿದ್ಧವಿಷಯೇ ಮಾಸೆ ತೃತೀಯೇಥವಾ ಗರ್ಭಸ್ಪಷ್ಟತನೌ ತುಷಾರಕಿರಣೇಪುಷ್ಯೇಥವಾವೈಷ್ಣವೇ । ಹಿತ್ವಾ ಕರ್ಕಟಕಸ್ಯಯುಗ್ಮಮಖಿಲೇಷ್ವನ್ಯೇಷ್ವರಿಕ್ತೇತಿಥೌಶುದ್ಧೇನೈಧನಧಾಮ್ನಿ ಶುಕ್ರಶಶಭೃದ್ವಿಣ್ಮಂತ್ರಿಣಾಂವಾಸರೇ ॥**

ಪುಂಸವನವು ಪ್ರಸಿದ್ಧವಾದ ಮೂರನೇ ತಿಂಗಳಲ್ಲಿ ಮಾಡತಕ್ಕ ಕರ್ಮವು ಅಥವಾ ಗರ್ಭವು ಸ್ಪಷ್ಟವಾಗಿ ತಿಳಿದ ತರುವಾಯ ಮಾಡತಕ್ಕದ್ದು ; ಮತ್ತು ಮೃ, ಪುಷ್ಯ ಈ ೨ ನಕ್ಷತ್ರಗಳಲ್ಲಿಯೂ, ಅಥವಾ ಶ್ರವಣ ನಕ್ಷತ್ರದಲ್ಲಿ ಮಾಡಬಹುದು. ಕರ್ಕಾಟಕ, ಕನ್ಯಾ, ಮಿಥುನ ರಾಶಿಗಳಲ್ಲಿಯೂ, ರಿಕ್ತ ತಿಥಿಗಳನ್ನು ಬಿಟ್ಟು ಅಷ್ಟಮಶುದ್ಧಿ ಇರುವಾಗಲೂ ಶುಕ್ರ, ಸೋಮ, ಬುಧ, ಗುರುವಾರಗಳಲ್ಲಿಯೂ ಪುಂಸವನ ಮಾಡುವದು ಒಳ್ಳೆಯದು.

## ಸೀಮಂತ ಕಾಲವು

**ಚತುರ್ಥೇ ಷಷ್ಠೇ ಷ್ಟಮಮಾಸಿಭಾಜಿ ಸೌರೇಣಗರ್ಭಂಪ್ರಥಮಂ ವಿಧೇಯಂ। ಸೀಮಂತಕರ್ಮದ್ವಿಜಭಾಮಿನೀನಾಂ ಮಾಸೇ ಷ್ಟಮೇ ವಿಷ್ಣು ಬಲಿಂ ಚ ಕುರ್ಯಾತ್ ॥**

ಬ್ರಾಹ್ಮಣಸ್ತ್ರೀಯರಿಗೆ ಪ್ರಥಮ ಗರ್ಭವು ಪ್ರಕಾಶವಾಗಿ ತಿಳಿಯ ಬರುವಾಗ ೪-೬-೮ ಈ ತಿಂಗಳುಗಳಲ್ಲಿ ಸೀಮಂತವು ಮಾಡತಕ್ಕದ್ದು. ೮ನೇ ತಿಂಗಳಲ್ಲಿ ವಿಷ್ಣು ಬಲಿಯನ್ನೂ ಮಾಡತಕ್ಕದ್ದು.

**ಸೀಮಂತೇತಿಷ್ಯಹಸ್ತಾದಿತಿ ಹರಿ ಶಶಭೃತ್ಪೌಷ್ಣ ವಿಧ್ಯುತ್ತರಾಖ್ಯಾಃ ಪಕ್ಷಚ್ಛಿದ್ರಾಂಚರಿಕ್ತಾಂ ಪಿತೃತಿಥಿಮಸಹಾಯಾಪರೇಸ್ಯುಃ ಪ್ರಶಸ್ತಾಃ। ಸಿಂಹಾಳಿ ವರ್ಜಯೇತ್ವಾಶುಭಫಲಬಹುಳಾರಾಶಯೋ ವ್ಯಂಶುಕಾನಿಶ್ರೇಷ್ಠಾಸ್ಯುಶ್ಶೀತರೋಚೀಭೃಗುಬುಧಧಿಷಣಾನಾಂ ವಿಶುದ್ಧೇಷ್ಟಮೇಪಿ ॥**

ಸೀಮಂತದಲ್ಲಿ ಪುಷ್ಯ, ಹ, ಪುನ, ಶ್ರ, ಮೃ, ರೇ, ರೋ, ಉತ್ತ, ಉಷಾ, ಉಭಾ ಈ ನಕ್ಷತ್ರಗಳು ಮುಖ್ಯವಾದವು. ಪಕ್ಷಚ್ಛಿದ್ರಗಳು, ರಿಕ್ತಿತಿಥಿಗಳು, ಪಿತೃತಿಥಿಗಳು, ಸಿಂಹ, ವೃಶ್ಚಿಕ ರಾಶಿಗಳು ಇವುಗಳನ್ನು ಬಿಟ್ಟು ಮಿಕ್ಕಾದ ರಾಶ್ಯಂಶಗಳಲ್ಲಿಯೂ, ತಿಥಿಗಳಲ್ಲಿಯೂ, ಸೋಮ,ಬುಧ,ಗುರು, ಶುಕ್ರ ಪ್ರಬಲವಾಗಿರುವಾಗಲೂ, ಅಷ್ಟಮಶುದ್ಧಿ ಇರುವಾಗಲೂ ಸೀಮಂತವು ಶುಭಕರವು

## ಯಾತ್ರಾ ಪ್ರಕರಣವು--ತಿಥಿಶೂಲಗಳು

**ಪ್ರತಿಪನ್ನವಮೀಪೂರ್ವೇ ದ್ವಿತೀಯೇದಶಮೋತ್ತರೇ।**
**ತೃತೀಯೇಕಾದಶೀಯಾಗ್ನೇಚತುರ್ದ್ವಾದಶನೈಋತಾ ॥**
**ಪಂಚತ್ರಯೋದಶೀಯಾಮ್ಯೇ ಜಲೇಷಷ್ಠಿ ಚತುರ್ದಶೀ।**
**ಸಪ್ತಮೀಪೂರ್ಣವಾಯವ್ಯಾಂಅಮಾವಾಸ್ಯಾಷ್ಟಮೀಶಯೋಃ॥**

೧-೯ ಈ ತಿಥಿಗಳಲ್ಲಿ ಪೂರ್ವದಿಕ್ಕಿಗೂ, ೨-೧೦ಗಳಲ್ಲಿ ಉತ್ತರದಿಕ್ಕಿಗೂ, ೩-೧೧ಗಳಲ್ಲಿ ಆಗ್ನೇಯಕ್ಕೂ, ೪-೧೨ನೈರುತ ದಿಕ್ಕಿಗೂ, ೫-೧೩ಗಳಲ್ಲಿ ದಕ್ಷಿಣ ದಿಕ್ಕಿಗೂ, ೬-೧೪ ಗಳಲ್ಲಿ ಪಶ್ಚಿಮಕ್ಕೂ, ೭-೧೫ ಗಳಲ್ಲಿ ವಾಯುವ್ಯಕ್ಕೂ, ೩೦-೮ ಈಶಾನ್ಯಕ್ಕೂ ಹೋಗಕೂಡದು. ಇದೇ ತಿಥಿಶೂಲಗಳು.

## ವಾರಶೂಲೆಗಳು

**ನಪೂರ್ವೇಶನಿಸೋಮೇಚ ನ ಗುರು ದಕ್ಷಿಣಸ್ತಥಾ ।**
**ನಪಶ್ಚಾದ್ಭಾನುಶುಕ್ರೇಚನೋತ್ತರೇ ಬುಧ ಮಂಗಳೇ ॥**

ಶನಿ ಸೋಮವಾರಗಳಲ್ಲಿ ಪೂರ್ವದಿಕ್ಕಿಗೂ, ಗುರುವಾರದಲ್ಲಿ ದಕ್ಷಿಣಕ್ಕೂ, ಆದಿತ್ಯ ಶುಕ್ರವಾರಗಳಲ್ಲಿ ಪಶ್ಚಿಮಕ್ಕೂ, ಮಂಗಳ ಬುಧವಾರಗಳಲ್ಲಿ ಉತ್ತರಕ್ಕೂ ಪ್ರಯಾಣ ಮಾಡಬಾರದು.

## ಪ್ರಯಾಣಕ್ಕೆ ಮುಖ್ಯ ನಕ್ಷತ್ರಗಳು

**ಮೃಗಾಶ್ವಿನೀ ಪುಷ್ಯ ಪುನರ್ವಸೂಚಹಸ್ತಾನುರಾಧಾ ಶ್ರವಣಂಚ ಮೂಲಾ ಧನಿಷ್ಠರೇವತ್ಯಗತೇಪ್ರಯಾಣೇ ಫಲಂಲಭೇಚ್ಛೀಘ್ರ ನಿವರ್ತನಂಚ ॥**

ಮೃ, ಅಶ್ವಿ, ಪುಷ್ಯ, ಪುನ, ಹ, ಅನೂ, ಮೂ, ಧ, ರೇ, ಈ ನಕ್ಷತ್ರಗಳು ಪ್ರಯಾಣದಲ್ಲಿ ಶುಭಫಲಗಳನ್ನು ಕೊಡುವುವು.

## ಯೋಗಿನಿ

**ಶತಮಖೇಂದು ಹುತಾಶನ ರಕ್ಷಸಾಯಮಜಲೇಶ ಸಮೀರಣ ಶೂಲಿನಾಂ । ದಿವಿಭುವಿಕ್ರಮಶಃಪರಿವರ್ತತೇ ಸಿತತಿಪ್ರಥಮಾದಿಷು ಯೋಗಿನೀ ॥**

ಶು ೧-೧೦, ಬು ೬, ಈ ತಿಥಿಗಳಲ್ಲಿ ಪೂರ್ವದಿಕ್ಕಿನಲ್ಲಿಯೂ, ಶು ೨-೧೨, ಬ ೭ ಇವುಗಳಲ್ಲಿ ಉತ್ತರ ದಿಕ್ಕಿನಲ್ಲಿಯೂ, ಶು ೩-೧೩, ಬ ೮ರಲ್ಲು ಆಗ್ನೇಯದಲ್ಲಿಯೂ, ಶು ೪-೧೪, ಬ ೯ರಲ್ಲು ನೈಋತ್ಯದಿಕ್ಕಿನಲ್ಲಿಯೂ, ಶು ೫-೧೫, ಬ ೧೦ರಲ್ಲು ದಕ್ಷಿಣದಲ್ಲಿಯೂ ಶು ೬ ಬ ೩೦ ರಲ್ಲು ಪಶ್ಚಿಮದಲ್ಲಿಯೂ, ಶು ೭, ಬ ೨-೧೨ರಲ್ಲು ವಾಯುವ್ಯದಲ್ಲಿಯೂ, ಶು ೮ ಬ ೩-೧೩ರಲ್ಲು ಈಶಾನ್ಯದಲ್ಲಿಯೂ, ಶು ೯ ಬ ೪-೧೪ರಲ್ಲು ಆಕಾಶದಲ್ಲಿಯೂ, ಶು ೧೦ ಬ ೫-೩೦ರಲ್ಲು ಭೂಮಿಯಲ್ಲಿಯೂ ಯೋಗಿನಿ ಇರುವುದರಿಂದ ಆಯಾ ತಿಥಿಗಳಲ್ಲಿ ಆಯಾ ದಿಕ್ಕುಗಳಿಗೆ 'ಯಾತ್ರೆ' ಹೋಗಕೂಡದು.

**ಅಜಾಳಿಕನ್ಯಾಘಟಕೀಟಭೇಷು ಯಾತ್ರಾಂನಶೋಯಃ ಕುರುತೇಸ್ತಿಮೃತ್ಯುಃ ॥**

ಮೇಷ, ಸಿಂಹ, ಕನ್ಯೆ, ವೃಶ್ಚಿಕ, ಕುಂಭ ಈ ರಾಶಿಗಳಲ್ಲಿ ಪ್ರಯಾಣ ಮಾಡುವವರಿಗೆ ಅನಿಷ್ಟ ಸಂಭವಿಸುವುದು.

## ನರಿಕೂಗು, ಶೀನು, ದನಗಳಶೀನು ಇವುಗಳಿಗೆ ಫಲವು

**ಪ್ರಾಗಾದೌಶನಿವಾಸರಾದಿಗದಿತಾಃ ಸೂರ್ಯೋದಯೇಷ್ಟಾಗ್ರಹಾಃ**
**ನಾಗಾನಾಗಾನಿಧೀ ನಿಶಿನಭೋ ನಾದೋನಸೋನಾಡಿಕಾಃ ।**
**ಹಾನಿಪ್ರೀತಿದುರುಕ್ತೀಬಂಧುಕನಕಸ್ನಿಗ್ಧಾನ್ನತಾಪಾರ್ತಿದಾಃ ।**
**ಶ್ರೂತುಃ ಕ್ರೋಷ್ಟುರುತೇಕ್ಷುತೇ ಫಲಮಿದಂ ವ್ಯತ್ಯಸ್ಸದಾ**
**ಗೋಕ್ಷುತಂ ॥**

ಶನಿವಾರ ಹಗಲು ೩೦ ಘಳಿಗೆ ಮೂಡಲ ದಿಕ್ಕಿನಲ್ಲಿಯೂ, ಆ ರಾತ್ರಿ ೩೦ ಘಳಿಗೆ ಆಗ್ನೇಯದಲ್ಲೂ, ಆದಿತ್ಯವಾರ ಹಗಲು ೩೦ ಘಳಿಗೆ ದಕ್ಷಿಣ ದಿಕ್ಕಿನಲ್ಲಿಯೂ, ಆ ರಾತ್ರಿ ೩೦ ಘಳಿಗೆ, ಸೋಮವಾರದಲ್ಲಿ ೬೦ ಘಳಿಗೆ, ಅಂತು ೯೦ ಘಳಿಗೆ ನೈಋತ್ಯ ದಿಕ್ಕಿನಲ್ಲಿಯೂ, ಮಂಗಳವಾರ ಹಗಲು ೩೦, ರಾತ್ರಿ ೨೦, ಅಂತು ೫೦ ಘಳಿಗೆ ಪಶ್ಚಿಮದಲ್ಲೂ, ಆ ರಾತ್ರಿ ಉಳಿದ ೧೦ ಘಳಿಗೆಯು, ಬುಧವಾರ ಹಗಲು ೩೦ ಘಳಿಗೆ, ಅಂತು ೪೦ ಘಳಿಗೆ ವಾಯುವ್ಯದಲ್ಲೂ, ಬುಧವಾರ ರಾತ್ರಿ ೩೦ ಘಳಿಗೆ, ಬೃಹಸ್ಪತಿವಾರದಲ್ಲಿ ೫೦, ಅಂತು ೫೦ ಘಳಿಗೆವರೆಗೂ ಉತ್ತರದಲ್ಲೂ, ಆ ರಾತ್ರಿಯಲ್ಲಿ ಉಳಿದ ೧೦ ಘಳಿಗೆಯು, ಶುಕ್ರವಾರ ೬೦ ಘಳಿಗೆಯು, ಅಂತು ೭೦ ಘಳಿಗೆ ಈಶಾನ್ಯದಲ್ಲೂ, ಸೂರ್ಯನು ಮೊದಲು ರಾಹುವರಿಗೆ ೮ ಗ್ರಹಗಳು ವಾಸಮಾಡುತ್ತಾರೆ ನರಿಕೂಗು, ಶೀನು, ದನಗಳ ಶೀನು ಇವುಗಳು ಈ ವಾರಗಳಲ್ಲಿ ರಾಜಸಿರುವ ದಿಕ್ಕಿನಲ್ಲಿಯಾದರೆ ಹಾನಿಕರವು. ಅದಕ್ಕೆ ಫಲವು :—೨ನೇ ದಿಕ್ಕಿನಲ್ಲಿ ವಿಶ್ವಾಸವು, ೩ನೇ ದಿಕ್ಕಿನಲ್ಲಿ ಕೆಟ್ಟಮಾತು, ೪ನೇ ದಿಕ್ಕಿನಲ್ಲಿ ಬಂಧುಲಾಭವು, ೫ನೇ ದಿಕ್ಕಿನಲ್ಲಿ ಸ್ವರ್ಣಲಾಭವು, ೬ನೇ ದಿಕ್ಕಿನಲ್ಲಿ ಭೋಜನಸೌಖ್ಯವು, ೭ನೇ ದಿಕ್ಕಿನಲ್ಲಿ ವ್ಯಸನವು, ೮ನೇ ದಿಕ್ಕಿನಲ್ಲಿ ಪೀಡೆಯು ಈ ಮೇರೆ ಕ್ರಮವಾಗಿ ಫಲಗಳನ್ನು ತಿಳಿಯತಕ್ಕದ್ದು.

ಮುಹೂರ್ತದೀಪಿಕೆಯು ಸಂಪೂರ್ಣವಾದುದು

---

# ಮುಹೂರ್ತ ದರ್ಪಣವು

ಯಶ್ಶೇಷಸ್ಸತತಂಸಹಸ್ರಫಣವಾನೇಕೇನಮೂರ್ಧ್ನಾರ್ವಹರ್ಣ ।
ಬ್ರಹ್ಮಾಂಡಾನಿಬಹೂನಿಪಂಕಜದಳಪ್ರಾಯೇಣವಿಭ್ರಾಜತೇ ।
ತಂಶೇಕ್ಷ್ಣಂದಧತಂಸ್ವನಾಮುಚರಣೇಸಂನೂಪುರಾಭಂಮುದಾ ।
ತಾರ್ಕ್ಷ್ಯಗೋಪರಿಸಂಸ್ಥಿತಂ ಸುರಯುತಂ
ಶ್ರೀವೆಂಕಟೇಶಂ ಭಜೇ ॥

ತ್ರಿಮೂರ್ತಿರೂಪಿಣಂ ದೇವಂ ತ್ರಯೀವೇದ್ಯಂಶುಭಾವಹಂ ।
ತ್ರಿಗುಣಾತೀತಮವ್ಯಕ್ತಂ ವಂದೇ ಸೂರ್ಯಂ ಸದಾವಿಭುಂ ।
ನಾರದೇನಕೃತಂಯಚ್ಚ ಮುಹೂರ್ತಾಹ್ವಯದರ್ಪಣಂ ।
ತಟ್ಟೀಕಾಂಪ್ರಾರಭೇಬಾಲ ಬೋಧಾಯಸುಮನೋಹರಾಂ ॥

ತ್ರಿಮೂರ್ತಿಸ್ವರೂಪನಾಗಿಯೂ, ವೇದವೇದ್ಯನಾಗಿಯೂ, ಶುಭಪ್ರದನಾಗಿಯೂ, ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳನ್ನು ಮೀರಿದವನಾಗಿಯೂ, ಸೂಕ್ಷ್ಮರೂಪನಾಗಿಯೂ ಇರುವ ಸೂರ್ಯದೇವರನ್ನು ಯಾವಾಗ್ಯೂ ವಂದಿಸುತ್ತೇನೆಂಬುದಾಗಿ ಈ ಕವಿಯು ಗ್ರಂಥಾದಿಯಲ್ಲಿ ಇಷ್ಟದೇವತಾ ನಮಸ್ಕಾರರೂಪವಾದ ಮಂಗಳವನ್ನು ರಚಿಸಿದನು. ಪೂರ್ವಕಾಲದಲ್ಲಿ ನಾರದರಿಂದ ಮಾಡಲ್ಪಟ್ಟ ಮುಹೂರ್ತದರ್ಪಣವೆಂಬ ಗ್ರಂಥವನ್ನು ಬಾಲಕರು ಸುಲಭವಾಗಿ ತಿಳಿಯತಕ್ಕ ಬಗ್ಯೆ ಅದಕ್ಕೆ ಟೀಕೆಯನ್ನು ಮಾಡುತ್ತೇನೆ.

## ನಾಮನಕ್ಷತ್ರಗಳ ಕ್ರಮವು

ಚೂಚೇಚೋಲಾಸ್ತುಚಾಶ್ವಿನ್ಯಃ ಲೀಲೂಲೇಲೋಭರಣ್ಯಪಿ ।
ಆಈಊಏಕೃತ್ತಿಕಾ ಚ ಓವಾವೀವೂಚ ರೋಹಿಣೀ ।
ವೇವೋಕಾಕೀಮೃಗಶಿರಃ ಕೂಕಂಜಛಾಚ ರೌದ್ರಕಂ ।
ಕೇಕೋಹಾಹೀಪುನರ್ವಸ್ಸುಃ ಹೂಹೇಹೋಡಾಚಪುಷ್ಯಭಂ ।
ಡೀಡೂಡೇಡೋಚಆಶ್ಲೇಷಾ ಮಾಮೀಮೂಮೇಮಖಾತಥಾ।
ಮೋಟಾಟೀಟೂಪೂರ್ವಭಂಚ ಟೇಟೋಪಾಪೀತುಚಾರ್ಯಭಂ ।
ಪೂಷಣಾಠಾಚಹಸ್ತಶ್ಚ ಪೇಪೋರಾರೀಚಚಿತ್ರಭಂ ।

ರೂರೇರೋತಾನಾಯುಋಕ್ಷಂ ತೀತೂತೇತೋವಿಶಾಖಭಂ ।
ನಾನೀನೂನೇಚಮಿತ್ರರ್ಕ್ಷನೋ ಯಾಯಿಯಾಯುಂತು ಚೈತ್ರಭಂ।
ಯೇಯೋಬಾಬೀ ಚ ಮೂಲರ್ಕ್ಷೇ ಬೂಧಾಬಾಢಾ ಚ ತೋಯಭಂ ।
ಬೇಬೋಜಾಜೀಚವಿಶ್ವೇಚ ಜೂಜೇಜೋಖಾಚವಿಷ್ಣು ಭಂ ।
ಗಾಗೀಗೂಗೇವಾಸವೇಚ ಗೋಸಾಸೀಸೂಚವಾರುಣಂ ।
ಸೇಸೋದಾದೀಪ್ರೋಷ್ಠಭೇಚದುಶ್ಚಂಚಾಥಾಹಿಬುಧ್ನ್ಯಭೇ ।
ದೇದೋಚಾಚಿಚ ಪೌಷ್ಣೇಚ ಯಿತ್ಯೇತಾನಾಮತಾರಕಾಃ ।

ಮನುಷ್ಯರಿಗೆ ಜನ್ಮನಕ್ಷತ್ರಗಳು ತಿಳಿಯದೆ ಇದ್ದರೆ ಅವರುಗಳ ಹೆಸರಿನ ಮೊದಲನೇ ಅಕ್ಷರದಿಂದ ಅವರ ನಕ್ಷತ್ರವನ್ನು ತಿಳಿದುಕೊಳ್ಳುವ ಕ್ರಮವೆಂತೆಂದರೆ.—ಚೂಚೇಚೋಲಾ ಅಶ್ವಿನೀ, ಅಂದರೆ ಈ ನಾಲ್ಕು ಅಕ್ಷರಗಳಿಗೂ ಅಶ್ವಿನೀ ನಕ್ಷತ್ರ, ಹೇಗಂದರೆ ಚುಕ್ಕಾ, ಚೂರ್ಣಾ ಎಂಬ ಹೆಸರುಳ್ಳವನಿಗೆ ಅಶ್ವಿನೀ ೧ನೇ ಪಾದವಾಗುತ್ತದೆ, ಚನ್ನಾ ಎಂಬ ಹೆಸರುಳ್ಳವನಿಗೆ ಅಶ್ವಿನೀ ೨ನೇ ಪಾದ, ಚೊಕ್ಕಾ ಎಂಬ ಹೆಸರುಳ್ಳವನಿಗೆ ಅಶ್ವಿನೀ ೩ನೇ ಪಾದ ಲಕ್ಷ್ಮಣಾ ಎಂಬ ಹೆಸರುಳ್ಳವನಿಗೆ ಅಶ್ವಿನಿ ೪ನೇ ಪಾದ ಈ ಮೇರೆಗೆ ೨೭ ನಕ್ಷತ್ರಗಳಿಗೂ ನಕ್ಷತ್ರ ೧ಕ್ಕೆ ನಾಲ್ಕು ಅಕ್ಷರಗಳ ಮೇರೆ ತಿಳಿಯತಕ್ಕದ್ದು. ಚೂಚೇಚೋಲಾ ಅಶ್ವಿನಿ, ಲೀಲೂಲೇಲೋ ಭರಣೀ, ಆಈ ಊ ಏ ಕೃತ್ತಿಕಾ, ಓವಾವೀವೂ ರೋಹಿಣೀ, ವೇವೋಕಾಕೀ ಮೃಗಶಿರ, ಕೂಖಂಜಛಾ ಆರ್ದ್ರಾ, ಕೇಕೋಹಾಹೀ ಪುನರ್ವಸು, ಹೂಹೇಹೋಡಾ ಪುಷ್ಯಮಿ, ಡೀಡೂಡೇಡೋ ಆಶ್ಲೇಷ, ಮಾಮಿಮೂಮೇ ಮಖ, ಮೋಟಾಟೀಟೂ ಪುಬ್ಬ, ಟೇಟೋಪಾಪೀ ಉತ್ತರ, ಪೂಷಂನಾಥಾ ಹಸ್ತ, ಪೇಪೋರಾರಿ ಚಿತ್ತ, ರೂರೇರೋತಾ ಸ್ವಾತಿ, ತೀತುತೇತೋ ವಿಶಾಖ, ನಾನೀನೂನೇ ಅನೂರಾಧ, ನೋಯಾಯಿಯೂ ಜ್ಯೇಷ್ಠ, ಯೇಯೋಬಾಬೀ ಮೂಲ, ಬೂಧಾ ಬಾಢಾ ಪೂರ್ವಾಷಾಢ, ಬೇಬೋಜಾಜಿ ಉತ್ತರಾಷಾಢ, ಜೂಜೇಜೋಖಾ ಶ್ರವಣಂ, ಗಾಗೀಗೂಗೆ ಧನಿಷ್ಠ, ಗೋಸಾಸೀಸೂ ಶತಭಿಷಕ್, ಸೇಸೋದಾದೀ ಪೂರ್ವಾಭಾದ್ರ, ದುಶ್ಯಂಚಾಥಾ ಉತ್ತರಾಭಾದ್ರ, ದೇದೋಚಾಚೀ ರೇವತಿ ಈ ಪ್ರಕಾರವಾಗಿ ತಿಳಿದುಕೊಳ್ಳತಕ್ಕದ್ದು.

# ಸಂಯುಕ್ತಾಕ್ಷರಗಳುಳ್ಳ ನಾಮಗಳಿಗೆ ನಕ್ಷತ್ರಗಳನ್ನು ತಿಳಿಸುವ ಗ್ರಂಥಾಂತರ ಉದಾಹರಣೆಗಳು

**ಕೃಷ್ಣೋಹೃಷ್ಣಶ್ರೀಧರಃ ಕ್ಷೇತ್ರಪಾಲೋ ಜ್ಞಾನೋಭೀಮೋ ಭೈರವಶ್ಚೇತಿನಾಮ್ನಾಂ । ಇಂದುರ್ಸ್ವಾಯುತವಷ್ಟುಹಸ್ತಾದ್ರ್ರ ಪುಷ್ಯಾಃಪೂರ್ವಾಷಾಢಾಚೇತಿಋಕ್ಷಾಣಿಸಪ್ತ ॥**

ಕೃಷ್ಣನೆಂಬ ಹೆಸರಿಗೆ ಮೃಗಶಿರಾ ನಕ್ಷತ್ರವು, ಅದರ ೩ ನೇ ಪಾದವು ಕೃಷ್ಣನೆಂಬ ಹೆಸರಿಗೆ ಸ್ವಾತೀ ನಕ್ಷತ್ರವು ಅದರ ೧ನೇ ಪಾದವು ಶ್ರೀಧರನೆಂಬ ಹೆಸರಿಗೆ ಹಸ್ತಾ ನಕ್ಷತ್ರವು, ಅದರ ೪ನೇ ಪಾದವು ಕ್ಷೇತ್ರಪಾಲಕನೆಂಬ ಹೆಸರಿಗೆ ಹಸ್ತಾನಕ್ಷತ್ರವು, ಅದರ ೨ನೇ ಪಾದವು ಜ್ಞಾನನೆಂಬ ಹೆಸರಿಗೆ ಆದ್ರ್ರಾ ನಕ್ಷತ್ರವು, ಅದರ ೩ನೇ ಪಾದವು ಭೀಮನೆಂಬ ಹೆಸರಿಗೆ ಪುಷ್ಯನಕ್ಷತ್ರವು, ಅದರ ೩ನೇ ಪಾದವು ಭೈರವನೆಂಬ ಹೆಸರಿಗೆ ಪೂರ್ವಾಷಾಢಾ ನಕ್ಷತ್ರವು, ಅದರ ೩ನೇ ಪಾದವೆಂಬುದಾಗಿ ತಿಳಿದುಕೊಳ್ಳಬೇಕು ಈ ಕ್ರಮವು ಅವಕಹಡಾದಿ ಚಕ್ರದಲ್ಲಿ ಹೇಳಲ್ಪಟ್ಟಿದೆ.

ತರುವಾಯ ನಕ್ಷತ್ರಗಳ ಕ್ಷಿಪ್ರ, ದಾರುಣ, ಮೃದು, ಸ್ಥಿರ, ಉಗ್ರ, ಸಾಧಾರಣ, ಚರ ಎಂಬ ಸಂಜ್ಞೆಯನ್ನು ತಿಳಿಸುತ್ತಾನೆ.

**ಕ್ಷಿಪ್ರಂದಸ್ರ ರವಿಜ್ಯಮಾಸುರ ಶಿವಜ್ಯೇಷ್ಠೋರಗಂ ದಾರುಣಂ। ಚಿತ್ರಾಂತ್ಯೇಂದುಭ ಮೈತ್ರಭಂ ಮೃದುಭವೇದ್ಬ್ರಾಹ್ಮೋತ್ತರಾ ಭಂ ಸ್ಥಿರಂ ॥ ಉಗ್ರಂ ಕಾಲಮುಖಾತ್ರಿ ಪೂರ್ವಮನಲೇಂದ್ರಾ ಗ್ನೀತು ಸಾಧಾರಣಂ । ಸ್ವಾತ್ಯಾದಿತ್ಯಹರಿತ್ರಯಂಚರಮಿದಂದ ದ್ಯಾತ್ಸ್ವಸಂಜ್ಞಾಫಲಂ ॥**

ಅಶ್ವಿನಿ, ಹಸ್ತ, ಪುಷ್ಯ ಈ ೩ ಕ್ಷಿಪ್ರನಕ್ಷತ್ರಗಳು ಅಂದರೆ ಶೀಘ್ರವಾದವುಗಳು. ಮೂ, ಆದ್ರ್ರ, ಜ್ಯೇಷ್ಠ, ಆಶ್ಲೇಷ ಈ ೪ ದಾರುಣ ನಕ್ಷತ್ರಗಳು, ಅಂದರೆ ಕ್ರೂರಗಳು ಚಿತ್ತ, ರೇ, ಮೃ, ಅನು ಈ ೪ ಮೃದು ನಕ್ಷತ್ರಗಳು. ರೋ, ಉತ್ತ, ಉಷಾ, ಉಭಾ ಈ ೪ ಸ್ಥಿರನಕ್ಷತ್ರಗಳು. ಭ, ಮಖ, ಹುಬ್ಬೆ, ಪೂಷಾ, ಪೂಭಾ, ಈ ೫ ಉಗ್ರ ನಕ್ಷತ್ರಗಳು. ಕೃ, ವಿ ಈ ೨ ಸಾಧಾರಣ ನಕ್ಷತ್ರಗಳು. ಸ್ವಾ, ಪುನ, ಶ್ರ, ಧ, ಶತ ಈ ೫ ಚರನಕ್ಷತ್ರಗಳು. ಇಲ್ಲಿ

ಹೇಳಲ್ಪಟ್ಟ ಸಂಜ್ಞೆಗಳ ಮೇಲೆ ನಕ್ಷತ್ರಗಳು ಫಲವನ್ನು ಕೊಡುತ್ತವೆ, ಅಂದರೆ ಕ್ಷಿಪ್ರ ನಕ್ಷತ್ರಗಳು ಶೀಘ್ರಫಲವನ್ನೂ, ದಾರುಣನಕ್ಷತ್ರಗಳು ಕ್ರೂರಫಲವನ್ನೂ ಮೃದು ನಕ್ಷತ್ರಗಳು ಮೃದುಫಲವನ್ನೂ, ಸ್ಥಿರ ನಕ್ಷತ್ರಗಳು ಸ್ಥಿರಫಲವನ್ನೂ, ಉಗ್ರ ನಕ್ಷತ್ರಗಳು ಗ್ರಹಫಲವನ್ನೂ, ಸಾಧಾರಣ ನಕ್ಷತ್ರಗಳು ಸಾಮಾನ್ಯ ಫಲವನ್ನೂ, ಚರನಕ್ಷತ್ರಗಳು ಚಂಚಲ ಫಲವನ್ನೂ ಕೊಡುತ್ತವೆಂದು ತಾತ್ಪರ್ಯವು.

## ತರುವಾಯ ನಕ್ಷತ್ರಗಳ ಅಧಿಪತಿಗಳನ್ನು ಹೇಳುತ್ತಾನೆ

**ಖುಕ್ಷೇಶಾದಥದಸ್ರಕಾಲ ಹುತಿಭುಗ್ಬ್ರಹ್ಮೇದುರುದ್ರಾದಿತಿ ।**
**ಜ್ಯಾನಾಗಾಃ ಪಿತರೋ ಭಗಾರ್ಯಮರವಿತ್ವಷ್ಟ್ರಾಶುಗಾಖ್ಯಾಃ**
**ಕ್ರಮಾತ್ । ಇಂದ್ರಾಗ್ನೀಅಪಿಮಿತ್ರಶಕ್ರದನುಜಾನ್ತೋಯಾಖ್ಯ**
**ವಿಶ್ವಾತ್ಮಭೂ । ಶ್ರೀಶಾಖ್ಯಾವಸುತೋಯಪಾಜಿಚರಣಾಹಿರ್ಬು**
**ಧ್ನ್ಯಹ್ವಪೂಷಾಹ್ವಯಾಃ ॥**

ಅಶ್ವಿನಿಗೆ ಅಶ್ವಿನೀ ದೇವತೆಗಳು, ಭರಣಿಗೆ ಯಮಧರ್ಮರಾಯನು, ಕೃತ್ತಿಕೆಗೆ ಅಗ್ನಿಯು, ರೋಹಿಣಿಗೆ ಬ್ರಹ್ಮದೇವನು, ಮೃಗಶಿರಕ್ಕೆ ಚಂದ್ರನು, ಆರ್ದ್ರೆಗೆ ಶಿವನು, ಪುನರ್ವಸುವಿಗೆ ಅದಿತಿದೇವಿಯು, ಪುಷ್ಯಕ್ಕೆ ಬೃಹಸ್ಪತಿಯು, ಆಶ್ಲೇಷಕ್ಕೆ ಆದಿಶೇಷನು, ಮಖೆಗೆ ಪಿತೃದೇವತೆಗಳು, ಪುಬ್ಬೆಗೆ ಭಗನೆಂಬ ಸೂರ್ಯಮೂರ್ತಿಯು, ಉತ್ತರೆಗೆ ಅರ್ಯಮನೆಂಬ ಸೂರ್ಯಮೂರ್ತಿಯು, ಹಸ್ತಕ್ಕೆ ಸೂರ್ಯನು, ಚಿತ್ತೆಗೆ ಇಂದ್ರನು, ಸ್ವಾತಿಗೆ ವಾಯುವು, ವಿಶಾಖೆಗೆ ಇಂದ್ರಾಗ್ನಿಗಳು, ಅನೂರಾಧೆಗೆ ಮಿತ್ರನೆಂಬ ಸೂರ್ಯಮೂರ್ತಿಯು, ಜ್ಯೇಷ್ಠೆಗೆ ದೇವೇಂದ್ರನು, ಮೂಲಕ್ಕೆ ನಿರಋತಿಯು, ಪೂರ್ವಾಷಾಢೆಗೆ ಉದಕವು, ಉತ್ತರಾಷಾಢೆಗೆ ವಿಶ್ವೇದೇವನು, ಅಭಿಜಿತ್ತಿಗೆ ಬ್ರಹ್ಮನು, ಶ್ರವಣಕ್ಕೆ ವಿಷ್ಣುವು, ಧನಿಷ್ಠೆಗೆ ಅಷ್ಟವಸುಗಳು, ಶತಭಿಷಕ್ಕಿಗೆ ವರುಣನು, ಪೂರ್ವಾಭಾದ್ರೆಗೆ ಅಜೈಕಚರಣನು, ಉತ್ತರಾಭಾದ್ರೆಗೆ ಅಹಿರ್ಬುಧ್ನ್ಯನು, ರೇವತಿಗೆ ಪೂಷನೆಂಬ ಸೂರ್ಯಮೂರ್ತಿಯು ಎಂಬುದಾಗಿ ಈ ಮೇರೆ ಕ್ರಮದಿಂದ ೨೮ ನಕ್ಷತ್ರಗಳಿಗೆ ೨೮ ದೇವತೆಗಳೆಂದು ತಿಳಿಯುವದು. ಇಲ್ಲಿ ಹೇಳಲ್ಪಟ್ಟ ಸೂರ್ಯನ ಮೂರ್ತಿಗಳು ದ್ವಾದಶಾದಿತ್ಯರಲ್ಲಿ ಸೇರಿದವರೆಂದು ತಿಳಿಯಬೇಕು.

## ಅಂಧಕಾದಿ ನಕ್ಷತ್ರಗಳು

**ಅರ್ಕಸ್ಥಿತರ್ಕ್ಷಾದಿ ಚತುರ್ಭಿರಂಧಾಃ ಷಡ್ಭಿರ್ದ್ವಿನೇತ್ರಂನವವ್ಯೈಕ ನೇತ್ರಂ। ನೇತ್ರಾಣಿ ಯುಗ್ಮಾನಿತಥೈವಪಂಚತ್ರೀಣ್ಯಾಹುರಂಧಾಃ ಕ್ರಮಶಃ ಫಲಾನಿ ॥**

ಸೂರ್ಯನಿರುವ ನಕ್ಷತ್ರ ಮೊದಲು ೪ ನಕ್ಷತ್ರಗಳು ಕುರುಡು ನಕ್ಷತ್ರಗಳು, ತರುವಾಯ ೬ ನಕ್ಷತ್ರಗಳು ಎರಡು ಕಣ್ಣುಳ್ಳವು, ತರುವಾಯ ೫ ನಕ್ಷತ್ರಗಳು ಹಾಗೆಯೇ ಎರಡು ಕಣ್ಣುಳ್ಳವು. ತರುವಾಯ ೨ ನಕ್ಷತ್ರಗಳು ಕುರುಡು ನಕ್ಷತ್ರಗಳು ಈ ನಕ್ಷತ್ರಗಳು ತಮ್ಮ ತಮ್ಮ ಸ್ವಭಾವ ಫಲಗಳನ್ನು ಕೊಡುವುವು.

## ಜೀವನಿರ್ಜೀವ ನಕ್ಷತ್ರಗಳು

**ಅರ್ಕೇಣಮುಕ್ತಸ್ಥಿತಿಗಮ್ಯತಾರಾ ಸ್ತ್ರಿಸ್ರೋಮೃತಾಸಪ್ತತುಚಾರ್ಧಜೀವಾಃ। ಏಕೋಮೃತೋಷ್ಟೌಚಸುಪೂರ್ಣಜೀವಾ ಏಕೋಮೃತಸ್ಸಪ್ತಮುಪಾದಜೀವಾಃ ॥**

ಸೂರ್ಯನು ಯಾವ ನಕ್ಷತ್ರವನ್ನು ಬಿಟ್ಟು ಯಾವ ನಕ್ಷತ್ರದಲ್ಲಿ ಇದ್ದು ಯಾವ ನಕ್ಷತ್ರಕ್ಕೆ ಹೋಗುವನೋ ಆ ೩ ನಕ್ಷತ್ರಗಳು ಮೃತನಕ್ಷತ್ರಗಳು, ಅದರ ಮೇಲೆ ೭ನಕ್ಷತ್ರ ಅರ್ಧಜೀವಿಗಳು, ತರುವಾಯ ಒಂದು ನಕ್ಷತ್ರ ನಿರ್ಜೀವ ನಕ್ಷತ್ರವು, ತರುವಾಯ ೮ ನಕ್ಷತ್ರಗಳು ಸಂಪೂರ್ಣ ಜೀವವುಳ್ಳವು, ತರುವಾಯ ಒಂದು ನಿರ್ಜೀವ ನಕ್ಷತ್ರವು, ತರುವಾಯ ೭ ನಕ್ಷತ್ರಗಳು ಪಾದಜೀವ ನಕ್ಷತ್ರಗಳು, ಅಂದರೆ ಸೂರ್ಯನು ಭರಣೀ ನಕ್ಷತ್ರದಲ್ಲಿ ಇರುವಾಗ ಅಶ್ವಿನೀ, ಭ, ಕೃ, ಈ ಮೂರು ಮೃತನಕ್ಷತ್ರಗಳು, ತರುವಾಯ ರೋ, ಮೃ, ಆದ್ರಾ, ಪುನ, ಪುಷ್ಯ, ಆಶ್ಲೇ, ಮಖ ಈ ೭ ನಕ್ಷತ್ರಗಳು ಅರ್ಧಜೀವ ನಕ್ಷತ್ರಗಳು, ಹುಬ್ಬೆ ನಕ್ಷತ್ರವು ಮೃತನಿರ್ಜೀವ ನಕ್ಷತ್ರವು, ಉತ್ತರ, ಹಸ್ತ, ಚಿ, ಸ್ವಾ, ವಿಶಾ, ಅನೂ, ಜ್ಯೇ, ಮೂ ಈ ೮ ನಕ್ಷತ್ರಗಳು ಪೂರ್ಣಜೀವ ನಕ್ಷತ್ರಗಳು, ಪೂರ್ವಾಷಾಢ ನಕ್ಷತ್ರವು ನಿರ್ಜೀವ ನಕ್ಷತ್ರವು, ತರುವಾಯ ಉಷಾ, ಶ್ರ, ಧ, ಶತ, ಪೂಭಾ, ಉ.ಭಾದ್ರ, ರೇ ಈ ೭ ನಕ್ಷತ್ರಗಳು ಪಾದಜೀವ ನಕ್ಷತ್ರಗಳೆಂದು ತಿಳಿಯತಕ್ಕದ್ದು.

# ನಕ್ಷತ್ರತ್ಯಾಜ್ಯ ಘಟಿಕಾ ಪ್ರಮಾಣಗಳು

**ಖಾಕ್ಷ್ಣಾಜಿನಾವ್ಯೋಮಗುಣಾಃ ಖವೇದಾಶ್ಶಕ್ರಾಃ ಕುದಸ್ರಾಃ ಖಗುಣಾನಖಾಶ್ಚ। ದಂತಾಃ ಖರಾಮಾಶ್ಚನಖಾಃ ಪುರಾಣಾರ್ಭೂ ಬಾಹವೋವ್ಯೋಮಕರಾಸ್ತುಶಕ್ರಾಃ ॥ ಇಂದ್ರಾದಿಶೋದುಶ್ಚವ ನೇಚಸಾಕ್ಷ್ಣಾಜೀವಾನಖಾದಿಗ್ದಶನಾಗಚಂದ್ರಾಃ। ನೃಪಾಶ್ಚಸಿದ್ಧಾಃ ಖಗುಣಾವಿಷಾಖ್ಯಾನಾಡ್ಯಶ್ಚತಸ್ರಸ್ತದುಪರ್ಯಘಸ್ಸ್ಯಾತ್ ॥**

ಅಶ್ವಿನಿಗೆ ೫೦, ಭರಣಿಗೆ ೨೦, ಕೃತ್ತಿಕೆಗೆ ೩೦, ರೋಹಿಣಿಗೆ ೪೦, ಮೃಗಶಿರಕ್ಕೆ ೧೪, ಆರ್ದ್ರೆಗೆ ೨೧, ಪುನರ್ವಸುವಿಗೆ ೩೦, ಪುಷ್ಯಕ್ಕೆ ೨೦, ಆಶ್ಲೇಷಕ್ಕೆ ೩೨, ಮಖಗೆ ೩೦, ಹುಬ್ಬೆಗೆ ೨೦, ಉತ್ತರಕ್ಕೆ ೧೮, ಹಸ್ತಕ್ಕೆ ೨೧, ಚಿತ್ರೆಗೆ ೨೦, ಸ್ವಾತಿಗೆ ೧೪, ವಿಶಾಖೆಗೆ ೧೪, ಅನೂರಾಧೆಗೆ ೧೦, ಜ್ಯೇಷ್ಠಕ್ಕೆ ೧೪, ಮೂಲಕ್ಕೆ ೫೬, ಪೂರ್ವಾಷಾಢೆಗೆ ೨೪, ಉತ್ತರಾಷಾಢೆಗೆ ೨೦, ಶ್ರವಣಕ್ಕೆ ೧೦, ಧನಿಷ್ಠೆಗೆ ೧೦, ಶತಭಿಷೆಗೆ ೧೮, ಪೂರ್ವಾಭಾದ್ರೆಗೆ ೧೬, ಉತ್ತರಾಭಾದ್ರೆಗೆ ೨೪, ರೇವತಿಗೆ ೩೦ ಈ ಮೇರೆ ನಕ್ಷತ್ರತ್ಯಾಜ್ಯಗಳನ್ನು ಈ ನಕ್ಷತ್ರಗಳಿಗೆ ಇಲ್ಲಿ ಹೇಳಲ್ಪಟ್ಟ ಅಂಕೆಗಳಮೇಲೆ ೩||| ಘಳಿಗೆ ವಿಷಘಳಿಗೆ ಎಂದು ತಿಳಿಯತಕ್ಕದ್ದು. ಮೂಲಾ ನಕ್ಷತ್ರಕ್ಕೆ ಮಾತ್ರ ೨೦ ಘಳಿಗೆ ಮೇಲೆಯೂ ೧ ತ್ಯಾಜ್ಯವಿದೆಯೆಂದು ಗ್ರಂಥಾಂತರದಲ್ಲಿ ಹೇಳಲ್ಪಟ್ಟಿದೆ.

# ನಕ್ಷತ್ರಾಂಶ ರಾಶಿಗಳು

**ಸಪ್ತವಿಂಶತಿಭಂಜ್ಯೋತಿಶ್ಚಕ್ರಂತಿಮಿರವಾಯುಜಃ ।**
**ತದುಷ್ಣಾಂಶೋರ್ಭವೇದ್ರಾಶಿರ್ನವರ್ಕ್ಷಚರಣಾಂಕಿತಃ ॥**

ಅಂಧಕಾರ ವಾಯುಗಳ ಸಂಯೋಗದಿಂದುಂಟಾದ ಜ್ಯೋತಿಶ್ಚಕ್ರವು ೨೭ ನಕ್ಷತ್ರರೂಪವಾಗುತ್ತವೆ. ಆ ನಕ್ಷತ್ರಗಳ ಪಾದಗಳು ೯ ಸೇರಿ ಒಂದೊಂದು ರಾಶಿಯಾಗಿ ಸೂರ್ಯನ ಗ್ರಹಗಳಾಗುತ್ತವೆ. ಹೇಗೆಂದರೆ..ಅಶ್ವಿನಿಯ ಪಾದ ೪, ಭರಣಿಯ ಪಾದ೪, ಕೃತ್ತಿಕೆಯಪಾದ ೧, ಅಂತು ೯ ಪಾದ ಮೇಷರಾಶಿ, ಕೃತ್ತಿಕೆಯಲ್ಲಿ ಉಳಿದ ಪಾದ ೩, ರೋಹಿಣಿಯಪಾದ ೪, ಮೃಗಶಿರದಪಾದ ೨, ಅಂತು ೯ ಪಾದ ವೃಷಭರಾಶಿ , ಮೃಗಶಿರದಲ್ಲಿ ಉಳಿದ ಪಾದ ೨, ಆರ್ದ್ರಾ ೪, ಪುನ ೩ ಅಂತು ೯ ಪಾದಗಳು ಮಿಥುನರಾಶಿಯು , ಪುನ ೧, ಪುಷ್ಯ ೪, ಆಶ್ಲೇ ೪ ಅಂತು

೯ ಪಾದಗಳು ಕಟಕರಾಶಿಯು, ಮಖೆ ೪, ಹುಬ್ಬೆ ೪, ಉತ್ತ ೧ ಅಂತು ೯ ಪಾದ ಗಳು ಸಿಂಹರಾಶಿಯು, ಉತ್ತರೆ ೩, ಹಸ್ತ ೪, ಚಿತ್ತ ೨ ಅಂತು ೯ ಪಾದಗಳು ಕನ್ಯಾರಾಶಿಯು, ಚಿತ್ತ ೨, ಸ್ವಾತೀ ೪, ವಿಶಾಖೆ ೩ ಅಂತು ೯ ಪಾದಗಳು ತುಲೆಯು; ವಿಶಾಖೆ ೧, ಅನೂ ೪, ಜ್ಯೇ ೪ ಅಂತು ೯ ಪಾದಗಳು ವೃಶ್ಚಿಕವು, ಮೂಲ ೪, ಪೂಷಾ ೪, ಉಷಾ ೧ ಅಂತು ೯ ಪಾದಗಳು ಧನುಸ್ಸು; ಉಷಾ ೩, ಶ್ರ ೪, ಧನಿ ೨ ಅಂತು ೯ ಪಾದಗಳು ಮಕರವು, ಧನಿಷ್ಠ ೨, ಶತ ೪, ಪುಭಾ ೩ ಅಂತು ೯ ಪಾದಗಳು ಕುಂಭವು, ಪೂಭಾ ೧, ಉತ್ತ ಭಾ ೪, ರೇ ೪ ಅಂತು ೯ ಪಾದಗಳು ಮೀನರಾಶಿಯೆಂದು ತಿಳಿಯತಕ್ಕದ್ದು, ಮತ್ತು ೨೭ ನಕ್ಷತ್ರಗಳನ್ನು ೯ ಆವರ್ತಿ ತಿರಿಗಿಸಿದರೆ ೩ ನಕ್ಷತ್ರಕ್ಕೆ ೧೨ ರಾಶಿಗಳ ಮೇರೆ ಅಂಶರಾಶಿಗಳಾಗುತ್ತವೆ ಹೇಗಂದರೆ —ಅಶ್ವಿನೀ ೧ನೇಪಾದಕ್ಕೆ ಮೇಷಾಂಶವು, ೨ನೇ ಪಾದಕ್ಕೆ ವೃಷಭಾಂಶವು, ೩ನೇ ಪಾದಕ್ಕೆ ಮಿಥುನಾಂಶವು, ೪ನೇ ಪಾದಕ್ಕೆ ಕಟಕಾಂಶವು, ಭರಣಿ ೧ನೇ ಪಾದಕ್ಕೆ ಸಿಂಹಾಂಶವು, ೨ನೇ ಪಾದಕ್ಕೆ ಕನ್ಯಾಂಶವು, ೩ನೇ ಪಾದಕ್ಕೆ ತುಲಾಂಶವು, ೪ನೇ ಪಾದಕ್ಕೆ ವೃಶ್ಚಿಕಾಂಶವು, ಕೃತ್ತಿಕೆ ೧ನೇ ಪಾದಕ್ಕೆ ಧನುರಾಂಶವು, ೨ನೇ ಪಾದಕ್ಕೆ ಮಕರಾಶಂವು, ೩ನೇ ಪಾದಕ್ಕೆ ಕುಂಭಾಂಶವು, ೪ನೇ ಪಾದಕ್ಕೆ ಮೀನಾಂಶವು, ಈ ಮೇರೆ ೨೭ ನಕ್ಷತ್ರಗಳಿಗೂ ೩ನೇ ನಕ್ಷತ್ರಕ್ಕೆ ೧೨ ರಾಶ್ಯಂಶಗಳ ಮೇರೆ ತಿಳಿಯುವುದು.

## ಮೇಷಾದಿ ರಾಶಿಗಳು

**ಮೇಷೋಗೌರ್ಮಿಥುನಃ ಕರ್ಕೀ ಹರಿಃ ಕನ್ಯಾವಣಿಕತ್ತ್ರಃ ।**
**ಕೌರ್ಪಿಚಾಪೌನಕ್ರಕುಂಭೌಮೀನೋಮೇಷಾದಿತೋಭವೇತ್॥**

ಮೇಷ, ವೃಷಭ, ಮಿಥುನ, ಕಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನುಸ್ಸು, ಮಕರ, ಕುಂಭ, ಮೀನ ಎಂಬುದಾಗಿ ತಿಳಿಯುವುದು.

## ರಾಶ್ಯಾಧಿಪತಿಗಳು

**ಸಿಂಹಸ್ಯಾಧಿಪತಿಸೂರ್ಯಃ ಕರ್ಕಟಿಸ್ಯನಿಶಾಕರಃ ।**
**ಮೇಷವೃಶ್ಚಿಕಯೋರ್ಭೌಮಃ ಕನ್ಯಾಮಿಥುನಯೋರ್ಬುಧಃ ।**
**ಕೋದಂಡಮೀನಯೋರ್ಮಂತ್ರೀ ತುಲಾವೃಷಭಯೋರ್ಭೃಗುಃ**
**ನಕ್ರಸ್ಯಕುಂಭರಾಶೇಶ್ಚನಾಯಕಸ್ಸೂರ್ಯನಂದನಃ ॥**

ಸಿಂಹಕ್ಕೆ ಸೂರ್ಯನು, ಕಟಕಕ್ಕೆ ಚಂದ್ರನು, ಮೇಷ ವೃಶ್ಚಿಕಕ್ಕೆ ಅಂಗಾರಕನು, ಮಿಧುನ ಕನ್ಯಗಳಿಗೆ ಬುಧನು, ಧನುಸ್ಸು ಮೀನಗಳಿಗೆ ಗುರುವು, ವೃಷಭ ತುಲೆಗಳಿಗೆ ಶುಕ್ರನು, ಮಕರ ಕುಂಭಗಳಿಗೆ ಶನಿಯೂ ಅಧಿಪತಿಗಳೆಂದು ತಿಳಿಯಬೇಕು.

## ಮೇಷಾದಿರಾಶಿ ಘಟಿಕಾಪ್ರಮಾಣಗಳು

**ವಸ್ವಬ್ಧಿದಸ್ರಾಃ ಶರಶೈಲಪಕ್ಷಾಗುಣೇಂದು ರಾಮಾಃ ಗುಣದೈವತಾನಿ । ಕೃಶಾನುದಂತಾಪಸುಖಾಗ್ನಯಸ್ಸ್ಯುರ್ಮೇಷಾದಿಷಡ್ವ್ಯುತ್ಕ್ರಮತಃ ಪರೇಸ್ಯುಃ ॥**

ಮೇಷರಾಶಿಗೆ ೪-೮, ವೃಷಭರಾಶಿಗೆ ೪-೩೫, ಮಿಧುನರಾಶಿಗೆ ೫-೧೩, ಕಟಕರಾಶಿಗೆ ೫-೩೩, ಸಿಂಹರಾಶಿಗೆ ೫-೨೨, ಕನ್ಯಾರಾಶಿಗೆ ೫-೮, ತುಲಾರಾಶಿಗೆ ೫-೮, ವೃಶ್ಚಿಕರಾಶಿಗೆ ೫-೨೨, ಧನುರ್ರಾಶಿಗೆ ೫-೩೩, ಮಕರರಾಶಿಗೆ ೫-೧೩, ಕುಂಭರಾಶಿಗೆ ೪-೩೫, ಮೀನರಾಶಿಗೆ ೪-೮, ಈ ರೀತಿಯಾಗಿ ಮೇಷಾದಿರಾಶಿ ಘಟಿಕಾ ಪ್ರಮಾಣವನ್ನು ತಿಳಿಯತಕ್ಕದ್ದು.

## ಇದರಲ್ಲಿ ಕೆಲವರ ಮತ

**ಮೀನಮೇಷೌಚತುರ್ದಂಡೀ ಗೋಕುಂಭೌ ಚತುರರ್ಧಕಂ ।**
**ಪಂಚಪಾದೋಯುಗ್ಮಮೃಗೌ ಪಂಚಾರ್ಧಂಚಾಪಕರ್ಕಿಣೌ ॥**
**ಕೌರ್ಪಿಸಿಂಹೌಚಪಂಚಾರ್ಧಂ ಪಂಚಪಾದಸ್ತುಲಾಂಗನೆ ।**
**ಮೇಷಾದೀನಾಂತುಲಗ್ನಾನಾಂ ಮಾನಮೇವಂವಿದುರ್ಬುಧಾಃ ॥**

ಮೀನ ಮೇಷಗಳು ೪ ಘಳಿಗೆಗಳು, ವೃಷಭ ಕುಂಭಗಳು ೪, ಮಿಧುನ ಮಕರಗಳು ೫।, ಧನುಸ್ಸು ಕಟಕಗಳು ೫।, ವೃಶ್ಚಿಕ ಸಿಂಹಗಳು ೫॥, ಕನ್ಯಾ ತುಲಾ ೫। ಘಳಿಗೆಗಳೆಂದು ತಿಳಿಯಬೇಕು

## ಚರ ಸ್ಥಿರ ದ್ವಿಸ್ವಭಾವ ರಾಶಿಗಳು

**ಚರಸ್ಥಿರದ್ವಿಸ್ವಭಾವೋಮೇಷಾದಿಃ ಕ್ರಮಶೋಭವೇತ್ ॥**

ಮೇಷ ಚರರಾಶಿ, ವೃಷಭ ಸ್ಥಿರರಾಶಿ, ಮಿಧುನ ದ್ವಿಸ್ವಭಾವರಾಶಿ, ಈ ಮೇರೆ ಕಟಕ ಮೊದಲು ೩-೩ ರಾಶಿಗಳು ಚರ, ಸ್ಥಿರ, ದ್ವಿಸ್ವಭಾವರಾಶಿಗಳೆಂದು ತಿಳಿಯುವುದು.

# ಲಗ್ನತ್ಯಾಜ್ಯಗಳು

**ಅಜವೃಷಭಧನುಃ ಕನ್ಯಕಾದೌಭುಜಂಗಃ ಝುಷಮಕರಕುಳೀರೇ ವೃಶ್ಚಿಕಾಂತೇನಚ ರಾಹುಃ। ಮಿಥುನ ಘಟತುಲಾನಾಂಸಿಂಹ ಮಧ್ಯೇತು ಗೃಧ್ರಃ ಸಕಲಮುನಿಮತಂಸ್ಯಾತ್ಸರ್ವಕಾರ್ಯೇಷು ವರ್ಜ್ಯಂ ॥**

ಮೇಷ, ವೃಷಭ, ಧನುಸ್ಸು, ಕನ್ಯಾ, ಈ ೪ ರಾಶಿಗಳಿಗೂ ಮೊದಲು ಅರ್ಧಘಳಿಗೆ ತ್ಯಾಜ್ಯವು, ಸರ್ಪರೂಪವಾಗಿರುವುದು, ಮೀನ, ಮಕರ, ಕರ್ಕಟಕ, ವೃಶ್ಚಿಕ, ಈ ರಾಶಿಗಳಲ್ಲಿಯೂ ಅಂತ್ಯದಲ್ಲಿ ಅರ್ಧಘಳಿಗೆ ತ್ಯಾಜ್ಯವು ವರಾಹ ರೂಪವಾಗಿ ಇರುವುದು. ಮಿಥುನ, ತುಲಾ, ಸಿಂಹ, ಕುಂಭ, ಇವುಗಳ ಮಧ್ಯದಲ್ಲಿ ಅರ್ಧ ಘಳಿಗೆ ತ್ಯಾಜ್ಯವು ಗೃಧ್ರರೂಪವಾಗಿ ಇರುವುದು.

# ಉಚ್ಚ ನೀಚರಾಶಿಗಳು ಪರಮೋಚ್ಚ ಪರಮ ನೀಚರಾಶಿಗಳು

**ಅಜವೃಷಭ ಮೃಗಾಂಗನಾಕುಳೀರಾಃ ಝುಷವಣಿಜೌದಿವಾಕರಾದಿತುಂಗಾಃ । ದಶಶಿಖಿಮನುಯುಕ್ತಿಥೀಂದ್ರಿಯಾಂಶೈಃಸ್ತ್ರೀನವಕವಿಂಶತಿಭಿಶ್ಚತೇಸ್ತನೀಚಾಃ ॥**

ಸೂರ್ಯಾದಿ ೭ ಗ್ರಹಗಳಿಗೆ ಮೇಷಾದಿ ೭ ರಾಶಿಗಳು ಉಚ್ಚನೀಚ ಸ್ಥಾನಗಳು, ಹೇಗೆಂದರೆ.—ಸೂರ್ಯನಿಗೆ ಮೇಷ ಉಚ್ಚಸ್ಥಾನ, ಅದಕ್ಕೆ ೭ನೇದು ತುಲಾರಾಶಿ ನೀಚಸ್ಥಾನ, ಚಂದ್ರನಿಗೆ ವೃಷಭ ಉಚ್ಚಸ್ಥಾನ, ಅದಕ್ಕೆ ೭ನೇ ವೃಶ್ಚಿಕ ನೀಚಸ್ಥಾನ, ಅಂಗಾರಕನಿಗೆ ಮಕರ ಉಚ್ಚಸ್ಥಾನ, ಅದಕ್ಕೆ ೭ನೇ ಕಟಕ ನೀಚಸ್ಥಾನ, ಬುಧನಿಗೆ ಕನ್ಯಾರಾಶಿ ಉಚ್ಚಸ್ಥಾನ, ಅದಕ್ಕೆ ೭ನೇ ಮೀನ ನೀಚಸ್ಥಾನ, ಶುಕ್ರನಿಗೆ ಮೀನ ಉಚ್ಚಸ್ಥಾನ, ಅದಕ್ಕೆ ೭ನೇ ಕನ್ಯೆನೀಚಸ್ಥಾನ, ಶನಿಗೆ ತುಲೆ ಉಚ್ಚಸ್ಥಾನ, ಅದಕ್ಕೆ ೭ನೇ ಮೇಷ ನೀಚಸ್ಥಾನ, ಈ ಮೇರೆ ತಿಳಿಯತಕ್ಕದ್ದು

# ಮೂಲತ್ರಿಕೋಣ ರಾಶಿಗಳು

**ಸಿಂಹಗೋಮೇಷಪಾಥೋನಧನುಸ್ತೌಲಘಟೇಷು ಚ ।**
**ಕನ್ಯಾವೇಗ್ನಿಖಖುಕ್ಷಂಚರವಿಪ್ರಾಣೋಧಿಶಸ್ತಥಾ ।**
**ತ್ರಿಪಂಚವಿಂಶತಿಸ್ಸಂಖ್ಯಾ ಭಾಗೋಮೂಲತ್ರಿಕೋಣಗಃ ॥**

ಸೂರ್ಯನಿಗೆ ಸಿಂಹದಲ್ಲಿ ೨೦ ಭಾಗಗಳು ಮೂಲತ್ರಿಕೋಣ,೧೦ ಭಾಗ ಸ್ವಕ್ಷೇತ್ರ,|ಚಂದ್ರನಿಗೆ ವೃಷಭದಲ್ಲಿ ೩ ಭಾಗ ಉಚ್ಚ, ಮಿಕ್ಕ ೨೭ ಭಾಗ ಮೂಲ ತ್ರಿಕೋಣ,|ಅಂಗಾರಕನಿಗೆ ಮೇಷದಲ್ಲಿ ೧೦ ಭಾಗ ಮೂಲತ್ರಿಕೋಣ, ಮಿಕ್ಕ ಭಾಗಗಳು ಸ್ವಕ್ಷೇತ್ರಗಳು,| ಬುಧನಿಗೆ ಕನ್ಯೆಯಲ್ಲಿ ೧೬-೧೭-೧೮-೧೯-೨೦ ಈ ೫ ಭಾಗಗಳು ಮೂಲತ್ರಿಕೋಣಗಳು,|ಬೃಹಸ್ಪತಿಗೆ ಧನುರ್‍ರಾಶಿಯಲ್ಲಿ ೧೦ ಭಾಗ ಗಳು ಮೂಲತ್ರಿಕೋಣಗಳು,|ಶುಕ್ರನಿಗೆ ತುಲೆಯಲ್ಲಿ ೧೫ ಭಾಗ ಮೂಲತ್ರಿ ಕೋಣ;|ಶನಿಗೆ ಕುಂಭರಾಶಿಯಲ್ಲಿ ೨೦ ಭಾಗ ಮೂಲತ್ರಿಕೋಣವೆಂದು ತಿಳಿಯ ತಕ್ಕದ್ದು.

## ಮಿತ್ರಶತ್ರು ಸಮಗ್ರಹಗಳು

**ಶತ್ರೂಮಂದಸಿತೌಸಮಶ್ಚಶಿಸುತೋ ಮಿತ್ರಾಣಿಶೇಷಾರವೇಃ|**
**ಸ್ತೀಕ್ಷ್ಣಾಂಶುರ್ಹಿಮರಶ್ಮಿಜಶ್ಚಸುಹೃದೌಶೇಷಾಸ್ಸಮಾ ಶೀತಗೋಃ|**
**ಜೀವೇಂದೂಷ್ಣಕರಾಃ ಕುಜಸ್ಯ ಸುಹೃದೋಜ್ಞೋರಿಸ್ಸಿತಾ ರ್ಕೀ ಸಮೌ | ಮಿತ್ರೇ ಸೂರ್ಯಸಿತೌ ಬುಧಸ್ಯ ಹಿಮಗಶ್ಶತ್ರು ಸ್ಸಮಾಶ್ಚಾಪರೇ||**

ಸೂರ್ಯನಿಗೆ ಶನಿ ಶುಕ್ರರು ಶತ್ರುಗಳು, ಬುಧನು ಸಮನು, ಕುಜ, ಚಂದ್ರ ಗುರು ಇವರುಗಳು ಮಿತ್ರರು. ಚಂದ್ರನಿಗೆ ಸೂರ್ಯ, ಬುಧರು ಮಿತ್ರರು, ಕುಜ, ಗುರು, ಶುಕ್ರ, ಶನಿಗಳು ಸಮರು ಕುಜನಿಗೆ ಬೃಹಸ್ಪತಿ, ಚಂದ್ರ, ಸೂರ್ಯ ಇವರುಗಳು ಮಿತ್ರರು, ಬುಧನು ಶತ್ರುವು, ಶುಕ್ರ ಶನಿಗಳು ಸಮರು. ಬುಧ ನಿಗೆ ಸೂರ್ಯ ಶುಕ್ರರು ಮಿತ್ರರು, ಚಂದ್ರನು ಶತ್ರುವು, ಮಿಕ್ಕ ಕುಜ, ಗುರು, ಶನಿಗಳು ಸಮರೆಂದು ತಿಳಿಯತಕ್ಕದ್ದು.

**ಸುರೇಸ್ಸಾಮ್ಯಸಿತಾವರೀ ರವಿಸುತೋಮಧ್ಯಃ ಪರೇತ್ವನ್ಯಥಾ |**
**ಸೌಮ್ಯಾರ್ಕೀಸುಹೃದೌಸಮೌ ಕುಜಗುರೋಶ್ಶುಕ್ರಸ್ಯಶೇಷಾವರೀ**
**ಶುಕ್ರಜ್ಞಾಸುಹೃದೌಸಮಸ್ಸುರಗುರುಸ್ಸೌರಸ್ಯಚಾನ್ಯೇರಯೋ |**
**ಯೇ ಪ್ರೋಕ್ತಾಸ್ಸುಹೃದಸ್ತ್ರಿಕೋಣ ಭವನಾತ್ತೇಮೀಮಯಾ ಕೀರ್ತಿತಾಃ ||**

ಬೃಹಸ್ಪತಿಗೆ ಬುಧ, ಶುಕ್ರರು ಶತ್ರುಗಳು, ಶನಿ ಸಮನು, ರವಿ, ಚಂದ್ರ, ಕುಜರು ಮಿತ್ರರು. ಶುಕ್ರನಿಗೆ ಬುಧ, ಶನಿಗಳು ಮಿತ್ರರು, ಕುಜ, ಗುರುಗಳು

ಸಮರು; ರವಿ ಚಂದ್ರರು ಶತ್ರುಗಳು. ಶನಿಗೆ ಶುಕ್ರ, ಬುಧರು ಮಿತ್ರರು; ಬೃಹಸ್ಪತಿಯು ಸಮನು, ರವಿ, ಚಂದ್ರ, ಕುಜರು ಶತ್ರುಗಳೆಂಬುದಾಗಿ ಗ್ರಹಗಳ ಮೂಲತ್ರಿಕೋಣ ರಾಶಿಗಳನ್ನು ಹಿಡಿದು ಪೂರ್ವೀಕರು ಹೇಳಿದ ಶತ್ರುಮಿತ್ರ ಗ್ರಹಗಳು ಇಲ್ಲಿ ಹೇಳಲ್ಪಟ್ಟಿತು.

ಅನಂತರ ನವಗ್ರಹಗಳ ಕ್ರೂರ, ಸೌಮ್ಯ, ಪುರುಷ, ಸ್ತ್ರೀನಪುಂಸಕ ಸಂಜ್ಞೆಗಳನ್ನೂ ಜಾತಿನಿರ್ಣಯಗಳನ್ನೂ ತಿಳಿಸುತ್ತಾನೆ.

**ಕ್ರೂರಾಭಾನುತಮಶ್ಯನಿಧ್ವಜಕುಜಾ ಶುಕ್ರಾರ್ಯ ಸೌಮ್ಯೋಧವ ಸ್ಸೌಮ್ಯಾಸ್ತೇ ಪುರುಷಾಃ ಕುಜಾರ್ಕಗುರವಃ ರಾಹ್ವಿಂದುಶುಕ್ರಾಃ ಸ್ತ್ರಿಯಃ । ತಚ್ಛೇಷಾಸ್ತು ನಪುಂಸಕಾ ಗುರುಭೃಗೂವಿಪ್ರಾ ಕುಜಾರ್ಕೌನೃಪಾವೈಶ್ಯಾ ಚಂದ್ರಬುಧೌತದನ್ಯಕುಲಜೋಮಂದ ಸ್ತುವರ್ಣೇಶ್ವರಃ ॥ ಬುಧಃ ಪಾಪಯುತಃ ಪಾಪಃ ಕ್ಷೀಣಚಂದ್ರ ಸ್ತಥೈವಚ ॥**

ಸೂರ್ಯ, ರಾಹು, ಶನಿ, ಕೇತು, ಕುಜ ಈ ೫ ಗ್ರಹಗಳು ಕ್ರೂರಗಳು, ಅಂದರೆ ಪಾಪಗ್ರಹಗಳು. ಶುಕ್ರ, ಗುರು, ಬುಧ, ಚಂದ್ರ ಈ ೪ ಗ್ರಹಗಳು ಸೌಮ್ಯರು, ಅಂದರೆ ಶುಭಗ್ರಹಗಳು ಇಲ್ಲಿ ವಿಶೇಷವೆಂತೆಂದರೆ ಶುಭಗ್ರಹ ಗಳಾಗಿ ಹೇಳಲ್ಪಟ್ಟ ಬುಧ, ಚಂದ್ರರಲ್ಲಿ ಪಾಪಗ್ರಹಗಳೊಂದಿಗೆ ಸೇರಿದ ಬುಧನು, ಕ್ಷೀಣವಾದ ಚಂದ್ರನು ಇವರಿಬ್ಬರೂ ಪಾಪಗ್ರಹಗಳಾಗುತ್ತಾರೆಂದು ತಿಳಿಯು ವುದು. ಕುಜ, ಸೂರ್ಯ, ಬೃಹಸ್ಪತಿ ಈ ೩ ಪುರುಷಗ್ರಹಗಳು. ರಾಹು, ಚಂದ್ರ, ಶುಕ್ರ ಈ ೩ ಸ್ತ್ರೀಗ್ರಹಗಳು ಬುಧ, ಶನಿ, ಕೇತು ಈ ೩ ನಪುಂಸಕ ಗ್ರಹಗಳು ಗುರು, ಶುಕ್ರ ಈ ೨ ಬ್ರಾಹ್ಮಣ ಜಾತಿ ಗ್ರಹಗಳು ಅಂಗಾರಕ, ಸೂರ್ಯ ಈ ೨ ಕ್ಷತ್ರಿಯ ಜಾತಿ ಗ್ರಹಗಳು ಚಂದ್ರನು, ಬುಧನು ಈ ೨ ವೈಶ್ಯ ಜಾತಿ ಗ್ರಹಗಳು. ಶನಿಯು ಶೂದ್ರಜಾತಿ ಗ್ರಹವು. ಈ ಮೇರೆ ಗ್ರಹಗಳ ವರ್ಣವನ್ನು ತಿಳಿಯತಕ್ಕದ್ದು

## ನವಗ್ರಹಗಳ ಧಾತ್ವಾದಿ ವರ್ಣಗಳು

**ಬೃಹಜ್ಜಾತಕೇ ॥ ರಕ್ತಶ್ಯಾಮೋಭಾಸ್ಕರೋಗೌರಇಂದುರ್ನಾ ತುಚ್ಚಾಂಗೋರಕ್ತಗೌರಶ್ಚವಕ್ರಃ । ದೂರ್ವಾಶ್ಯಾಮೋಜ್ಞೋ ಗುರುಗೌರಗಾತ್ರಃ । ಶ್ಯೈತಶ್ಶುಕ್ರೋಭಾಸ್ಕರಃ ಕೃಷ್ಣದೇಹಃ ॥**

ಸೂರ್ಯನು ಕೆಂಪು ಕಪ್ಪು ಮಿಶ್ರವಾದ ಬಣ್ಣವುಳ್ಳವನು, ಚಂದ್ರನು ಬಿಳೀ ಬಣ್ಣವುಳ್ಳವನು, ಅಂಗಾರಕನು ಬಹಳ ಉದ್ದವಲ್ಲದೆ ಬಿಳುಪು ಕೆಂಪು ಮಿಶ್ರವಾದ ಬಣ್ಣವುಳ್ಳವನು, ಬುಧನು ಗರಿಕೆಯಂತೆ ಹಸುರು ಬಣ್ಣ ವುಳ್ಳವನು, ಬೃಹಸ್ಪತಿ ಹಳದೀ ಬಣ್ಣವುಳ್ಳವನು, ಶುಕ್ರನು ಬಿಳೀ ಬಣ್ಣ ವುಳ್ಳವನು; ಶನಿಯು ಕಪ್ಪು ಬಣ್ಣವುಳ್ಳವನು.

**ರಾಹುಸ್ತುಧೂಮ್ರವರ್ಣಶ್ಚ । ಚಿತ್ರವರ್ಣೋಽಧ್ವಜಸ್ಮೃತಃ ॥**

ರಾಹುವು ಧೂಮ್ರವರ್ಣವುಳ್ಳವನು, ಕೇತುವು ಚಿತ್ರವರ್ಣವುಳ್ಳವನೆಂದು ತಿಳಿಯಬೇಕು

**ತ್ರಿದಶತ್ರಿಕೋಣಚತುರಶ್ರ ಸಪ್ತಗಾನವಲೋಕಯಂತೀ ಚರಣಾ ಭಿವೃದ್ಧಿತಃ ॥ ರವಿಜಾಮರೇಡ್ಯರುಧಿರಾಃ ಪರಚಯೋ । ಕ್ರಮ ಶೋಭವಂತಿ ಸಕಲೇಕ್ಷಣಾಧಿಪಾಃ ॥**

ಶನಿಯು ತಾನಿರುವ ರಾಶಿಗೆ ೩-೧೦ನೇ ರಾಶಿಗಳಲ್ಲಿ ಗ್ರಹಗಳನ್ನು ಪಾದ ದೃಷ್ಟಿಯಿಂದ ನೋಡುವನು. ಗುರುವು ತಾನಿರುವ ರಾಶಿಗೆ ೫-೯ ರಾಶಿ ಗಳನ್ನೂ ಗ್ರಹಗಳನ್ನೂ ಅರ್ಧದೃಷ್ಟಿಯಿಂದ ನೋಡುವನು. ಅಂಗಾರಕನು ತಾನಿರುವ ರಾಶಿಗೆ ೪-೮ನೇ ರಾಶಿಗಳನ್ನು ತ್ರಿಪಾದ ದೃಷ್ಟಿಯಿಂದ ನೋಡು ವನು. ಇವು ವಿಶೇಷದೃಷ್ಟಿಗಳು, ಆದರೆ ಸರ್ವಗ್ರಹಗಳು ತಾವು ಇರುವ ರಾಶಿ ಗಳಿಗೆ ೭ನೇ ರಾಶಿಗಳನ್ನೇ ನೋಡುವರು.

## ಕುರುಡು-ಕಿವುಡು-ಸೊಂಡಿ ರಾಶಿಗಳು

**ಮೇಷಾದಿಚಾಂಧಕಂಷಟ್ಕಂಚತ್ವಾರೋಬಧಿಸ್ತಥಾ ।**
**ದ್ವಾಚಪಂಗೂಸವಿಜ್ಞೇಯಾಸ್ತದ್ಭೇದಾಃಪರಿಕೀರ್ತಿತಾಃ ॥**

ಮೇಷ ಮೊದಲು ೬ ರಾಶಿಗಳು ಕುರುಡು ರಾಶಿಗಳು, ಅದರ ತರುವಾಯ ೪ ರಾಶಿಗಳು ಕಿವುಡುರಾಶಿಗಳು, ಅದರ ತರುವಾಯ ೨ ಕುಂಟ ರಾಶಿಗಳೆಂದು ತಿಳಿಯತಕ್ಕದ್ದು. ಅಂದರೆ ಮೇಷ ಮೊದಲು ಕನ್ಯಾರಾಶಿವರಿಗೆ ಕುರುಡು ರಾಶಿಗಳು, ತುಲಾ ಮೊದಲು ಮಕರದವರಿಗೂ ೪ ರಾಶಿಗಳು ಕಿವುಡುರಾಶಿ ಗಳು, ಕುಂಭ, ಮೀನ ಇವೆರಡು ಕುಂಟರಾಶಿಗಳೆಂದು ತಿಳಿಯತಕ್ಕದ್ದು.

**ಅಜೋವೃಷೋಮೃಗೇಂದ್ರಶ್ಚ ಅರ್ಧರಾತ್ರೇಮಹಾಂಧಕಾಃ ।**
**ಯುಗ್ಮಾಂಗನಾಕುಳೀರಾಶ್ಚ ಮಧ್ಯಾಹ್ನೇಚಾಂಧಕಾಸ್ಮೃತಾಃ ॥**
**ಇತ್ಯೇವಂಕಾಲಭೇದೇನ ಶುಭದಾಶ್ಚಪ್ರಕೀರ್ತಿತಾಃ ॥**

ಮೇಷ, ವೃಷಭ, ಸಿಂಹ ಈ ೩ ರಾಶಿಗಳು ಅರ್ಧರಾತ್ರಿಯಲ್ಲಿ ಕುರುಡು ರಾಶಿಗಳು , ಮಿಥುನ, ಕನ್ಯಾ, ಕರ್ಕಾಟಕ ಈ ೩ ರಾಶಿಗಳು ಮಧ್ಯಾಹ್ನಕಾಲ ದಲ್ಲಿಯೂ ಕುರುಡು ರಾಶಿಗಳು , ಇವೆ ಕಾಲಭೇದಗಳಿಂದ ಸುಖಕರಗಳೆಂದು ತಿಳಿಯತಕ್ಕದ್ದು.

**ತುಲಾಚವೃಶ್ಚಿಕಶ್ಚೈವಬಧಿರೌಚಾಪರಾಹ್ಣಕೈ ।**
**ರಾತ್ರೌಚಬಧಿರೌಪ್ರೋಕ್ತೌಮಕರಶ್ಚಧನುರ್ಗ್ರಹಂ ॥**
**ಉಭಯೋಸ್ಸಂಧ್ಯಯೋಃಪಂಗೂಕುಂಭಮೀನೌಪ್ರಕೀರ್ತಿತಾಃ॥**

ತುಲಾ ವೃಶ್ಚಿಕಗಳು ಮಧ್ಯಾಹ್ನದಲ್ಲಿ ಕಿವುಡು ರಾಶಿಗಳು, ಮಕರ ಧನುಸ್ಸುಗಳು ರಾತ್ರಿಯಲ್ಲಿ ಕಿವುಡು ಕುಂಭ ಮೀನ ರಾಶಿಗಳು ಬೆಳಿಗ್ಗೆ ಮತ್ತು ಸಾಯಂಕಾಲದಲ್ಲಿ ಕೂಡಾ ಕುಂಟ ರಾಶಿಗಳೆಂದು ತಿಳಿಯುವುದು.

## ಷಡ್ವರ್ಗ ಲಕ್ಷಣಗಳು

**ತ್ರಿಂಶದ್ಭಾಗಾತ್ಮಕಂಲಗ್ನಂಹೋರಾತಸ್ಯಾರ್ಧಮುಚ್ಯತೇ ।**
**ರಾಶಿತ್ರಿಭಾಗೋದ್ರೇಕ್ಕಾಣಃ ನವಾಂಶೋನವಭಾಗಕಃ ॥**
**ದ್ವಾದಶಾಂಶೋದ್ವಾದಶಾಂಶಸ್ತ್ರಿಂಶಾಂಶಸ್ತ್ರಿಂಶದಂಶಕಃ ।**
**ಷಡ್ವರ್ಗಲಕ್ಷಣಃ ಪ್ರೋಕ್ತಂ ಸರ್ವಲಗ್ನೇಷ್ವಯಂ ಕ್ರಮಃ ॥**

ಲಗ್ನವನ್ನು ೩೦ ಭಾಗ ಮಾಡಿದರೆ ಹೋರೆಯೆನ್ನಿಸಿಕೊಳ್ಳುತ್ತವೆ. ೩ ಭಾಗ ಮಾಡಿದರೆ ದ್ರೇಕ್ಕಾಣವೆನ್ನಿಸಿಕೊಳ್ಳುತ್ತವೆ. ೯ ಭಾಗ ಮಾಡಿದರೆ ನವಾಂಶವೆನ್ನಿಸಿಕೊಳ್ಳುತ್ತವೆ. ೧೨ ಭಾಗ ಮಾಡಿದರೆ ದ್ವಾದಶಾಂಶವೆನ್ನಿಸಿ ಕೊಳ್ಳುತ್ತವೆ. ೩೦ ಭಾಗ ಮಾಡಿದರೆ ತ್ರಿಂಶಾಂಶವೆನ್ನಿಸಿಕೊಳ್ಳುತ್ತವೆ. ಏವಂಚ ಲಗ್ನ, ಹೋರಾ, ದ್ರೇಕ್ಕಾಣ, ನವಾಂಶ, ದ್ವಾದಶಾಂಶ, ತ್ರಿಂಶಾಂಶ ಇವುಗಳು ಷಡ್ವರ್ಗಗಳಾಗುತ್ತವೆ

## ಹೋರಾದ್ರೇಕ್ಕಾಣಗಳು

**ಹೋರಾರ್ಕಚಂದ್ರಯೋರೋಜೇಯುಗ್ಮಭೇಚಂದ್ರಸೂರ್ಯಯೋಃ।**
**ಲಗ್ನಪಂಚನವಕ್ಷೇತ್ರನಾಥಾದ್ರೇಕ್ಕಾಣಪಾಃ ಕ್ರಮಾತ್ ॥**

ಓಜರಾಶಿಗೆ ಮೊದಲು ಅರ್ಧ ಸೂರ್ಯಹೋರೆ, ೨ನೇ ಅರ್ಧ ಸೂರ್ಯ ಹೋರೆ ಈ ಮೇರೆ ೧೨ ರಾಶಿಗಳಿಗೆ ತಿಳಿಯತಕ್ಕದ್ದು

**ಚರೇಸ್ವಪುತ್ರನವಮಾಃ ಸ್ಥಿರೇಧರ್ಮಸ್ವಪುತ್ರಮಾಃ ।**
**ಪುತ್ರಧರ್ಮಸ್ವಮಾದ್ವಿಸ್ವದ್ರೇಕ್ಕಾಣಸ್ಯಪ್ರಕೀರ್ತಿತಾಃ ॥**

ಆ ದ್ರೇಕ್ಕಾಣದಲ್ಲಿ ಚರರಾಶಿಗೆ ಮೊದಲು ಲಗ್ನದ್ರೇಕ್ಕಾಣ, ೨ನೇ ಭಾಗ ಪಂಚಮರಾಶಿದ್ರೇಕ್ಕಾಣ, ೩ನೇ ಭಾಗ ನವಮರಾಶಿ ದ್ರೇಕ್ಕಾಣ, ಸ್ಥಿರಲಗ್ನಕ್ಕೆ ಮೊದಲು ಭಾಗ ನವಮರಾಶಿ ದ್ರೇಕ್ಕಾಣ, ೨ನೇ ಭಾಗ ಲಗ್ನದ್ರೇಕ್ಕಾಣ, ೩ನೇ ಭಾಗ ಪಂಚಮರಾಶಿ ದ್ರೇಕ್ಕಾಣ, ದ್ವಿಸ್ವಭಾವರಾಶಿಗೆ ಮೊದಲುಭಾಗ ಪಂಚಮರಾಶಿ ದ್ರೇಕ್ಕಾಣ, ೨ನೇ ಭಾಗ ನವಮರಾಶಿ ದ್ರೇಕ್ಕಾಣ, ೩ನೇಭಾಗ ಲಗ್ನ ದ್ರೇಕ್ಕಾಣವೆಂದು ತಿಳಿಯತಕ್ಕದ್ದು.

## ನವಾಂಶ ಕ್ರಮ

**ಮೇಷಸಿಂಹಧನುಷಿಷ್ವಜಾದಯುಸ್ತ್ರೌಳಿಕುಂಭಮಿಥುನೇತುಲಾದಯಃ**
**ಕನ್ಯಕಾಮೃಗವೃಷೇಮೃಗಾದಯಃಮೀನಕರ್ಕ್ಯಾಳಿಷುಕರ್ಕಟಾದಯಃ**

ಮೇಷ, ಸಿಂಹ, ಧನುಸ್ಸು, ಈ ಮೂರು ರಾಶಿಗಳಲ್ಲಿ ಮೇಷರಾಶಿ ಮೊದಲಾಗಿ ನವಾಂಶಭಾಗಗಳನ್ನು ಎಣಿಸಬೇಕು ವೃಷಭ, ಕನ್ಯಾ, ಮಕರ ರಾಶಿಗಳಲ್ಲಿ ಮಕರ ಮೊದಲಾಗಿ ಎಣಿಸತಕ್ಕದ್ದು. ಮಿಥುನ, ತುಲಾ, ಕುಂಭ ಈ ರಾಶಿಗಳಲ್ಲಿ ತುಲಾ ಮೊದಲಾಗಿ ಎಣಿಸತಕ್ಕದ್ದು ಕಟಕ, ವೃಶ್ಚಿಕ, ಮೀನರಾಶಿಗಳಲ್ಲಿ ಕಟಕರಾಶಿ ಮೊದಲಾಗಿ ಎಣಿಸತಕ್ಕದ್ದು

## ದ್ವಾದಶಾಂಶ ಕ್ರಮವು

**ಲಗ್ನಾದಿಷುದ್ವಾದಶಾಂಶ ಭವನಾದ್ವಾದಶಾಂಶಪಾ-॥**

ಲಗ್ನ ಮೊದಲು ೧೨ ರಾಶಿಗೂ ೧೨ ಭಾಗ ಕೊಡತಕ್ಕದ್ದು ಅಂದರೆ ಲಗ್ನವನ್ನು ೧೨ ಭಾಗ ಮಾಡಿ ಲಗ್ನ ಮೊದಲು ೧-೧ ಭಾಗಕ್ಕೆ ೧-೧ ರಾಶಿಗಳಾಗಿ ನೋಡಿಕೊಳ್ಳತಕ್ಕದ್ದು

## ತ್ರಿಂಶಾಂಶಕ್ರಮವು

**ಕುಜರವಿಜಗುರುಜ್ಞ ಶುಕ್ರಭಾಗಾಃ ಪವನಸಮೀರಣಕೌರ್ಪಿ**
**ಜೂಕಲೇಯಾಃ । ಅಯುಜಿಯುತುತೇವಿಪರ್ಯಯಸ್ಥಾಶ್ಯಶಿ**
**ಭವನಾಳಿ ಝುಷಾಂತ್ಯಮೃಕ್ಷಸಂಧಿಃ ॥**

ಲಗ್ನ ಓಜರಾಶಿಯಾದರೆ ಅದರ ೩೦ ಭಾಗಗಳಲ್ಲಿ ಮೊದಲು ೫ ಭಾಗ ಕುಜನಿಗೂ, ತರುವಾಯ ೫ ಭಾಗ ಶನಿಗೂ, ತರುವಾಯ ೮ ಭಾಗ ಗುರುವಿಗೂ, ತರುವಾಯ ೭ ಭಾಗ ಬುಧನಿಗೂ, ತರುವಾಯ ೫ ಭಾಗ ಶುಕ್ರನಿಗೂ ಕೊಡಬೇಕು. ಯುಗ್ಮರಾಶಿಯಾದರೆ ಮೊದಲು ೫ ಭಾಗ ಶುಕ್ರನಿಗೂ, ತರುವಾಯ ೭ ಭಾಗ ಬುಧನಿಗೂ, ತರುವಾಯ ೮ ಭಾಗ ಗುರುವಿಗೂ, ತರುವಾಯ ೫ ಭಾಗ ಶನಿಗೂ, ತರುವಾಯ ೫ ಭಾಗ ಅಂಗಾರಕನಿಗೂ ಕೊಡತಕ್ಕದ್ದು, ಇದೇ ತ್ರಿಂಶಾಂಶವು

## ಪಕ್ಷಚ್ಛಿದ್ರಗಳು

**ಅಷ್ಟಮೀದ್ವಾದಶೀಷಷ್ಠೀ ಚತುರ್ಥೀಚ ಚತುರ್ದಶೀ ।**
**ಪಕ್ಷಚ್ಛಿದ್ರಾಶ್ಚ ತಿಥಯಃ ಶುಭಕಾರ್ಯೇಷುನಿಂದಿತಾಃ ॥**

ಅಷ್ಟಮೀ, ದ್ವಾದಶೀ, ಷಷ್ಠೀ, ಚತುರ್ಥೀ, ಚತುರ್ದಶೀ, ಈ ತಿಥಿಗಳು ಪಕ್ಷಚ್ಛಿದ್ರಗಳಾದ್ದರಿಂದ ಶುಭಕಾರ್ಯಗಳಲ್ಲಿ ಇವುಗಳನ್ನು ಬಿಡತಕ್ಕದ್ದು.

## ಪಂಚಪರ್ವಗಳು

**ಕೃಷ್ಣಾಷ್ಟಮೀಚತುರ್ದಶ್ಯಪ್ಯಮಾವಾಸ್ಯಾಚಪೂರ್ಣಿಮಾ ।**
**ಸಂಕ್ರಾಂತಿಃ ಪರ್ವತಿಥಯೋಃ ಮುನಿಭಿಃ ಪರಿಕೀರ್ತಿತಾಃ ॥**

ಕೃಷ್ಣಾಷ್ಟಮೀ, ಚತುರ್ದಶೀ, ಅಮಾವಾಸ್ಯಾ, ಪೂರ್ಣಿಮಾ, ಸಂಕ್ರಾಂತಿ ಇವುಗಳು ಪರ್ವತಿಥಿಗಳೆಂದು ಮುನಿಗಳು ಹೇಳಿರುವರು.

## ಘಟಿಕಾ ಪ್ರಮಾಣವು.

**ಯಾವತ್ಯಶ್ಚರಣಪ್ರಭಾಃಪ್ರತಿದಿನಂ ಮೇಷಾದಿಷಟ್ಸ್ವಕ್ರಮಾ ।**
**ದೋರ್ಜ್ಯಾಶ್ಚೈವತುಲಾದಿಷಟ್ಸುಜಲಧಿತ್ರಿದ್ವ್ಯೇಕ್ಷಿರಾಮಾಬ್ಧಯಃ॥**
**ಅರ್ಥೀಕೃತ್ಯಧಿನಪ್ರಮಾಣಘಟಿಕಾಸ್ಸಪ್ತಾಹತಾಃ ನಾಡಿಕಾ ।**
**ಸ್ತಾವತ್ಯಃಪರಪೂರ್ವಯೋಸ್ಥಿತಗತಾಯತ್ಪೂರ್ವಸಂಖ್ಯಾಭಿದಾಃ॥**

ಪ್ರತಿದಿನವು ಹಗಲಿನಲ್ಲಿ ಸೂರ್ಯನಿಗೆ ಎದುರಾಗಿ ನಿಂತುಕೊಂಡು ತಾನು ನಿಂತ ಅಡಿಯೊಂದಿಗೆ ತನ್ನ ನೆರಳು ಎಷ್ಟಡಿಯಾಗುತ್ತದೋ ಅದರ ಸಂಖ್ಯೆಯೊಂದಿಗೆ ಮೇಷಕ್ಕೆ ೪, ವೃಷಭಕ್ಕೆ ೩, ಮಿಥುನಕ್ಕೆ ೨, ಕಟಕಕ್ಕೆ ೨, ಸಿಂಹಕ್ಕೆ ೩, ಕನ್ಯೆಗೆ ೪, ತುಲಿಗೆ ೪, ವೃಶ್ಚಿಕಕ್ಕೆ ೩, ಧನುಸ್ಸಿಗೆ ೨, ಮಕರಕ್ಕೆ ೨,

ಕುಂಭಕ್ಕೆ ೩, ಮೀನಕ್ಕೆ ೪, ಈ ಮೇರೆ ಹೇಳಲ್ಪಟ್ಟಿರುವ ಧೃವಸಂಖ್ಯೆಯಲ್ಲಿ ಆಯಾ ತಿಂಗಳಿಗೆ ಆಗುವ ಧೃವವನ್ನು ಸದರಿ ಪಾದಛಾಯದೊಂದಿಗೆ ಸೇರಿಸಿ ಪ್ರತ್ಯೇಕ ಒಂದು ರಾಶಿಯಾಗಿ ಇಡಬೇಕು. ಮತ್ತು ಆಯಾ ತಿಂಗಳಿಗೆ ಆಯುಃಪ್ರಮಾಣ ಘಟಿಕೆಗಳು ಎಷ್ಟು ಆಗುತ್ತದೋ ಅದರಲ್ಲಿ ಅರ್ಧವನ್ನು ೭ರಿಂದ ಗುಣಿಸಿ, ಅದರ ಸಂಖ್ಯೆಯನ್ನು ಪ್ರತ್ಯೇಕ ಇಟ್ಟಿರುವ ಧೃವರಾಶಿಯಿಂದ ಭಾಗಿಸುವಾಗ ಎಷ್ಟು ಮಿಗುತ್ತದೋ ಅಷ್ಟು ಘಳಿಗೆಗಳು ದಿನದ ಪೂರ್ವಾರ್ಧ ಅಪರಾರ್ಧಗಳಲ್ಲಿ ಕಳೆದವೆಂಬುದಾಗಿಯೂ ಉಳಿದವೆಂಬುದಾಗಿಯೂ ತಿಳಿಯತಕ್ಕದ್ದು

ಪಾದಚ್ಛಾಯ ಗಡಿಗಳನ್ನು ನೋಡತಕ್ಕ ಬಗ್ಗೆ
ವರರುಚಿ ಸೂತ್ರ ಹೇಗೆಂದರೆ :—

ಮೇಷೆ ಗಿರಿವು, ವೃಷಭೆ ಟಸಟ, ಮಿಥುನೆ ಕರಲಿ, ಕಟಕೆ ಕರುಬ, ಸಿಂಹೆ ಕನ್ಯಾ, ಕನ್ಯಾ ಕುರುಬ, ತುಲಾ ಲಿಶನ, ವೃಶ್ಚಿಕ ದೂತಾಸ, ಧನುಷಿ ಸಿಜಲ, ಮಕರಂ ದದಾಸಿ, ಕುಂಬಿ ಸಿತಶ, ಮೀನೆ ಶುಭಗ, ಈ ೧೨ ವಾಕ್ಯಗಳಿಗೆ ತಾತ್ಪರ್ಯ : ಮೇಷಮಾಸಕ್ಕೆ ೧೦ ತೇದಿವರೆಗೆ ಒಂದು ಅಕ್ಷರ ಪ್ರಕಾರ ಕೆಳಗೆ ಸೂತ್ರದಲ್ಲಿ ಹೇಳಿದ ಮೂರಕ್ಷರಕ್ಕೆ ೧೦ ತೇದಿವರಿಗು ಗಿ-ಎಂಬ ಅಕ್ಷರವು, ೨ನೇ ೧೦ ತೇದಿವರಿಗು ರಿ-ಎಂಬ ಅಕ್ಷರವು, ೩ನೇ ೧೦ ತೇದಿವರಿಗು ವು-ಎಂಬ ಅಕ್ಷರವು, ಗಿ-೩, ರಿ-೨, ವು-೧, ಈ ಅಕ್ಷರ ಸಂಖ್ಯೆಯನ್ನು ನೋಡಿಕೊಳ್ಳತಕ್ಕದ್ದು. ಇಲ್ಲಿ ಹೇಳಲ್ಪಟ್ಟಿರುವ ಅಕ್ಷರಗಳ ಸಂಖ್ಯೆಗಳಿಗೆ ಅರ್ಧವು-ಕ ೧ ಅಂದರೆ ಒಂದೇ,= ರೂ, ಅಂದರೆ |, ಗ ೩, ಅಂದರೆ |= ಈ ಮೇರೆ ಎಲ್ಲಾ ಸಂಖ್ಯೆಗಳನ್ನು ನೋಡಿಕೊಳ್ಳತಕ್ಕದ್ದು. ಆದರೆ ಯಾವ ತಿಂಗಳಲ್ಲಿ ಪಾದಚ್ಛಾಯೆ ನೋಡಬೇಕಾಗಿರುತ್ತದೋ ಆ ತಿಂಗಳನ್ನು ನೋಡಿಕೊಂಡು ಯಾವ ೧೦ ತೇದಿಗಳಿಗೆ ಯಾವ ಅಕ್ಷರ ಹೇಳಲ್ಪಟ್ಟಿದೆಯೋ ಆ ಅಕ್ಷರಕ್ಕೆ ಎಷ್ಟು ಬೇಳಿಯಾಗುತ್ತವೋ ಅದನ್ನೂ, ಮೊತ್ತದಲ್ಲಿ ಅರ್ಧ ಅಡಿಯನ್ನೂ ಸಹ ಪಾದಚ್ಛಾಯ ಅಡಿಗಳಲ್ಲಿ ತೆಗೆದುಬಿಟ್ಟು ಉಳಿದ ಅಡಿಗಳನ್ನು ನೋಡಿಕೊಳ್ಳತಕ್ಕದ್ದು.

## ಪಾದಚ್ಛಾಯಅಡಿಗಳಿಗೆ ಘಳಿಗೆ ನೋಡುವ ಕ್ರಮವು

**ನವತ್ಯಷ್ಟಪದಾದೇಕಾ ನಾಡಿಕಾತತ್ರಉಚ್ಯತೇ ।**
**ಪಂಚಾರ್ಧಚತ್ವಾರಿಂಶದ್ವೇ ಅಷ್ಟಾವಿಂಶತ್ರಯಸ್ತಥಾ ॥**

**ಏಕೋನವಿಂಶಶ್ಚತ್ವಾರಿ ಚತುರ್ದಶ್ಯಾಂತು ಪಂಚಕಂ ।**
**ದಶಾರ್ಧೇನಾಡಿಕಾಷಟ್ಚ ಅಷ್ಟಕೇಸಪ್ತನಾಡಿಕಾಃ ॥**
**ಷಟ್ಪದೇಚಾಷ್ಟಕಂವಿಂದ್ಯಾಚ್ಚತುರರ್ಧೇನವಸ್ತುಕಂ ।**
**ತ್ರಿಕಾರ್ಧೇದಶಕಂವಿಂದ್ಯಾದ್ವ್ಯರ್ಧ ಏಕಾದಶಸ್ತಥಾ ।**
**ಏಕತ್ರಿಪಾದೋದ್ವಾದಶಕಂ ಪಾದಮೇಕಂತ್ರಯೋದಶಃ ।**
**ಚತುರ್ದಶಾರ್ಧಪಾದೇವ ಶೂನ್ಯೇಪಂಚದಶಸ್ಮೃತಾಃ ॥**

೯ಲ ಅಡಿಗೆ ೧ ಘಳಿಗೆ, ೪೫॥ ಅಡಿಗೆ ೨ ಘಳಿಗೆ, ೨ಲ ಅಡಿಗೆ ೩ ಘಳಿಗೆ, ೧೯ ಅಡಿಗೆ ೪ ಘಳಿಗೆ, ೧೪ ಅಡಿಗೆ ೫ ಘಳಿಗೆ, ೧೦॥ ಅಡಿಗೆ ೬ ಘಳಿಗೆ, ೮ ಅಡಿಗೆ ೭ ಘಳಿಗೆ, ೬ ಅಡಿಗೆ ೮ ಘಳಿಗೆ, ೪॥ ಅಡಿಗೆ ೯ ಘಳಿಗೆ, ೩॥ ಅಡಿಗೆ ೧೦ ಘಳಿಗೆ, ೨॥ ಅಡಿಗೆ ೧೧ ಘಳಿಗೆ, ೧॥। ಅಡಿಗೆ ೧೨ ಘಳಿಗೆ, ೧ ಅಡಿಗೆ ೧೩ ಘಳಿಗೆ, ಅರ್ಧ ಅಡಿಗೆ ೧೪ ಘಳಿಗೆ, ಶೂನ್ಯವಾದರೆ ೧೫ ಘಳಿಗೆ, ಆದರೆ ವರರುಚಿ ಮತಕ್ಕೂ ಈ ಗ್ರಂಥಕರ್ತನ ಮತಕ್ಕೂ ವಿಶೇಷ ವ್ಯತ್ಯಾಸವಿಲ್ಲವಾದ್ದರಿಂದಲೂ ಸುಲಭವಾಗಿರುವುದರಿಂದ ಇಲ್ಲಿ ಬರೆಯಲ್ಪಟ್ಟಿತು.

ರಾತ್ರಿಕಾಲದಲ್ಲಿ ಘಟಿಕಾಪ್ರಮಾಣವನ್ನು ತಿಳಿದುಕೊಳ್ಳುವುದಕ್ಕೋಸ್ಕರ ನಕ್ಷತ್ರ ಸ್ವರೂಪವನ್ನು ಹೇಳುತ್ತಾನೆ

## ವರರುಚಿ ವಾಕ್ಯಗಳು

**ತುರಗಮುಖಾಶ್ವಿನೀತ್ರೀಣಿ। ಭರಣಿಯೋನಿತ್ರೀಣಿ। ಕೃತ್ತಿಕುಕ್ಷುರಾಷಟ್ಕಂ । ಶಕಟಂಪಂಚರೋಹಿಣೀ । ಮೃಗಶಿರಾಶೀರ್ಷತ್ರಯಂ । ಆರ್ದ್ರಾಪ್ರವಾಳಮೇಕಂ ॥ ಪುನರ್ವಸುಕುಲಾಲಚಕ್ರಂಪಂಚ । ಸರಟೂಪುಷ್ಯಮಿತ್ರೀಣಿ । ಆಶ್ಲೇಷಾಸರ್ಪಾರುತಂ । ಮುಖಾಂದೋಳಿಕಾಪಂಚ॥ ಪುಬ್ಬ ಉತ್ತರನೇತ್ರದ್ವಯೋಃ।ಹಸ್ತಪಾಣಿನಾಪಂಚ । ಚಿತ್ತಾಮೌಕ್ತಿಕಮೇಕಂ । ಸ್ವಾತಿಮಾಣಿಕ್ಯಮೇಕಂ।ವಿಶಾಖಾ ಕುಲಾಲಚಕ್ರಪಂಚ।ಅನೂರಾಧಾ ಜ್ಯೇಷ್ಠಾಂಗುಳಛತ್ರಾಕಾರತ್ರಯಂ । ಮೂಲಾಕುಪ್ಪೇಕೇಸರೀ ಪಂಚ।ಪೂರ್ವಾಷಾಢಉತ್ತರಾಷಾಢಾದ್ವೇದ್ವೇಚೌಕಂ। ಶ್ರವಣಾಮುಚ್ಛತತಾರಯೋಃ। ಪೂರ್ವಾಭಾದ್ರ ಉತ್ತರಾಭಾದ್ರದ್ವೇದ್ವೇಖಟ್ವಂರೇವತೀಮತ್ಸ್ಯಾಕಾರತ್ರಯಂ॥**ಈ ೨೭ ನಕ್ಷತ್ರಸ್ವರೂಪಗಳು ಹೇಗೆಂದರೆ .

ಅಶ್ವಿನಿ ಕುದುರೆ ಮುಖದಂತೆ ೩ ನಕ್ಷತ್ರಗಳು ನೇರಿ ಇರುವುದು, ಭರಣಿ ತ್ರಿಕೋಣಾಕಾರವಾಗಿ ೩ ನಕ್ಷತ್ರಗಳು, ಕೃತ್ತಿಕೆ ಹಜಾಮನ ಕತ್ತಿಯಂತೆ ೬ ಸಣ್ಣ ನಕ್ಷತ್ರಗಳು, ರೋಹಿಣಿ ಚಕ್ರಾಕಾರವಾಗಿ ೫ ನಕ್ಷತ್ರಗಳು, ಮೃಗಶಿರ ಮೃಗದ ತಲೆಯಂತೆ ೩ ನಕ್ಷತ್ರಗಳು, ಆರ್ದ್ರಾ ದೊಡ್ಡ ಹವಳದಂತೆ ೧ ನಕ್ಷತ್ರ, ಪುನರ್ವಸು ಕುಂಬಾರಚಕ್ರದಂತೆ ೫ ನಕ್ಷತ್ರಗಳು, ಪುಷ್ಯ ಓತೀಕೇತದಂತೆ ೩ ನಕ್ಷತ್ರಗಳು, ಇದನ್ನೇ ಕೆರೆಕಟ್ಟೆಯಂತೆ ಕೆಲವರು ಹೇಳುವರು, ಆಶ್ಲೇಷಾ ಸರ್ಪದಂತೆ ೬ ನಕ್ಷತ್ರಗಳು, ಮಖಾ ವಾಲಕಿದಂಡಿಯಂತೆ ೫ ನಕ್ಷತ್ರಗಳು, ಪೂಫ ಕಣ್ಣಗಳಂತೆ ೨ ನಕ್ಷತ್ರಗಳು, ಉಫ ಹಾಗೆಯೇ ೨ ನಕ್ಷತ್ರಗಳು, ಹಸ್ತ ಕೈಬೆರಳಂತೆ ೫ ನಕ್ಷತ್ರಗಳು, ಚಿತ್ತಾ ಮುತ್ತಿನಂತೆ ೧ ನಕ್ಷತ್ರವು, ಸ್ವಾತೀ ಮಾಣಿಕ್ಯದಂತೆ ೧ ನಕ್ಷತ್ರವು, ವಿಶಾಖಾ ಕುಂಬಾರನ ಚಕ್ರಾಕಾರವಾಗಿ ೫ ನಕ್ಷತ್ರಗಳು, ಅನೂರಾಧಾ, ಜ್ಯೇಷ್ಠಾ ಇವೆರಡೂ ಛತ್ರದಂತೆ ೩-೩ ನಕ್ಷತ್ರಗಳು, ಮೂಲಾ ಸಿಂಹಾಕಾರವಾಗಿ ೫ ನಕ್ಷತ್ರಗಳು, ಪೂರ್ವಾಷಾಢಾ ೪ ನಕ್ಷತ್ರಗಳು, ಉತ್ತರಾಷಾಢಾ ೮ ನಕ್ಷತ್ರಗಳು, ಶ್ರವಣ ಮತ್ಸ್ಯಾಕಾರವಾಗಿ ೩ ನಕ್ಷತ್ರಗಳು, ಧನಿಷ್ಠ ತಲೆಯಂತೆ ೩ ನಕ್ಷತ್ರಗಳು, ಶತಭಿಷಕ್ ನೂರು ನಕ್ಷತ್ರಗಳು ನೇರಿ ಪುಷ್ಪದಂತಿರುವುದು ಪೂರ್ವಾಭಾದ್ರಾ, ಉತ್ತರಾಭಾದ್ರಾ ಇವೆರಡೂ ಮಂಚದ ಕೋಡುಗಳಂತೆ ೨-೨ ಆಗಿ ೪ ನಕ್ಷತ್ರಗಳು, ರೇವತಿ ಮತ್ಸ್ಯಾಕಾರವಾಗಿ ೩ ನಕ್ಷತ್ರಗಳು, ಈ ಮೇರೆ ನಕ್ಷತ್ರಸ್ವರೂಪವನ್ನು ತಿಳಿದು ಅವುಗಳು ಉಚ್ಚ ವಾದಾಗ ರಾತ್ರಿಯಲ್ಲಿ ಘಟಿಕಾನಿರ್ಣಯ ಮಾಡತಕ್ಕದ್ದು

**ಜ್ಯೇಷ್ಠಾದಿನಾಮತಿಕ್ರಮ್ಯಪೌಷ್ಣಾದೀನಾಮನಾಗಮೇ ।**
**ಆರ್ದ್ರಾದೀನಾಂಸಮಂಕುರ್ಯಾನ್ನವಷಟ್ದ್ವಾದಶಕ್ರಮಾತ್ ॥**

ಜ್ಯೇಷ್ಠಾದಿ ೯ ನಕ್ಷತ್ರಗಳು ಉಚ್ಚವಾಗಿ ಸ್ವಲ್ಪ ಜರಿಗಿದ ತರುವಾಯ ಈ ರೇವತಿ ಮೊದಲು ೬ ನಕ್ಷತ್ರಗಳು ಉಚ್ಚಕ್ಕೆ ಬರುವುದಕ್ಕೆ ಸ್ವಲ್ಪ ಮುಂದಾಗಿಯೂ ಆರ್ದ್ರೆ ಮೊದಲು ೧೨ ನಕ್ಷತ್ರಗಳು ಸರಿಯಾಗಿ ಉಚ್ಚದಲ್ಲಿರುವಾಗಲೂ ಘಟಿಕಾನಿರ್ಣಯ ಮಾಡತಕ್ಕದ್ದು

ಉಚ್ಚವಾದ ನಕ್ಷತ್ರಗಳ ದೆಶೆಯಿಂದ ಮೇಷಾದಿ ರಾಶಿಗಳ ಘಟಿಕೆಗಳಲ್ಲಿ ಕಳದ ಘಳಿಗೆಗಳನ್ನು ತಿಳಿದುಕೊಳ್ಳುವ ಕ್ರಮ

ಇಲ್ಲಿ " ಶ್ರೋಣಾಮೇಷೆರತಾ " ಯೆಂಬ ವಾಕ್ಯ ಮೊದಲು " ಉತ್ತರಾಷಾಢಾ ಮೀನೇ ಗಾಧಾ " ಎಂಬ ವಾಕ್ಯದವರಿಗೆ ಪ್ರತಿ ವಾಕ್ಯದಲ್ಲಿಯೂ ಹೇಳ

ಲ್ಪಟ್ಟ ೨-೨ ಅಕ್ಷರಗಳಲ್ಲಿ ಮೊದಲು ಅಕ್ಷರ ಘಟಿಕೆಯ ಸಂಖ್ಯೆ ಎಂಬುದಾಗಿಯೂ ೨ನೇ ಅಕ್ಷರ ಬೇಳೆ ಸಂಖ್ಯೆ ಎಂಬುದಾಗಿಯೂ ತಿಳಿಯತಕ್ಕದ್ದು.

## ವರರುಚಿ ವಾಕ್ಯಗಳು

**ಶ್ರೋಣಾಮೇಷೇರತಾ । ಶ್ರವಿಷ್ಠಾವೃಷಭೇನಭ । ಶತಭಿಷಗ್ವೃಷಭೇರಾಮಃ। ಪ್ರೋಷ್ಠಪಾನ್ಮಿಥುನೇಪರಃ। ಅಹಿಂಬುರ್ಧ್ನೀಮಿಥುನೇ ಭಾನುಃ । ರೇವತೀಕರ್ಕೀಯಜ್ಞಃ । ಅಶ್ವಿನೀಕರ್ಕೀರೂಪಃ । ಭರಣೀಕರ್ಕೀಶಾಬಃ। ರೋಹಿಣೀಸಿಂಹೇಗುರುಃ। ಕೃತ್ತಿಕಾಸಿಂಹೇಕಾಯಃ । ಮೃಗಶಿರಾಕನ್ಯಾನೆಯ । ಆರ್ದ್ರಾಕನ್ಯಾಯುತಾ । ಪುನರ್ವಸುತುಲಾನೀಲಾ । ಪುಷ್ಯಸ್ತುಲಾರಾಮಃ । ಆಶ್ಲೇಷಾತುಲಾಭೋಗೀ। ಮಖಾವೃಶ್ಚಿಕೇಕಲ। ಫಲ್ಗುನೀವೃಶ್ಚಿಕೇಲತಾ। ಉತ್ತರಾಧನುರ್ನಾಮ ।ಹಸ್ತಾಧನುರ್ಬಲಾ। ಚಿತ್ರಾಧನುಶ್ಚರೈಃ। ಸ್ವಾತೀಮಕರೇಕಾಮಃ। ವಿಶಾಖಾಮಕರೇವನಂ। ಅನೂರಾಧಾ। ಕುಂಭೇನಾಭಿಃ। ಜ್ಯೇಷ್ಠಂಕುಂಭೇಕಥಾ। ಮೂಲಂಕುಂಭೇಗಚ್ಛ। ಪೂರ್ವಾಷಾಢಾಮೀನೇಕವಿಃ। ಉತ್ತರಾಷಾಢಾಮೀನೇಗಾಧಾ॥**

ಶ್ರವಣ ನಕ್ಷತ್ರ ಉಚ್ಚವಾದರೆ ಮೇಷಲಗ್ನದಲ್ಲಿ ೨॥ ಘಳಿಗೆ ಕಳೆಯಿತೆಂಬುದಾಗಿಯೂ, ಧನಿಷ್ಠಾನಕ್ಷತ್ರಕ್ಕೆ ವೃಷಭದಲ್ಲಿ ಅರ್ಧ ಶತಭಿಷಕ್ ನಕ್ಷತ್ರಕ್ಕೆ ವೃಷಭದಲ್ಲಿ ೨॥= , ಪೂಭಾಗೆ ಮಿಥುನದಲ್ಲಿ ೧।, ಉಭಾಗೆ ಮಿಥುನದಲ್ಲಿ ೪, ರೇವತಿಗೆ ೧॥= ಅಶ್ವಿನಿಗೆ ಕಟಕದಲ್ಲಿ ೨= , ಭರಣಿಗೆ ಕಟಕದಲ್ಲಿ ೫।= , ಕೃತ್ತಿಕೆಗೆ ಸಿಂಹದಲ್ಲಿ ೧= , ರೋಹಿಣಿಗೆ ಸಿಂಹದಲ್ಲಿ ೩।, ಮೃಗಶಿರಕ್ಕೆ ಕನ್ಯೆಯಲ್ಲಿ = , ಆರ್ದ್ರೆಗೆ ಕನ್ಯೆಯಲ್ಲಿ ೧।॥, ಪುನರ್ವಸುವಿಗೆ ತುಲೆಯಲ್ಲಿ ।= , ಪುಷ್ಯಕ್ಕೆ ೨॥= , ಆಶ್ಲೇಷಕ್ಕೆ ತುಲೆಯಲ್ಲಿ ೪।= , ಮಖೆಗೆ ವೃಶ್ಚಿಕದಲ್ಲಿ ೧।= , ಪೂರ್ವಫಲ್ಗುನಿಗೆ ವೃಶ್ಚಿಕದಲ್ಲಿ ೩।॥, ಉತ್ತರಾಫಲ್ಗುನಿಗೆ ಧನುಸ್ಸಿನಲ್ಲಿ ॥= , ಹಸ್ತಕ್ಕೆ ಧನುಸ್ಸಿನಲ್ಲಿ ೩= , ಚಿತ್ತೆಗೆ ಧನುಸ್ಸಿನಲ್ಲಿ ೫।, ಸ್ವಾತಿಗೆ ಮಕರದಲ್ಲಿ ೧॥= , ವಿಶಾಖೆಗೆ ಮಕರದಲ್ಲಿ ೪, ಅನೂರಾಧೆಗೆ ಕುಂಭದಲ್ಲಿ ಅರ್ಧ, ಜ್ಯೇಷ್ಠೆಗೆ ಕುಂಭದಲ್ಲಿ ೧।॥= , ಮೂಲಕ್ಕೆ ಕುಂಭದಲ್ಲಿ ೩॥= , ಪೂರ್ವಾಷಾಢಕ್ಕೆ ಮೀನದಲ್ಲಿ ೧॥, ಉತ್ತರಾಷಾಢಕ್ಕೆ ಮೀನದಲ್ಲಿ

೩||=, ಈ ಮೇರೆ ಆಯಾ ನಕ್ಷತ್ರಗಳುಚ್ಚವಾದರೆ ಆಯಾ ರಾಶಿಗಳಲ್ಲಿ ಅಷ್ಟಷ್ಟು ಘಳಿಗೆಗಳು ಕಳೆದವೆಂದು ತಿಳಿಯತಕ್ಕದ್ದು.

ಸಂಜ್ಞಾಪ್ರಕರಣವು ಸಂಪೂರ್ಣವಾದುದು

---

# ಜಾತಕರ್ಮಾದಿ ಮುಹೂರ್ತ ಪ್ರಕರಣವು

## ಇದರಲ್ಲಿ 'ಜಾತಕರ್ಮ ಪ್ರಕರಣವು.

**ಮುಖಾವಲೋಕನಸುತಸ್ಯಜೀವತಃ ಪಿತಾವಿಮುಚ್ಯೇತಯು ತಸ್ತ್ರದರ್ಣತಃ । ತತಃಕ್ಷಣಾದೀನ್ನಿಗಣಣೇಯತತ್‌ಕ್ಷಣಂ ವಿಧೀಯತೆ ಜನ್ಮವಿಧಿಸ್ಸುತೋದಯೇ॥**

ಮಗು ಹುಟ್ಟಿ ಬದುಕಿರುವಾಗ ತಂದೆಯು ಅದರ ಮುಖವನ್ನು ನೋಡಿದ ಮಾತ್ರದಿಂದಲೇ ಪಿತೃಗಳ ಋಣದಿಂದ ಮುಕ್ತನಾಗುತ್ತಾನೆ. ಆದ್ದರಿಂದ ಪುತ್ರನು ಹುಟ್ಟಿದ ಮಾತ್ರದಿಂದಲೇ ತಂದೆಯು ಅವನಿಗೆ ಜಾತಕರ್ಮವನ್ನು ಮಾಡಬೇಕು.

**ಪುತ್ರಜನ್ಮನಿಯಜ್ಞೇಚ ತಥಾಸಂಕ್ರಮಣೇರವೇಃ ।**
**ರಾಹೋಃ ಪ್ರದರ್ಶನೇಸ್ನಾನಂ ಪ್ರಶಸ್ತಂನಾನ್ಯಥಾನಿಶಿ ॥**

ಮಗನು ಹುಟ್ಟಿದಾಗಲೂ, ಯಜ್ಞದಲ್ಲಿಯೂ, ಸೂರ್ಯ ಸಂಕ್ರಮಣದಲ್ಲಿಯೂ, ಗ್ರಹಣದಲ್ಲಿಯೂ, ರಾತ್ರಿಕಾಲದಲ್ಲಿ ಸ್ನಾನಮಾಡತಕ್ಕದ್ದೇ ಹೊರತು ಇತರ ಕಾಲದಲ್ಲಿ ಸ್ನಾನಮಾಡಕೂಡದು.

**ಗ್ರಹಣೋದ್ವಾಹಸಂಕ್ರಾಂತಿ ಯಾತ್ರಾಸುಪ್ರಸವೇಷುಚ ।**
**ದಾನಂನೈಮಿತ್ತಿಕಂಜ್ಞೇಯಂ ರಾತ್ರಾವಪಿನದೂಷ್ಯತಿ ॥**

ಗ್ರಹಣ, ವಿವಾಹ, ಸಂಕ್ರಾಂತಿ, ಪ್ರಯಾಣ, ಪುತ್ರೋತ್ಪತ್ತಿ ಈ ಕಾಲಗಳಲ್ಲಿ ರಾತ್ರೀಕಾಲದಲ್ಲಿಯೂ ದಾನ ಮಾಡತಕ್ಕದ್ದು.

**ಯಾವಸ್ನಚ್ಛಿದ್ಯತೇನಾಳಂ ತಾವನ್ನಾಪ್ನೋತಿಸೂತಕಂ ।**
**ಛಿನ್ನಾನಾಳತತಃಪಶ್ಚಾತ್ಸೂತಕಂತುವಿಧೀಯತೇ ॥**

ಎಷ್ಟರವರಿಗೂ ನಾಳವು ಕೊಯ್ಯಲ್ಪಡುವುದಿಲ್ಲವೋ ಅಷ್ಟರವರಿಗೂ ಸೂತಕವಿಲ್ಲವು.

**ದೃಷ್ಟ್ವಾತತಶ್ಚ ವಿಧಿವತ್ಸಚೇಲಸ್ನಾನಮಾಚರೇತ್ ।**
**ದತ್ವಾಗೋಭೂಹಿರಣ್ಯಾದಿ ಪಶ್ಚಾದಗ್ನಿಂನಿರೀಕ್ಷಯೇತ್ ॥**

ನಾಳವು ಕೊಯ್ಯಲ್ಪಟ್ಟ ತರುವಾಯ ಶಿಶುವಿನ ಮುಖ ನೋಡಿ ಉಟ್ಟಿದ್ದ ವಸ್ತ್ರದೊಂದಿಗೆ ಸ್ನಾನಮಾಡಿ, ಗೋದಾನ, ಭೂದಾನ, ಧಾನ್ಯದಾನ ಇವುಗಳನ್ನು ಮಾಡಿ, ತರುವಾಯ ಅಗ್ನಿಯನ್ನು ನೋಡಬೇಕು.

**ತಸ್ಮಿನ್ಜನ್ಮಮುಹೂರ್ತೇಪಿ ಸೂತಕಾಂತೇಥವಾಶಿಶೋಃ ।**
**ಜಾತಕರ್ಮಚಕರ್ತವ್ಯಂ ಪಿತೃಪೂಜನತತ್ಪರೈಃ ॥**

ಮಗು ಹುಟ್ಟಿದ ಕಾಲದಲ್ಲಾದರೂ, ಸೂತಕ ತೀರಿದ ತರುವಾಯ ೧೧ನೇ ದಿವಸದಲ್ಲಾದರೂ ಮಗುವಿಗೆ ಜಾತಕರ್ಮ ಮಾಡಬೇಕು

## ನಾಮಕರಣವು

**ನಾಮಕರ್ಮ ದಶಮೇಥವಾಹನಿ ದ್ವಾದಶೇಶುಚಿಷುವಾವಿಧೀ ಯತೇ । ಸ್ವೋಚ್ಚಮಿತ್ರಭವನೇಷುಸದ್ಗ್ರಹಾಸ್ಸ್ವದೃಶ್ಯೈರ್ಯದಿ ವಿಲೋಕಿತಾಶ್ಶುಭಾಃ ॥**

ಮಗು ಹುಟ್ಟಿದ ೧೦ನೇ ದಿವಸದಲ್ಲಾದರೂ, ೧೨ನೇ ದಿವಸದಲ್ಲಾದರೂ ಶುಭಗ್ರಹಗಳು ಸ್ವಕ್ಷೇತ್ರ, ಉಚ್ಛಸ್ಥಾನ, ಮಿತ್ರಕ್ಷೇತ್ರಗಳಲ್ಲಿರುವಾಗಲೂ, ಅಥವಾ ಶುಭಗ್ರಹಗಳಿಂದ ನೋಡಲ್ಪಟ್ಟಿದ್ದರೂ ಶುಭ ದಿನದಲ್ಲಿ ಶಿಶುವಿಗೆ ನಾಮಕರಣವನ್ನು ಮಾಡತಕ್ಕದ್ದು

## ತರುವಾಯ ನಾಮಕರಣ ಕಾಲವನ್ನು ಹೇಳುತ್ತಾನೆ

**ಜಾತಾನಂತರಮೇವನಾಮ ಕರಣಂತ್ವೇಕಾದಶಾಹೇಸ್ಫುಟಂ ।**
**ಪುತ್ರಸ್ಯೈವಸಮಾಕ್ಷರಂತುಯುವತಃ ಕಾರ್ಯಂತತೋವ್ಯತ್ಯಯಂ**
**ಶುದ್ಧಿರ್ಜಾತಕವಚ್ಚನಾಮ್ನಿ ಸಕಲೈಸ್ತದ್ವಾದಶೇಷೋಡಶೇ ।**
**ದ್ವಾವಿಂಶೇವ್ಯಥವಿಂಶಕೇಹ್ನಿವಿಹಿತಂಜಾತಿವ್ಯವಸ್ಥಾಂವಿನಾ ॥**

ಮಗನು ಹುಟ್ಟಿದ ಕ್ಷಣದಲ್ಲೇ ಅವನು ಯಾವ ನಕ್ಷತ್ರದಲ್ಲಿ ಹುಟ್ಟಿತ್ತಾನೋ ಆ ನಕ್ಷತ್ರದ ಹೆಸರಿನಿಂದ ಶಿಶುವಿಗೆ ರಹಸ್ಯವಾಗಿ ನಾಮಧೇಯವನ್ನಿಟ್ಟು ತರುವಾಯ ೧೧ನೇ ದಿನದಲ್ಲಿ ಬಹಿರಂಗವಾಗಿ ನಾಮಕರಣವನ್ನು ಮಾಡತಕ್ಕದ್ದು ಹೇಗೆಂದರೆ:—ಅಶ್ವಿನಿಯಲ್ಲಿ ಹುಟ್ಟಿದ ಶಿಶುವಿಗೆ ಅಶ್ವಿನನು, ಕೃತ್ತಿಕೆಯಲ್ಲಿ ಹುಟ್ಟಿದ್ದಕ್ಕೆ ಕಾರ್ತಿಕನು, ರೋಹಿಣಿಯಲ್ಲಿ ಹುಟ್ಟಿದ್ದಕ್ಕೆ

ರೌಹಿಣನು, ಮೃಗಶೀರ್ಷದಲ್ಲಿ ಹುಟ್ಟಿದ್ದಕ್ಕೆ ಮಾರ್ಗಶೀರ್ಷನು, ಮಖೆಯಲ್ಲಿ ಹುಟ್ಟಿದ್ದಕ್ಕೆ ಮಾಖನು, ಈ ಮೇರೆ ೨೭ ನಕ್ಷತ್ರಗಳಿಗೂ ತಕ್ಕ ನಾಮಗಳನ್ನಿಡ ತಕ್ಕದ್ದು ಮತ್ತು ಹುಟ್ಟಿದ್ದು ಗಂಡುಶಿಶುವಾದರೆ ಹೆಸರು ಸಮಾಕ್ಷರವಾಗಿ ಶಿವ, ರಾಮ, ಕೃಷ್ಣ, ಲಿಂಗ, ನೀಲಕಂಠ, ರಾಮಚಂದ್ರ, ಮಹಾದೇವ ಎಂಬು ದಾಗಿಯೂ, ಹೆಣ್ಣುಮಗುವಾದರೆ ಕಮಲಾ, ಪಾರ್ವತಿ, ಸುಂದರೀ, ಜಾನಕೀ, ಕನಕವಲ್ಲೀ, ನೀಲಾಯತಾಕ್ಷೀ ಎಂದು ವಿಷಮಾಕ್ಷರವಾಗಿಯೂ ನಾಮಕರಣ ವನ್ನು ಮಾಡಬೇಕು. ಈ ನಾಮಕರಣಕ್ಕೆ ಲಗ್ನಶುದ್ಧಿ ಮೊದಲಾದುವುಗಳು ಜಾತಕರ್ಮದಂತೆಯೇ ತಿಳಿಯಬೇಕು ೧೧ನೇ ದಿನದಲ್ಲಿ ನಾಮಕರಣ ಮಾಡದೆ ಹೋದ ಪಕ್ಷದಲ್ಲಿ ಬ್ರಾಹ್ಮಣಾದಿ ನಾಲ್ಕು ವರ್ಣದವರಿಗೂ ವೃದ್ಧಿಯು ೧೦ ದಿನಗಳವರಿಗೂ ಅಶೌಚವು ಇರುತ್ತೆಂಬುದಾಗಿ ಶಾಸ್ತ್ರವಿರುವುದರಿಂದ ಜಾತಿ ಭೇದವಿಲ್ಲದೆ ನಾಲ್ಕು ವರ್ಣದವರೂ ಪ್ರಸವವಾದ ೧೨-೧೬-೨೦-೨೨ ಈ ದಿನ ಗಳಲ್ಲಿ ನಾಮಕರಣವನ್ನು ಮಾಡತಕ್ಕದ್ದೆಂದು ಭಾವವು

**ಮಿತ್ರಾದಿತ್ಯಮಖೋತ್ತರಾಶತಭಿಷಕ್ಸ್ವಾತೀಧನಿಷ್ಠಾಚ್ಯುತೇ ।**
**ಪ್ರಾಜೇಶಾಶ್ವಿಶಶಾಂಕಪೌಷ್ಣದಿನಕೃತ್ಪುಷ್ಯೇಷುರಾಶೌಸ್ಥಿರೇ ॥**
**ಛಿದ್ರಾನ್ಪಂಚದಶೀಂವಿಹಾಯನವಮೀಂಶುದ್ಧೇಷ್ಟಮೇಭಾರ್ಗವೇ ।**
**ಜ್ಞಾಚಾರ್ಯಾಮೃತಪಾರವಾರದಿವಸೇನಾಮಾನಿಕುರ್ಯಾಚ್ಛಿಶೋಃ ॥**

ಅನೂರಾಧಾ, ಪುನರ್ವಸು, ಮಖಾ, ಉತ್ತರಾ, ಉಷಾ, ಉಭಾ, ಶತಭಿಷಕ್, ಸ್ವಾತಿ, ಧನಿಷ್ಠಾ, ಶ್ರವಣ, ರೋಹಿಣೀ, ಅಶ್ವಿನೀ, ಮೃಗಶೀರ್ಷಾ, ರೇವತೀ, ಹಸ್ತ, ಪುಷ್ಯ ಈ ನಕ್ಷತ್ರಗಳಲ್ಲಿಯೂ, ಸ್ಥಿರರಾಶಿಗಳಲ್ಲಿಯೂ, ಉತ್ತಮ ಪಕ್ಷಚ್ಛಿದ್ರವನ್ನೂ, ಪೌರ್ಣಿಮಾವಾಸ್ಯೆಯನ್ನು ನವಮಿಯನ್ನು ಬಿಟ್ಟು ಅಷ್ಟಮಶುದ್ಧಿ ಇರುವಾಗಲೂ, ಶುಕ್ರ, ಬುಧ, ಗುರು ಸೋಮ, ಕುಜವಾರಗಳಲ್ಲಿಯೂ ಶಿಶುವಿಗೆ ನಾಮಕರಣವನ್ನು ಮಾಡತಕ್ಕದ್ದು

**ದೈವಪೂರ್ವಂಕರಾಖ್ಯಂಹಿ ಶರ್ಮವರ್ಮಾನುಭಾವತಃ ।**
**ಸುಶ್ರೀಯುತಂನಾಮಪೂರ್ವಂ ರೇಖಾಂತಂಸುಮನೋಕ್ಷರೈಃ॥**

ಮಗುವಿಗೆ ದೈವವಾಚಕಶಬ್ದ ಮೊದಲಾಗಿ ಶ್ರೀಕಾರ ಸಹಿತವಾಗಿ ಸಂಸ್ಕೃ ತಾಕ್ಷರಗಳಿಂದ ಬ್ರಾಹ್ಮಣಾದಿ ವರ್ಣಗಳಿಗೆ ಹೆಸರುಗಳನ್ನು ಶರ್ಮ, ವರ್ಮ, ಗುಪ್ತ, ಎಂಬ ಅಕ್ಷರಗಳ ಕೊನೇವರಿಗೆ ಕೈಯಿಂದ ಬರಿಯತಕ್ಕದ್ದು

**ಕೃಷ್ಣೋಽನಂತೋಽಚ್ಯುತಶ್ಚಕ್ರೀ ವೈಕುಂಠೋಽಥಜನಾರ್ದನಃ ।**
**ಉಪೇಂದ್ರೋಯಜ್ಞಪುರುಷೋ ವಾಸುದೇವಸ್ತಥಾಹರಿಃ ॥**
**ಗೋವಿಂದಃ ಪುಂಡರೀಕಾಕ್ಷೋ ಮಾಸನಾಮಾನ್ಯನುಕ್ರಮಾತ್।**
**ಕೇಚಿನ್ನಕ್ಷತ್ರನಾಮಾನಿ ಕುರ್ವಂತಿವಿದಿತಾಗಮಾ ॥**

ಹುಟ್ಟಿದ ಮಗುವಿಗೆ ಚೈತ್ರ ಮೊದಲು ಮೀನಮಾಸದವರೆಗೆ ಕ್ರಮವಾಗಿ ಕೃಷ್ಣನು, ಅನಂತನು, ಅಚ್ಯುತನು, ಚಕ್ರಿಯು, ವೈಕುಂಠ, ಜನಾರ್ಧನ, ಉಪೇಂದ್ರ, ಯಜ್ಞಪುರುಷ, ವಾಸುದೇವ, ಹರಿ, ಗೋವಿಂದ, ಪುಂಡರೀಕಾಕ್ಷ ಈ ೧೨ ಹೆಸರನ್ನೂ ಇಡತಕ್ಕದ್ದು. ಇದು ಮಾಸ ನಾಮಗಳು ಕೆಲವರು ನಕ್ಷತ್ರನಾಮಗಳನ್ನು ಇಡುತ್ತಾರೆ ಅಂದರೆ ಇಲ್ಲಿ ಹೇಳಲ್ಪಟ್ಟ ಕೃಷ್ಣಾದಿ ನಾಮಗಳಲ್ಲಿ ಒಂದನ್ನು ಶಿಶುವಿಗೆ ಇಟ್ಟು, ಆ ಶಿಶುವು ಯಾವ ತಿಂಗಳಲ್ಲಿ ಯಾವ ನಕ್ಷತ್ರದಲ್ಲಿ ಹುಟ್ಟಿತೋ ಅವುಗಳ ನಾಮವನ್ನು ಕೊನೆಯಲ್ಲಿ ಸೇರಿಸತಕ್ಕದ್ದು.

## ಹೆಣ್ಣುಮಕ್ಕಳಿಗೆ ಹೇಗೆಂದರೆ

**ಮಾರ್ಗಶೀರ್ಷೇಚವಾಗ್ದೇವೀ ಪುಷ್ಯೇಪದ್ಮಾವತೀಭವೇತ್ ।**
**ಶ್ರೀದೇವೀಚೈವಸಾವಿತ್ರೀ ಭೂಮಿಕಲ್ಯಾಣಿಕಾಸ್ಮೃತಾ ॥**
**ಸತ್ಯಭಾಮಾಪುಣ್ಯವತೀ ರೂಪಿಣೀಚೇಂದುಮತ್ಯಪಿ ।**
**ಚಂದ್ರಾವತೀಚ ಲಕ್ಷ್ಮೀಚ ಸ್ತ್ರೀನಾಮಕರಣೇವಿಧುಃ ॥**

ಹೆಣ್ಣುಮಕ್ಕಳಿಗೆ ಮಾರ್ಗಶಿರಮಾಸದಲ್ಲಿ ವಾಗ್ದೇವಿ, ಪುಷ್ಯಮಾಸದಲ್ಲಿ ಪದ್ಮಾವತಿ, ಮಾಘಮಾಸದಲ್ಲಿ ಶ್ರೀದೇವಿ, ಫಾಲ್ಗುಣಮಾಸದಲ್ಲಿ ಸಾವಿತ್ರಿ, ಚೈತ್ರಮಾಸದಲ್ಲಿ ಭೂದೇವಿ, ವೈಶಾಖ ಮಾಸದಲ್ಲಿ ಕಲ್ಯಾಣಿ, ಜ್ಯೇಷ್ಠ ಮಾಸದಲ್ಲಿ ಸತ್ಯಭಾಮಾ, ಆಷಾಢ ಮಾಸದಲ್ಲಿ ಪುಣ್ಯವತಿ, ಶ್ರಾವಣ ಮಾಸದಲ್ಲಿ ರೂಪಿಣಿ, ಭಾದ್ರಪದ ಮಾಸದಲ್ಲಿ ಇಂದುಮತೀ, ಆಶ್ವಯುಜ ಮಾಸದಲ್ಲಿ ಚಂದ್ರಾವತೀ, ಕಾರ್ತಿಕ ಮಾಸದಲ್ಲಿ ಲಕ್ಷ್ಮೀ, ಈ ಹೆಸರುಗಳನ್ನು ಸ್ತ್ರೀಗಳ ನಾಮಕರಣದಲ್ಲಿ ಮಾಸನಾಮಗಳೆಂದು ಹೇಳುತ್ತಾರೆ.

**ಕುಮಾರಸ್ಯಾಭಿವೃದ್ಧ್ಯರ್ಥಂ ಕುರ್ಯಾದ್ಬ್ರಾಹ್ಮಣ ಭೋಜನಂ ॥**

ಶಿಶುವಿಗೆ ಅಭಿವೃದ್ಧಿಯುಂಟಾಗುವುದಕ್ಕಾಗಿ ತಂದೆಯು ನಾಮಕರಣದಲ್ಲಿ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಬೇಕು.

**ದ್ವಿಕಾಕ್ಷರಂವಾ ಚತುರಕ್ಷರಂವಾ ವಿವರ್ಜಿತೋಪಾಂತ್ಯಲಕಾರ ರೇಫಂ। ತನ್ಮಾಸ ನಾಮಾದಿಕಮೇಕಚಿತ್ತಸ್ಸ್ಫುಟಂವದೇದ್ದಕ್ಷಿಣಕರ್ಣರಂಧ್ರೇ ॥**

ಹೆಸರಿನ ಕೊನೆ ಅಕ್ಷರದ ಮುಂಚೆ ಲ-ರ ಈ ೨ ಅಕ್ಷರಗಳಿಲ್ಲದ್ದಾಗಿಯೂ ಮಾಸನಾಮಧೇಯವಾಗಿಯೂ, ೪ ಅಕ್ಷರವಾಗಿಯೂ ಇರುವ ಹೆಸರನ್ನು ಶಿಶುವಿಗೆ ಬಲಗಡೆಯಲ್ಲಿ ಕಿವಿಯಲ್ಲಿ ಸ್ಪಷ್ಟವಾಗಿ ಹೇಳಬೇಕು

**ಅಷ್ಟಮಸ್ಥಗ್ರಹಾಸ್ಸರ್ವೇಲಗ್ನಾಸ್ತೇನಾಮಕರ್ಮಣೀ ।**
**ಧನಪುತ್ರಸುಹೃದ್ಭ್ರಾತೃನವಮೇನಶುಭಶ್ಶಶೀ ।**
**ಪಾಪಾಸ್ತ್ರಿಷಷ್ಟಲಾಭಾಸ್ಥಾಃ ನಾಮಕರ್ಮಣಿಪೂಜಿತಾಃ ।**
**ದ್ವಾದಶೇಹನಿಕರ್ತವ್ಯಂ ಶಿಶೋರ್ನಿಷ್ಕ್ರಮಣಂಗೃಹಾತ್ ॥**

ನಾಮಕರಣ ಲಗ್ನಕ್ಕೆ ಅಷ್ಟಮಶುದ್ಧಿ ಇರಬೇಕು. ದ್ವಿತೀಯ, ಪಂಚಮ, ಚತುರ್ಥ, ತೃತೀಯ, ನವಮ ಈ ಸ್ಥಾನಗಳಲ್ಲಿ ಶುಭಗ್ರಹಯುಕ್ತನಾದ ಚಂದ್ರನು, ತೃತೀಯ ಷಷ್ಠ ಲಾಭ ಸ್ಥಾನಗಳಲ್ಲಿರುವ ಪಾಪಗ್ರಹಗಳು ಸಹ ಶುಭ ಫಲಗಳನ್ನು ಕೊಡುವವು ಶಿಶು ಹುಟ್ಟಿದ ೧೨ನೇ ದಿವಸದಲ್ಲಿ ಸೂತಿಕಾಗೃಹದಿಂದ ಮಗುವನ್ನು ಹೊರಗೆ ತರಬೇಕು.

## ಚೊಗೆ ತೊಡಿಸುವುದು

**ಅಶ್ವಿನೀತ್ವಷ್ಟೃಪೌಷ್ಣೇಜ್ಯಾಮಿತ್ರೋತ್ತರಕರಾನಿಲೇ ।**
**ಸಿತಸೌಮ್ಯೇಜ್ಯವಾರೇಷುಚಂದ್ರತಾರಾಬಲಾನ್ವಿತೇ ।**
**ಶುಭೇಮುಹೂರ್ತೇಪೂರ್ವಾಹ್ಣೇಜಯೇ ಪೂರ್ಣದಿನೇತಥಾ ॥**
**ಕೇಂದ್ರತ್ರಿಕೋಣಗಾಸೌಮ್ಯಾಃ ಪಾಪಾಸ್ತ್ರ್ಯಾಯಾರಿರಾಶಿಗಾಃ ।**
**ಶಿಶೂನಾಂಧಾರಯೇತ್ಸ್ತ್ರಕಂಚುಕಂ ಚಿತ್ರವರ್ಣಕಂ ॥**

ಅಶ್ವಿನೀ, ಚಿತ್ರಾ, ರೇವತೀ, ಪುಷ್ಯ, ಅನೂ, ಉತ್ತ, ಉಷಾ, ಉಭಾ, ಹಸ್ತ, ಸ್ವಾತಿ, ಈ ನಕ್ಷತ್ರಗಳಲ್ಲಿಯೂ, ಶುಕ್ರ, ಬುಧ, ಗುರುವಾರಗಳಲ್ಲಿಯೂ, ಚಂದ್ರತಾರಾಬಲವುಳ್ಳ ಶುಭ ಮುಹೂರ್ತದಲ್ಲಿಯೂ, ಪೂರ್ವಾಹ್ಣದಲ್ಲಿಯೂ, ಜಯತಿಥಿಗಳಲ್ಲಿಯೂ, ಪೂರ್ಣದಿವಸದಲ್ಲಿಯೂ, ಶುಭಗ್ರಹಗಳು ಕೇಂದ್ರ ತ್ರಿಕೋಣಗಳಲ್ಲಿರುವಾಗಲೂ, ಪಾಪಗ್ರಹಗಳು ೩-೧೧-೬ನೇ ಸ್ಥಾನಗಳಲ್ಲಿರುವಾಗಲೂ ಶಿಶುವಿಗೆ ನಾನಾಬಣ್ಣವುಳ್ಳ ಚೊಗೆಯನ್ನು ತೊಡಿಸತಕ್ಕದ್ದು.

# ಮಗುವಿಗೆ ತೊಟ್ಟಿಲು ತೂಗಿಸುವುದು

**ತೃತೀಯೇಪಂಚಮೇಮಾಸಿ ತನ್ಮಾಸೇವಾಶುಭೇದಿನೆ ।**
**ಧಾತೃಮೂಲೋತ್ತರ ತ್ರೀಣಿ ತಿರ್ಯಗ್ಭೇಷುದ್ವಿದೈವಭೇ ॥**
**ಚಂದ್ರತಾರಾಬಲಯುತೇಚಾಷ್ಟಮೇಶುದ್ಧಿಸಂಯುತೇ ।**
**ಡೋಲಾಮಾರೋಪಯೇದ್ಬಾಲಂ ದ್ವಿಜಪುಣ್ಯಾಂಗನಾದಿಭಿಃ॥**

೩ನೇ ಮಾಸದಲ್ಲಿಯಾದರೂ, ೫ನೇ ಮಾಸದಲ್ಲಿಯಾದರೂ ಮಗು ಹುಟ್ಟಿದ ಮಾಸದಲ್ಲಿಯಾದರೂ, ಯಾವದಾದರೂ ಒಂದು ಶುಭದಿನದಲ್ಲಿ ರೋಹಿಣೀ, ಮೂಲ, ಉತ್ತರ, ಉಷಾ, ಉಭಾ, ಇವುಗಳಲ್ಲಿಯೂ ತಿರ್ಯ ಙ್ಮುಖ ನಕ್ಷತ್ರದಲ್ಲಿಯೂ, ಅಂದರೆ, ರೇವ, ಪುನ, ಹಸ್ತ, ಚಿತ್ತ, ಸ್ವಾ, ಅಶ್ವಿ, ಮೃಗ, ಅನೂ, ಜ್ಯೇಷ್ಠ, ವಿಶಾ, ಈ ನಕ್ಷತ್ರಗಳಲ್ಲಿಯೂ, ಚಂದ್ರತಾರಾಬಲ ವುಳ್ಳ ನಕ್ಷತ್ರದಲ್ಲಿಯೂ, ಅಷ್ಟಮಶುದ್ಧಿ ಇರುವಾಗಲೂ, ಬ್ರಾಹ್ಮಣರು ಮುತ್ತೈದೆಯರೊಂದಿಗೆ ಮಗುವನ್ನು ತೊಟ್ಟಿಲಿನಲ್ಲಿ ಇಡಬೇಕು

# ಅನ್ನಪ್ರಾಶನವು

**ಷಷ್ಠೇಷ್ಟಮೇವಾ ದಶಮೇಚಮಾಸಿ ಸಂವತ್ಸರೇವಾದಿವಸೇ ಪ್ರವೃದ್ಧೇ । ಪಕ್ಷೇಸಿತೇವ್ಯೋಮ್ನಿವಿಶುದ್ಧಿಭಾಜಿಬಾಲಾನ್ನಭುಕ್ತಿ ರ್ವಿಹಿತಾಮುನೀಂದ್ರೈಃ ॥**

೬-೮-೧೦ನೇ ತಿಂಗಳಲ್ಲಿಯಾದರೂ, ವರ್ಷಾಂತದಲ್ಲಿಯಾದರೂ, ಶುಕ್ಲ ಪಕ್ಷದ ಹಗಲಿನಲ್ಲಿ ಪುತ್ರನಿಗೆ ಅಷ್ಟಾದಿ ದೋಷಗಳಿಲ್ಲದಿರುವಾಗಲೂ ಬಾಲಕ ರಿಗೆ ಅನ್ನಪ್ರಾಶನ ಮಾಡತಕ್ಕದ್ದು

**ದೇವತಾಪುರತಸ್ತಸ್ಯಮಾತುಃ ಸ್ಸಂಗಗತಸ್ಯಚ ।**
**ಅಲಂಕೃತಸ್ಯಭೂಷಾಭಿರನ್ನಪಾತ್ರೇಚವಾಂಛಿತೇ ।**
**ಮಧ್ವಾಜ್ಯಕನಕೋಪೇತೇಪ್ರಾಶಯೆತ್ಪಾಯಸಂಶುಭಂ ॥**

ದೇವರ ಸಮ್ಮುಖದಲ್ಲಿ ತಾಯಿ ತೊಡೆಯಮೇಲೆ ಆಭರಣಗಳಿಂದ ಅಲಂಕೃತನಾಗಿರುವ ಶಿಶುವಿಗೆ ಸುವರ್ಣಾದಿಪಾತ್ರದಲ್ಲಿ ಪಾಯಸವನ್ನಿಟ್ಟು, ಅದರಲ್ಲಿ ತುಪ್ಪ, ಜೇನುತುಪ್ಪ ಮಿಶ್ರಮಾಡಿ ಆ ಪಾಯಸವನ್ನು ಕುಡಿಸುವದು.

**ಆದಿತ್ಯಸೌಮ್ಯವಸುತಿಷ್ಯಕರಾನಿಲಾಶ್ವಿ । ಮಿತ್ರಾಖ್ಯವಿಷ್ಣು ವರುಣೋತ್ತರಭಾನಿಚಿತ್ರಾ। ಬಾಲಾನ್ನಭೋಜನವಿಧೌದಶಮೇಚ ಶುದ್ಧೇ । ಛಿದ್ರಾನ್ವಿಹಾಯನವಮೀಂತಿಥಯಃಶುಭಾಸ್ಯುಃ ॥**

ಪುನರ್ವಸು, ಮೃಗಶಿರ, ಧನಿಷ್ಠಾ, ಪುಷ್ಯ, ಹಸ್ತಾ, ಸ್ವಾತೀ, ಅಶ್ವಿನೀ, ಅನೂ, ಶ್ರವಣ, ಶತ, ಉತ್ತರ, ಉಷಾ, ಉಭಾ, ಚಿತ್ರಾ, ಈ ನಕ್ಷತ್ರಗಳಲ್ಲಿಯೂ, ದಶಮಶುದ್ಧಿ ಇರುವಾಗಲೂ ಒಳ್ಳೇದು ಪಕ್ಷಚ್ಛಿದ್ರಗಳನ್ನೂ ನವಮಿಯನ್ನೂ ಬಿಟ್ಟು ಮಿಕ್ಕ ತಿಥಿಗಳಲ್ಲಿ ಬಾಲಕರಿಗೆ ಅನ್ನಪ್ರಾಶನವು ಶುಭಕರವಹುದು

**ವಾರಾಶ್ಚಭಾಶ್ಚ ಗುರು ಚಂದ್ರಸಿತೇಂದುಜಾನಾಂ । ಮೇಷಾಳಿ ಮೀನರಹಿತಾನಿಹಿತಾನಿಧಾನಿ। ಭುಕ್ತ್ಯಾಶಿಶೋಃ ಶುಭಕರಾಃ ಪರಿಹೃತ್ಯಸೌಮ್ಯಂ ಭೌಮಂಸಿತಂನವಮನೈಧನಸಪ್ತಮೇಷು ॥**

ಗುರು, ಶುಕ್ರ, ಸೋಮ, ಬುಧವಾರಗಳೂ, ಮೇಷ, ವೃಶ್ಚಿಕ, ಮೀನರಾಶಿಗಳನ್ನು ಬಿಟ್ಟು ಮಿಕ್ಕ ರಾಶಿಗಳೂ ೭-೮-೯ನೇ ರಾಶಿಗಳಲ್ಲಿ ಬುಧ, ಅಂಗಾರಕ, ಶುಕ್ರರು ಇಲ್ಲದಿರುವಿಕೆಯೂ, ಮಗುವಿನ ಅನ್ನಪ್ರಾಶನಕ್ಕೆ ಶುಭಕರವು

## ಅನ್ನಪ್ರಾಶನ ಲಗ್ನದಲ್ಲಿರುವಾಗ ಗ್ರಹಗಳ ಫಲಗಳನ್ನು ಹೇಳುತ್ತಾನೆ

**ಕುಷ್ಠೀಲಗ್ನಗತೇ ರವೌ ತನುಕಳೀ ಚಂದ್ರೇ ಸದಾ ಭಿಕ್ಷುಕಃ । ಪೂರ್ಣೇಂದೌ ಬಹುಸತ್ರಭೋವನಿಸುತೇ ಪಿತ್ತಾರ್ದ್ದಿದೋ ಜ್ಞಾನವಾನ್ । ಜ್ಞೇಜೀವೇ ಬಹುಭೋಗವಾನ್ ಭೃಗುಸುತೇ ದೀರ್ಘಾಯುರರ್ಕಾತ್ಮಜೇ । ವಾತಾಂಗೀ ತಮಸಿಧ್ವಜೇಸ್ಯ ನಶನೀ ಬಾಲಾನ್ನಭೋಕ್ತಾಭವೇತ್ ॥**

ಅನ್ನಪ್ರಾಶನ ಲಗ್ನದಲ್ಲಿ ಸೂರ್ಯನಿದ್ದರೆ ಶಿಶುವು ಕುಷ್ಠರೋಗವುಂಟಾಗುತ್ತದೆ. ಕ್ಷೀಣಚಂದ್ರನಿದ್ದರೆ ಶಿಶುವು ಯಾವಾಗಲೂ ಭಿಕ್ಷುಕನಾಗುತ್ತಾನೆ, ಪೂರ್ಣಚಂದ್ರನಿದ್ದರೆ ಬಹಳ ಅನ್ನದಾನ ಮಾಡುವನು, ಅಂಗಾರಕನಿದ್ದರೆ ಬಾಲಕನು ಪಿತ್ತವ್ಯಾಧಿಯುಳ್ಳವನಾಗುತ್ತಾನೆ, ಬುಧನಿದ್ದರೆ ಜ್ಞಾನವಂತನಾಗುತ್ತಾನೆ, ಗುರುವಿದ್ದರೆ ಬಹು ಭೋಗವುಳ್ಳನಾಗುತ್ತಾನೆ, ಶುಕ್ರನಿದ್ದರೆ

ದೀರ್ಘಾಯುಷ್ಮಂತನಾಗುತ್ತಾನೆ, ಶನಿಯಿದ್ದರೆ ವಾಯುರೋಗಶರೀರವುಳ್ಳವನಾಗುತ್ತಾನೆ, ರಾಹು ಕೇತುಗಳಿದ್ದರೆ ಯಾವಾಗ್ಯೂ ತಿನ್ನುವುದಕ್ಕಿಲ್ಲದೆ ಕಷ್ಟಪಡುವನು, ಇದರಿಂದ ಬಾಲಕನ ಅನ್ನಪ್ರಾಶನಕ್ಕಾಗಿ ನಿರ್ಣಯಿಸತಕ್ಕ ಶುಭಲಗ್ನದಲ್ಲಿ ಪೂರ್ಣಚಂದ್ರ, ಬುಧ, ಗುರು, ಶುಕ್ರ ಈ ನಾಲ್ಕರಲ್ಲಿ ಒಂದು ಗ್ರಹವಿರಬೇಕೆಂದು ಭಾವವು

## ನೂತನ ವಸ್ತ್ರಧಾರಣವು

**ಹಸ್ತೋತ್ತರಾನಿಲಪುನರ್ವಸುತಿಷ್ಯ ಮಿತ್ರತ್ವಷ್ಟೃ ದ್ವಿದೈವವಿಧಿ**
**ವಾರುಣಪೌಷ್ಣಭೇಷು। ರಿಕ್ತಾಃಕ್ರಿಯಾಳಿ ಹರಿಚಾಪಝಷಾರ್ಕ**
**ಭೌಮವಾರಾನ್ವಿಹಾಯ ನವವಸ್ತ್ರಮುಶಂತಿಧಾರ್ಯಂ॥**

ಹಸ್ತ, ಉತ್ತರ, ಉಷಾ, ಉಭಾ, ಸ್ವಾತಿ, ಪುನರ್ವಸು, ಪುಷ್ಯ, ಅನೂ, ಚಿತ್ತಾ, ವಿಶಾಖಾ, ರೋಹಿಣೀ, ಶತಭಿಷಕ್, ರೇವತೀ ಈ ನಕ್ಷತ್ರಗಳಲ್ಲುತ್ತಮ. ರಿಕ್ತ ತಿಥಿಗಳನ್ನೂ, ಮೇಷ, ವೃಶ್ಚಿಕ, ಸಿಂಹ, ಧನುಸ್ಸು, ಮೀನ ರಾಶಿಗಳನ್ನೂ, ಆದಿತ್ಯಾಂಗಾರಕವಾರಗಳನ್ನೂ ಬಿಟ್ಟು ಕಡಮೆ ತಿಥಿರಾಶಿಗಳಲ್ಲಿ ನೂತನ ವಸ್ತ್ರಗಳನ್ನು ಧರಿಸತಕ್ಕದ್ದು.

## ಕೇಶಖಂಡನವು

**ಅಶ್ವೀಪುಷ್ಯಪುನರ್ವಸೂಮೃಗಶಿರಸ್ಸ್ವಾತ್ಯಂತವಿಷ್ಣುತ್ರಯಂ।**
**ಚಂದ್ರಜ್ಞಾಮರಪೂಜ್ಯಶುಕ್ರಸಹಿತಾಃಪೂರ್ಣಾಜಯಾಖ್ಯಾಶ್ಶುಭಾಃ।**
**ಪೂರ್ವಾಹ್ಣೇಶುಭಲಗ್ನಹೋರದಿವಸೇಯುಗ್ಮೇಚಮಾಸೇಶಿಶೋಃ।**
**ಕೇಶಚ್ಛೇದನಮಿಷ್ಟದಂಮುನಿವರ್ಯೈರ್ಯುಕ್ತಂವರಾಹಾದಿಭಿಃ॥**

ಅಶ್ವಿ, ಪುಷ್ಯ, ಪುನ, ಮೃಗಶಿರ, ಸ್ವಾತಿ, ರೇವತಿ, ಶ್ರವಣ ಧನಿಷ್ಠಾ, ಶತಬಿಷಕ್, ಈ ನಕ್ಷತ್ರಗಳೂ, ಸೋಮ, ಬುಧ, ಗುರು, ಶುಕ್ರವಾರಗಳೊಂದಿಗೆ ಸೇರಿದ ಪೂರ್ಣ ತಿಥಿಗಳೂ, ಜಯತಿಥಿಗಳೂ, ಕೇಶಖಂಡನದಲ್ಲಿ ಶುಭಕರಗಳು. ಮತ್ತು ಪೂರ್ವಾಹ್ಣದಲ್ಲೂ, ಶುಭಲಗ್ನ, ಶುಭಹೋರೆ, ಶುಭ ದಿವಸಗಳಲ್ಲಿಯೂ, ೨-೪-೬-೮-೧೦ ಇಂಥಾ ಸಮ ಮಾಸಗಳಲ್ಲಿಯೂ ಮಗುವಿಗೆ ಕೇಶಖಂಡನವನ್ನು ಮಾಡತಕ್ಕದ್ದು

## ಕರ್ಣವೇಧನವು

**ಮಾಸೇಷಷ್ಠೇ ಸಪ್ತಮೇವಾಷ್ಟಮೇವಾ ವೇಧ್ಯೌ ಕರ್ಣೌ ದ್ವಾದಶೇ ಷೋಡಶೇಹ್ನಿ । ಮಧ್ಯೇವಾಹ್ನಃ ಪೂರ್ವಭಾಗೇನ ರಾತ್ರೌ ನಕ್ಷತ್ರೇ ದ್ವೇದ್ವೇ ತಿಥಿರ್ವರ್ಜಯಿತ್ವಾ ॥**

೬-೭-೮ ನೇ ಮಾಸಗಳಲ್ಲಿ ಮಗು ಹುಟ್ಟಿದ ೧೨-೧೬ನೇ ದಿವಸಗಳಲ್ಲಿಯಾದರೂ, ಮಧ್ಯಾಹ್ನ ಕಾಲದಲ್ಲಿಯಾದರೂ, ಅದರ ಪೂರ್ವಭಾಗದಲ್ಲಿಯಾದರೂ ಒಳ್ಳೆಯದು ೨ ನಕ್ಷತ್ರಗಳು, ೨ ತಿಥಿಗಳು ನೇರಿದ ದಿನಗಳನ್ನು ಬಿಟ್ಟು ಪೂರ್ಣತಿಥಿ ನಕ್ಷತ್ರಗಳಲ್ಲಿ ಶಿಶುವಿಗೆ ಕಿವಿ ಚುಚ್ಚತಕ್ಕದ್ದು. ರಾತ್ರಿ ಕಾಲದಲ್ಲಿ ಕರ್ಣವೇಧನವು ಕೂಡದೆಂದು ಭಾವವು

**ಹರಿಹರಕರಚಿತ್ರಾಸೌಮ್ಯಪೌಷ್ಣೋತ್ತರಾರ್ದ್ರಾ ।**
**ದಿತಿವಸುಷುಘಟಾಳೀಸಿಂಹಲಗ್ನೈರ್ವಿವರ್ಜೇ ।**
**ಶಶಿಬುಧಗುರುಕಾವ್ಯೇವಾಸರೇ ಸರ್ವರಿಕ್ತಾ ।**
**ರಹಿತತಿಥಿಷುಶುದ್ಧೆನೈಧನೇ ಕರ್ಣವೇಧಃ ॥**

ಶ್ರವಣ, ಆದ್ರಾ್ರ, ಹಸ್ತ, ಚಿತ್ತಾ, ಮೃಗ, ರೇವತಿ, ಉತ್ತರ, ಉಷಾ, ಉಭಾ, ಪುಷ್ಯ, ಪುನ, ಧನಿಷ್ಠಾ ಈ ನಕ್ಷತ್ರಗಳಲ್ಲಿ ಉತ್ತಮ. ಕುಂಭ, ವೃಶ್ಚಿಕ, ಸಿಂಹಲಗ್ನಗಳನ್ನೂ ಪಂಚಪರ್ವಗಳನ್ನೂ ರಿಕ್ತತಿಥಿಗಳನ್ನೂ ಬಿಟ್ಟು ಇತರ ಲಗ್ನ ತಿಥಿಗಳಲ್ಲಿಯೂ, ಸೋಮ, ಬುಧ, ಗುರು, ಶುಕ್ರವಾರಗಳಲ್ಲಿಯೂ ಅಷ್ಟಮಶುದ್ಧಿ ಇರುವಾಗಲೂ ಕರ್ಣವೇಧನವು ಮಾಡತಕ್ಕದ್ದು

**ಕರ್ಣವೇಧನಲಗ್ನಸ್ಯ ನೇಷ್ಟಾಸರ್ವೇಷ್ಟಮೇಸ್ಥಿತಾಃ ॥**
**ಉಕ್ತೇನೈವವಿಧಾನೇನ ಕುರ್ಯಾತ್ಕರ್ಣಸ್ಯವೇಧನಂ ।**
**ಅನುಕ್ತಮಪಿಕುರ್ಯಾಚ್ಚ ಕರ್ಣಚ್ಛೇದೋಭವಿಷ್ಯತಿ ॥**

ಕರ್ಣವೇಧನ ಲಗ್ನಕ್ಕೆ ಅಷ್ಟಮಸ್ಥಾನದಲ್ಲಿ ಯಾವ ಗ್ರಹವೂ ಇರ ಕೂಡದು. ಹಿಂದೆ ಹೇಳಲ್ಪಟ್ಟ ಕ್ರಮದಂತೆ ಕರ್ಣವೇಧನ ಮಾಡದೆ ಮನಸ್ಸಿಗೆ ಬಂದಂತೆ ಮಾಡಿದರೆ ಚುಚ್ಚಿದ ಕಿವಿಯು ಕಿತ್ತುಹೋಗವುದು.

## ಚೌಲವಿಧಿಯು

**ತೃತೀಯುವರ್ಷೇಪ್ಯಥಪಂಚಮುಚ್ಛೇಗತತ್ರಿಭಾಗೇಪ್ರವದಂತಿ**

**ಚೌಲಂ । ಉದಗ್ಗತೇರ್ಕೇಗುರುಶುಕ್ರತೇಜಃ । ಪ್ರಕಾಶಿತಂ ವ್ಯೋಮ್ನಿಚಶುಕ್ಲಪಕ್ಷೇ॥**

ಮಗು ಹುಟ್ಟಿದ ೩ ವರ್ಷದಲ್ಲಾದರೂ ಅಥವಾ ೫ನೇ ವರ್ಷದಲ್ಲಾದರೂ ಆ ವರ್ಷದಲ್ಲಿ ಮೂರುವಾಲು ಕಳೆದುಹೋದಮೇಲೆ ಉತ್ತರಾಯಣದಲ್ಲಿ ಗುರು, ಶುಕ್ರರು, ಆಕಾಶದಲ್ಲಿ ಪ್ರಕಾಶಿಸುತ್ತಿರುವಾಗ ಶುಕ್ಲಪಕ್ಷದಲ್ಲಿ ಚೌಲ ಮಾಡತಕ್ಕದ್ದು

**ಆದಿತ್ಯಸೌಮ್ಯ ವಸುವೈಷ್ಣವಪೌಷ್ಯತಿಷ್ಯತ್ವಾಷ್ಟ್ರೇಶ್ವಿಚಂಡಕಿರಣೇಷು ದಿವಾಪ್ರಶಸ್ತಂ । ಸ್ವಾತೀವಿಧಾತೃವರುಣೋತ್ತರಭಾಸುಮಧ್ಯಾ। ಸ್ಯಾಹುರ್ನಿಶಾಸ್ವಪಿನಚಕ್ಷುರಕರ್ಮಕಾರ್ಯಂ॥**

ಪುನರ್ವಸು, ಮೃಗಶಿರಾ, ಧನಿಷ್ಠಾ, ಶ್ರವಣ, ರೇವತೀ, ಪುಷ್ಯ, ಚಿತ್ರಾ, ಅಶ್ವಿನಿ, ಹಸ್ತ, ಈ ನಕ್ಷತ್ರಗಳಲ್ಲಿ ಉತ್ತಮ ಸ್ವಾತೀ, ರೋಹಿಣೀ, ಶತಭಿಷಕ್, ಉತ್ತರ, ಉತ್ತರಾಭಾದ್ರ, ಉತ್ತರಾಷಾಢಾ, ಈ ನಕ್ಷತ್ರಗಳು ಮಧ್ಯಮಗಳು ಏವಂಚ ಚೌಲವನ್ನು ಮಧ್ಯಾಹ್ನ ಕಾಲದಲ್ಲೇ ಮಾಡತಕ್ಕದ್ದೇ ಹೊರ್ತು ರಾತ್ರಿಕಾಲದಲ್ಲಿ ಮಾಡಕೂಡದು

**ಷಷ್ಠ್ಯಷ್ಟಮೀಪ್ರತಿಪದಸ್ತಿಥಯಶ್ಚ ರಿಕ್ತಾವರ್ಜ್ಯಾಃ ಶಶಾಂಕ ಗುರು ಸೋಮಜ ಭಾರ್ಗವಾಣಾಂ ॥ ವಾರಾಂಶಕೋದಯ ವಿಲೋಕನಮಿಷ್ಟಮಾಹುಃ ಕ್ಷೌರೇಶುಕರ್ಮಣಿ ಶುಭಂ ನ ದಿಶಂತಿಚಾನ್ಯೇ॥**

ಕ್ಷೌರಕರ್ಮದಲ್ಲಿ ಷಷ್ಠೀ, ಅಷ್ಟಮೀ, ಪ್ರತಿಪತ್, ರಿಕ್ತ ತಿಥಿಗಳು, ಇವುಗಳನ್ನು ಬಿಡತಕ್ಕದ್ದು ಮತ್ತು ಚಂದ್ರ, ಗುರು, ಬುಧ, ಶುಕ್ರ, ಈ ವಾರಗಳು, ಅಂಶಗಳು, ಲಗ್ನಗಳು, ವೀಕ್ಷಣಗಳು, ಇವುಗಳು ಶುಭಪ್ರದಗಳು ಇತರ ಗ್ರಹಗಳ ವಾರ, ಅಂಶ, ಲಗ್ನ ವೀಕ್ಷಣಗಳು ಅಶುಭಗಳು

**ಕರ್ಕ್ಯಂಗನಾಮಿಥುನಮೀನತುಲೋಕ್ಷನಕ್ರಾಃಪೂಜ್ಯಾಃಕ್ರಿಯಾಳಿ ಹರಿಚಾಪಘಟಾಜಘಾನ್ಯಾಂತೇಪಿಸ್ವವೀರ್ಯಶುಭಖೇಟಯುತಾನಿಧೇಯಾ ಚೌಲೇಘಟೋಶುಭಯುತೋಪಿನಿಷಿದ್ಧಏವ॥**

ಕ್ಷೌರ ಕರ್ಮದಲ್ಲಿ ಕಟಕ, ಕನ್ಯಾ, ಮಿಥುನ, ಮೀನ, ತುಲಾ, ವೃಷಭ, ಮಕರ, ಈ ರಾಶಿಗಳು ಉತ್ತಮಗಳು, ಮೇಷ, ವೃಶ್ಚಿಕ, ಸಿಂಹ, ಧನುಸ್ಸು,

ಕುಂಭರಾಶಿಗಳು ಅಧಮಗಳು, ಅಂಥಾ ಅಧಮ ರಾಶಿಗಳು ತಮ್ಮ ಬಲದೊಂದಿಗೂ, ಶುಭಗ್ರಹಗಳೊಂದಿಗೂ ಕೂಡಿಕೊಂಡು ಇದ್ದರೆ ಆ ರಾಶಿಗಳಲ್ಲೂ ಮಾಡಬಹುದು. ಆದರೆ ಕುಂಭರಾಶಿ ಮಾತ್ರ ಎಷ್ಟು ಬಲವಿದ್ದರೂ ಬಿಡತಕ್ಕದ್ದಾಗಿದೆ.

**ತ್ರಿಕೋಣ ಕೇಂದ್ರಾಯಗತೇಷುಸೌಮ್ಯೇಷ್ವಾಯಾರಿದುಶ್ಚಿಕ್ಯ ಭವಾಶ್ರಿತೇಷು। ಪಾಪೇಷುಶುದ್ಧೇಷ್ಟಮಕೇಶಿಶೂನಾಂ ಚೌಲಂ ಪ್ರಶಸ್ತಂ ಮುನಿಭಿಃ ಪ್ರದಿಷ್ಟಂ॥**

ಶುಭಗ್ರಹಗಳು ಲಗ್ನ ೪-೫-೭-೯-೧೦-೧೧ ಈ ಸ್ಥಾನಗಳಲ್ಲಿ ಇರುವಾಗಲೂ, ೩-೬-೧೧ ಈ ಸ್ಥಾನಗಳಲ್ಲಿ ಪಾಪಗ್ರಹಗಳಿರುವಾಗಲೂ, ಅಷ್ಟಮ ಶುದ್ಧಿ ಇರುವಾಗಲೂ, ಮಗುವಿಗೆ ಚೌಲಕರ್ಮವನ್ನು ಮಾಡುವುದುತ್ತಮ.

**ಸೂನೋರ್ಮಾತರಿಗರ್ಭಿಣ್ಯಾ ಚೂಡಾಕರ್ಮನಕಾರಯೇತ್।**
**ಯದಿಕುರ್ಯಾದ್ವಿಪತ್ತಿಸ್ಯಾದ್ದಂಪತ್ಯೋಃಶ್ಚಶಿಶೋಃಶ್ಚವಾ॥**

ಮಗುವಿನ ತಾಯಿ ಗರ್ಭವತಿಯಾಗಿರುವಾಗ ಮಗುವಿಗೆ ಚೌಲಕರ್ಮ ಮಾಡಕೂಡದು. ಹಾಗೆ ಮಾಡಿದರೆ ತಾಯಿತಂದೆಗಳಿಗಾದರೂ ಅಥವಾ ಮಗುವಿಗಾದರೂ ಅನಿಷ್ಟ ಸಂಭವಿಸುವುದು.

## ಅಕ್ಷರಾಭ್ಯಾಸ

**ಉದಗರ್ಕೇ ಪಂಚಮೇಬ್ದೆ ಪಂಚಮೇಮಾಸಿಪಂಚಮೇ॥**
**ದಿವಸೇಪಿಚಬಾಲಾನಾಮಕ್ಷರಗ್ರಹಣಂಸ್ಮೃತಂ॥**

ಬಾಲಕರಿಗೆ ೫ನೇ ವರ್ಷ, ೫ನೇ ಮಾಸ, ೫ನೇ ದಿವಸದಲ್ಲಿ ವಿದ್ಯಾಭ್ಯಾಸ ಮಾಡಿಸತಕ್ಕದ್ದು, ಆ ಕಾಲ ಉತ್ತರಾಯಣವಾಗಿದ್ದರೆ ಉತ್ತಮ.

**ಉದಗ್ಗತೇಭಾಸ್ವತಿಪಂಚಮೇಬ್ದೆ ಪ್ರಾಪ್ತೇಕ್ಷರಸ್ವೀಕರಣಂಶಿಶೂನಾಂ । ಸರಸ್ವತೀಂವಿಘ್ನವಿನಾಯಕಂಚ ಗುಡೋದನಾದ್ಯೈರಭಿಪೂಜ್ಯಕುರ್ಯಾತ್॥**

ಸೂರ್ಯನು ಉತ್ತರಾಯಣವಲ್ಲಿರುವಾಗ ಮಗುವಿಗೆ ೫ನೇ ವರುಷದಲ್ಲಿ ಸರಸ್ವತೀ ವಿಘ್ನೇಶ್ವರರಿಗೆ ಮಧುರವಾದ ಭಕ್ಷ್ಯಭೋಜ್ಯಾದಿಗಳಿಂದ ಪೂಜೆಯನ್ನು ಮಾಡಿ ವಿದ್ಯಾಭ್ಯಾಸವನ್ನು ಮಾಡಿಸತಕ್ಕದ್ದು.

**ಹಸ್ತಾದಿತ್ಯಸಮೀರಮಿತ್ರಪುರಜಿತ್ಪೌಷ್ಣಾಶ್ವಿಚಿತ್ರಾಚ್ಯುತೇ।**
**ಷ್ವಾರಾರ್ಕ್ಯಾರ್ಕಜವಾಸರಾದಿರಹಿತೆ ರಾಶೌಚರೆಚೋಭಯೇ।**
**ಪಕ್ಷೇಪೂರ್ಣನಿಶಾಕರೇಪ್ರತಿಪದಂ ರಿಕ್ತಾವಿಹಾಯಾಷ್ಟಮೀಂ।**
**ಷಷ್ಠೀಮಷ್ಟಮಶುದ್ಧಿಭಾಜಭವನೇ ಪ್ರೋಕ್ತಾಕ್ಷರಸ್ವೀಕೃತಿಃ॥**

ಹಸ್ತ, ಪುನ, ಸ್ವಾತೀ, ಅನೂ, ಆರ್ದ್ರಾ, ರೇವತಿ, ಅಶ್ವಿನಿ, ಚಿತ್ರಾ, ಶ್ರವಣ, ಈ ನಕ್ಷತ್ರಗಳಲ್ಲಿ ಉತ್ತಮ, ಆದಿತ್ಯ, ಅಂಗಾರಕ, ಶನಿವಾರಗಳನ್ನು ಬಿಟ್ಟು ಮಿಕ್ಕ ವಾರಗಳಲ್ಲಿಯೂ, ಚರ, ದ್ವಿಸ್ವಭಾವ ರಾಶಿಗಳಲ್ಲಿಯೂ, ಶುಕ್ಲ, ಕೃಷ್ಣಪಕ್ಷಗಳಲ್ಲಿ ಚಂದ್ರನು ಪೂರ್ಣನಾಗಿರುವಾಗಲೂ ಉತ್ತಮ, ಪಾಡ್ಯಮಿಗಳನ್ನೂ ರಿಕ್ತತಿಥಿಗಳನ್ನೂ, ೨ ಅಷ್ಟಮಿಗಳನ್ನೂ, ೨ ಷಷ್ಠಿಗಳನ್ನೂ ಬಿಟ್ಟು ಅಷ್ಟಮಶುದ್ಧಿ ಇರುವ ಶುಭಲಗ್ನದಲ್ಲಿ ಅಕ್ಷರ ಸ್ವೀಕಾರ ಮಾಡಿಸತಕ್ಕದ್ದು.

## ಉಪನಯನ ಕ್ರಮ

**ಉಕ್ತರ್ತೌಗರ್ಭಾಷ್ಟಮಾದ್ಯುಕ್ತವರ್ಷೇ ವಿಪ್ರಾದೀನಾಮುಚ್ಯತೇ ಮೌಂಜಿಬಂಧಃ ॥ ಅರ್ಧಾಯುಸ್ತ್ರೀಧರ್ಮಪುತ್ರಾಖ್ಯಸಂಸ್ಥೇಚೆ ದ್ವಾಗೀಶಸ್ಯಾಚ್ಛಿಶೋರ್ಮೌಂಜಿಬಂಧಃ ॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಸೂತ್ರಕಾರರಿಂದ ಹೇಳಲ್ಪಟ್ಟಿರುವ ವಸಂತ, ಗ್ರೀಷ್ಮ, ಶರದೃತುಗಳಲ್ಲಿಯೂ ಹುಟ್ಟಿದ್ದು ಮೊದಲು ಬ್ರಾಹ್ಮಣರಿಗೆ ೮ನೇ ವರ್ಷ, ಕ್ಷತ್ರಿಯರಿಗೆ ೧೧ನೇ ವರ್ಷ, ವೈಶ್ಯರಿಗೆ ೧೨ನೇ ವರ್ಷಗಳಲ್ಲಿಯೂ, ೨-೧೧-೭-೯-೫ ಈ ರಾಶಿಗಳಲ್ಲಿ ಬೃಹಸ್ಪತಿ ಇರುವಾಗ ಬ್ರಾಹ್ಮಣಾದಿ ಮೂರು ವರ್ಣದವರಿಗೆ ಉಪನಯನವನ್ನು ಮಾಡತಕ್ಕದ್ದು.

**ಋಗ್ವೇದಾಧಿಪತಿರ್ಜೀವೋಯಜುರ್ವೇದಾಧಿಪಸ್ಸಿತಃ ।**
**ಸಾಮವೇದಾಧಿಪೋಧೌಮಶ್ಯಶಿಜ್ಞೋಥರ್ವನಾಯಕಃ ॥**

ಋಗ್ವೇದಕ್ಕೆ ಬೃಹಸ್ಪತಿಯು, ಯಜುರ್ವೇದಕ್ಕೆ ಶುಕ್ರನೂ ಸಾಮವೇದಕ್ಕೆ ಅಂಗಾರಕನು, ಅಥರ್ವಣ ವೇದಕ್ಕೆ ಬುಧನು ಅಧಿಪತಿಗಳೆಂದು ತಿಳಿಯತಕ್ಕದ್ದು.

**ಚಂದ್ರಾದಿತ್ಯೋತ್ತರಾಶ್ವಿಶ್ರವಣವಸುಮರುತ್ಪಷ್ಟ್ಯಪೌಷ್ಣಾರ್ಕಮಿತ್ರ । ಪ್ರಾಜೆಶಾರ್ಯೇಷು ಸೌಮ್ಯಾಮರಗುರು ಶಶ ಭೃಗ್ವಾರ ರಾಶ್ಯಂ ಶಕೇಷು । ತ್ಯಕ್ತಾನಧ್ಯಾಯರಿಕ್ತಾಪಿತೃತಿಥಿಷುಯಮಾ**

**ರಾರ್ಕ್ಕ ಯುಕ್ತಾನ್ಯ ರಾಶೌ ಗೋಜೋಪಾಂತ್ಯಾಙ್ಗನಾಕರ್ಕಿತುಲ ಮಿಥುನಭೇಷ್ವಷ್ಟಮೇಧಾಮ್ನಿಶುದ್ಧೇ॥**

ಮೈ, ಪುನ, ಉತ್ತರ, ಉಷಾ, ಉಭಾ, ಅಶ್ವಿನಿ, ಶ್ರವಣ, ಧನಿಷ್ಠಾ, ಸ್ವಾತಿ, ಚಿತ್ರಾ, ರೇವ, ಹಸ್ತ, ಅನೂ, ರೋ, ಪುಷ್ಯ ಈ ನಕ್ಷತ್ರಗಳಲ್ಲಿಯೂ, ಬುಧ, ಗುರು, ಸೋಮ, ಶುಕ್ರ, ಅಂಗಾರಕ, ಈ ರಾಶಿಗಳಲ್ಲಿಯೂ ಅಂಶ ಗಳಲ್ಲಿಯೂ ಉತ್ತಮ ಅನಧ್ಯಯನ ದಿನಗಳನ್ನೂ, ರಿಕ್ತತಿಥಿಗಳನ್ನೂ, ಶ್ರಾದ್ಧ ದಿನಗಳನ್ನೂ, ಶನಿ, ಅಂಗಾರಕ, ಸೂರ್ಯ, ಇವರ ರಾಶಿಗಳನ್ನೂ ಬಿಟ್ಟು, ವೃಷಭ, ಮೇಷ, ಕುಂಭ, ಕನ್ಯಾ, ಕಟಕ, ತುಲಾ, ಮಿಥುನ ರಾಶಿ ಗಳಲ್ಲಿಯೂ, ಲಗ್ನಕ್ಕೆ ಅಷ್ಟಮಶುದ್ಧಿ ಇರುವಾಗಲೂ ಉಪನಯನವನ್ನು ಮಾಡಿಸತಕ್ಕದ್ದು.

**ಮೈತ್ರಹಸ್ತತ್ರಯೇವಿಷ್ಣುತ್ರಯೇಪೌಷ್ಣೋತ್ತರಾತ್ರಯೇ।**
**ಧಾತೃದ್ವಯೇದಿತಿದ್ವೇಚದಸ್ರಭೇಹ್ಯುತ್ತಮಂವ್ರತಂ॥**

ಅನೂರಾಧಾ, ಜ್ಯೇಷ್ಠಾ, ಮೂಲ, ಹಸ್ತ, ಚಿತ್ರಾ, ಸ್ವಾತೀ, ಶ್ರವಣ, ಧನಿಷ್ಠಾ, ಶತಭಿಷಕ್, ರೇವತಿ, ಉತ್ತ, ಉಷಾ, ಉಭಾ, ರೋಹಿಣೀ, ಮೃಗಶೀರ್ಷ, ಪುನ, ಪುಷ್ಯ, ಅಶ್ವಿನಿ ಈ ನಕ್ಷತ್ರಗಳಲ್ಲಿ ಉಪನಯನವನ್ನು ಮಾಡುವದುತ್ತಮ.

**ಚಂದ್ರೋಮಾತಾಪಿತಾಸೂರ್ಯಃ ಪ್ರಾಣಾಶ್ಚೈವಬೃಹಸ್ಪತಿಃ।**
**ತಸ್ಮಾದ್ಬಲತ್ರಯಮ್ಬಾವ್ಯಂಲಗ್ನೇವಾಗೋಚರೇಪಿವಾ॥**

ಚಂದ್ರನು ತಾಯಿ, ಸೂರ್ಯನು ತಂದೆಯು, ಬೃಹಸ್ಪತಿಯು ಪ್ರಾಣವು, ಆದ್ದರಿಂದ ಈ ಮೂರು ಗ್ರಹಗಳು ಜಾತಕದಲ್ಲಿಯಾದರೂ ಗೋಚಾರದಲ್ಲಿ ಯಾದರೂ ಬಲಿಷ್ಠರಾಗಿರತಕ್ಕದ್ದು.

**ಶಾಖೇಶರವಿವರ್ಣೇಶ ಗುರೂಣಾಮ್ಬಲಪೂರ್ವಕಂ।**
**ತಥಾಪ್ಯೇಶಾಂಗುರುಬಲಂ ಮುಖ್ಯಮಾಚಾರ್ಯಶಿಷ್ಯಯೋಃ॥**

ಶಾಖಾಧಿಪತಿಯು ಸೂರ್ಯನು, ವರ್ಣಾಧಿಪತಿಯು ಗುರುವು, ಇವರು ಗಳು ಬಲಿಷ್ಠರಾಗಿರಬೇಕು, ಆದರೂ ಆಚಾರ್ಯ ಶಿಷ್ಯರಿಬ್ಬರಿಗೂ ಮುಖ್ಯವಾಗಿ ಗುರುಬಲವಿರತಕ್ಕದ್ದು.

**ಉಕ್ತೇಪಿವರ್ಷೇ ನಬಲೀಗುರುಶ್ಚೇಚ್ಛಾಂತ್ಯಾಪ್ರಶಸ್ಯಂವ್ರತ**

**ಬಂಧಕರ್ಮ। ಅನುಕ್ತವರ್ಷೇಽಸಬಲಪ್ರದೋಽಪಿನೈವೈತಯೋರಬ್ದ ಬಲಂಬಲೀಯಃ॥**

ಬ್ರಾಹ್ಮಣಾದಿ ಮೂರು ವರ್ಣಗಳಿಗೆ ಹೇಳಲ್ಪಟ್ಟ ವರ್ಷಗಳಲ್ಲಿ ಒಂದು ವೇಳೆ ಗುರುಬಲವಿಲ್ಲದಿದ್ದರು, ಶಾಂತಿ ಮೊದಲಾದ ಕರ್ಮಗಳಿಂದ ಉಪನಯನವನ್ನು ಮಾಡಬಹುದು. ಹೇಳಲ್ಪಡದ ವರ್ಷಗಳಲ್ಲಿ ಬಲಿಷ್ಠನಾಗಿದ್ದರೂ ಉಪನಯನವನ್ನು ಮಾಡಕೂಡದು. ಯಾತಕ್ಕೆಂದರೆ, ಗುರುಬಲ, ವರ್ಷಬಲ ಇವುಗಳೊಳಗೆ ವರ್ಷಬಲವೇ ಶ್ರೇಷ್ಠವು.

**ಜನ್ಮಾಂತ್ಯನಿಧನಸ್ಥೋಽಪಿಪೂಜಯಾಶುಭದೋಗುರುಃ।**
**ಉಕ್ತಾಬ್ದೇಚೇತನುಕ್ತೇತು ನಶುಭೋಬಲವಾನಪಿ॥**

ಗುರುವು ಹೇಳಲ್ಪಟ್ಟ ವರ್ಷಗಳಲ್ಲಿ ಜನ್ಮ, ದ್ವಾದಶ, ಅಷ್ಟಮಸ್ಥಾನಗಳಲ್ಲಿದ್ದರೂ, ಗುರುಪ್ರೀತಿಕರವಾದ ಪೂಜಾದಿ ಶಾಂತಿಗಳಿಂದ ಶುಭಪ್ರದನಾಗುತ್ತಾನೆ. ಹೇಳಲ್ಪಡದ ವರ್ಷಗಳಲ್ಲಾದರೂ ಬಲಿಷ್ಠನಾಗಿ ಇದ್ದರೂ ಶುಭಪ್ರದನಲ್ಲ.

**ಕೋದಂಡಕರ್ಕಿಮೀನೇಷು ಸ್ಥಿತೋಽಪಿಶುಭದೋಗುರುಃ॥**
**ತದ್ರಾಶಿಭಾಗಸಂಸ್ಥೋಽಪಿ ಶುಭದಃಪ್ರೋಚ್ಚತೇಸ್ವಯಂ॥**

ಗುರುವು ಕಟಕ, ಧನುಸ್ಸು, ಮೀನ ರಾಶಿಗಳಲ್ಲಿಯೂ, ಅವುಗಳ ಅಂಶಗಳಲ್ಲಿಯೂ ಇದ್ದರೆ ಆ ರಾಶಿಗಳು ಹೇಳಲ್ಪಟ್ಟ ಜನ್ಮ, ಅಷ್ಟಮ, ದ್ವಾದಶ ರಾಶಿಗಳಾಗಿದ್ದರೂ ಶುಭಪ್ರದನಾಗುವನು.

**ಸ್ವೋಚ್ಚೇಸ್ವಮಿತ್ರೇಸ್ವಗೃಹೇತ್ರಿಕೋಣೇಜೀವೋಗತೋಯದ್ಯುಪನೀತಕಾಲೇ।ಶಿಶೋಶ್ಚತುರ್ಥೇನಿಧನೇತೃತೀಯೇ ಕರ್ಮಾಂತ್ಯಸಂಸ್ಥೋಽಪಿ ಶುಭಪ್ರದಸ್ಸ್ಯಾತ್॥**

ಉಪನಯನ ಕಾಲದಲ್ಲಿ ಗುರುವು ಉಚ್ಚ, ಸ್ವಕ್ಷೇತ್ರ, ಮೂಲತ್ರಿಕೋಣ ಮಿತ್ರಕ್ಷೇತ್ರಗಳಲ್ಲಿದ್ದರೆ ಆ ರಾಶಿಗಳು ಜನ್ಮ, ಅಷ್ಟಮ, ದ್ವಾದಶ, ತೃತೀಯ, ಚತುರ್ಥ, ದಶಮ, ಈ ಸ್ಥಾನಗಳಾಗಿದ್ದರೂ ಶುಭಪ್ರದನಾಗುತ್ತಾನೆ.

**ದ್ವಿತೀಯಾಚ ತೃತೀಯಾಚ ಪಂಚಮೀಸಪ್ತಮೀತಥಾ।**
**ತ್ರಯೋದಶೀಚದಶಮೀ ಪ್ರಶಸ್ತಾಸ್ತಿಥಯೋವ್ರತೇ॥**

ಉಪನಯನದಲ್ಲಿ ದ್ವಿತೀಯಾ, ತೃತೀಯಾ, ಪಂಚಮಿ, ಸಪ್ತಮಿ, ತ್ರಯೋದಶೀ, ದಶಮಿ, ಈ ತಿಥಿಗಳು ಶ್ರೇಷ್ಠಗಳು.

**ಪೂರ್ವಪಕ್ಷಶುಭಃಪ್ರೋಕ್ತಃ ಕೃಷ್ಣಶ್ಚಾಂತ್ಯತ್ರಿಕಂವಿನಾ।**
**ಕೃಷ್ಣಪಕ್ಷೇಪಿತತ್ರ್ಯಂಶೆ ತ್ರಯೋದಶ್ಯಪಿಕೇಚನ॥**

ಉಪನಯನದಲ್ಲಿ ಶುಕ್ಲಪಕ್ಷವು ಶುಭಕರವು, ಏಕಾದಶೀ, ದ್ವಾದಶೀ, ತ್ರಯೋದಶೀ, ಚತುರ್ದಶಿ, ಅಮಾವಾಸ್ಯೆ ಈ ೫ ತಿಥಿಗಳನ್ನು ಬಿಟ್ಟು ಕಡಮೆ ಕೃಷ್ಣಪಕ್ಷದ ತಿಥಿಗಳು ಶುಭಕರಗಳು. ಇಲ್ಲಿ ಕೆಲವರು ತ್ರಯೋದಶಿಯಲ್ಲಿಯೂ ಮಾಡಬಹುದೆಂದು ಹೇಳುವರು.

**ಆಪಂಚಮ್ಯಾಸ್ತುತಿಥಯಃ ಪರಾಸ್ಯುರತಿನಿಂದಿತಾಃ।**
**ನಿತ್ಯಾನಧ್ಯಾಯದಿವಸಾನ್ವರ್ಜಯೇದೌಪನಾಯನೇ॥**

ಕೃಷ್ಣಪಕ್ಷ ಪಂಚಮಿಯ ತರುವಾಯ ೧೦ ತಿಥಿಗಳು ತ್ಯಾಜ್ಯಗಳು. ಆದ್ದರಿಂದ ಆ ತಿಥಿಗಳನ್ನೂ, ಅನಧ್ಯಾಯಗಳನ್ನೂ ಬಿಟ್ಟು ಇತರ ತಿಥಿಗಳಲ್ಲಿ ಉಪನಯನ ಕ್ರಮವನ್ನು ಮಾಡತಕ್ಕದ್ದೆಂದು ಭಾವವು.

## ಅನಧ್ಯಾಯ ದಿನಗಳು

**ನೈಮಿತ್ತಿಕಾಸ್ತ್ವನಧಾಯಾದ್ವ್ಯತೀಪಾತಾರ್ಧಮಾರಿತಾಃ।**
**ಅಷ್ಟಮ್ಯಾಂಚತುರ್ದಶ್ಯಾಂಪೂರ್ಣಿಮಾಯಾಂಕುಹೂತಿಥೌ**
**ಸಂಧ್ಯಯೋರ್ಗರ್ಜಿತೆನೈವಸ್ವಾಧ್ಯಾಯಃಪ್ರತಿಪತ್ಸ್ವಪಿ।**
**ಪೂರ್ವರಾತ್ರೇಯಥಾಮೇಘೋ ಯತ್ರಗರ್ಜತಿವಾಸರೇ।**
**ನವೇದಾಧ್ಯಯನಂಕಾರ್ಯಂ ಸರ್ವದೈವಮಹಾನಿಶಿ॥**

ವೈಧೃತಿ, ವ್ಯತೀಪಾತ, ಮಹಾಪಾತ, ಈ ದಿವಸಗಳ ಅರ್ಧ ದಿನಗಳು ಬಂದರೂ; ಅಷ್ಟಮಿ, ಚತುರ್ದಶೀ, ಪೂರ್ಣಿಮಾ ಅಮಾವಾಸ್ಯೆ, ಪ್ರಾತಃ ಕಾಲ, ಸಾಯಂಕಾಲಗಳಲ್ಲಿ ಮೇಘಗರ್ಜನೆ ಉಂಟಾದ ದಿನಗಳೂ, ಪ್ರತಿಪತ್ತುಗಳು, ಪೂರ್ವರಾತ್ರಿಯಲ್ಲಿ ಯಾವ ದಿವಸ ಮೇಘಗರ್ಜನೆಯಾಗುತ್ತದೋ ಆ ದಿನವೂ, ಅರ್ಧರಾತ್ರಿಯೂ ಇವುಗಳಲ್ಲಿ ವೇದಾಧ್ಯಯನ ಮಾಡಕೂಡದು.

**ತ್ರಯೋದಶೀಸಪ್ತಮೀಚ ಚತುರ್ಥೀಕಲಯಾಯದಿ।**
**ರಾತ್ರೌಸ್ಪೃಶತಿಮೌನೀಸ್ಯಾತ್ಪ್ರದೋಷೆತತ್ರಮಾನವಃ॥**

ತ್ರಯೋದಶಿ, ಸಪ್ತಮಿ, ಚತುರ್ಥೀ, ಈ ಮೂರು ತಿಥಿಗಳೂ ರಾತ್ರಿ

ಯಲ್ಲಿ ೧ ಘಳಿಗೆ ಮಾತ್ರ ಸಂಬಂಧಿಸಿದ್ದರೆ ಆ ದಿನ ಸಾಯಂಕಾಲ ಪ್ರದೋಷವು, ಆ ಕಾಲದಲ್ಲಿ ವೇದಾಧ್ಯಯನ ಮಾಡಕೂಡದು.

**ವಿನರ್ತುನಾವಸಂತೇನ ಕೃಷ್ಣಪಕ್ಷೆಗಳಗ್ರಹೇ|**
**ಉಪನೀತ್ತಸ್ಸನಧ್ಯಾಯೇ ಪುನಸಂಸ್ಕಾರಮರ್ಹತಿ ||**

ವಸಂತಋತುವನ್ನು ಬಿಟ್ಟು ಇತರ ಋತುಗಳಲ್ಲಿಯೂ, ಕೃಷ್ಣಪಕ್ಷದಲ್ಲಿಯೂ, ಗಳಗ್ರಹ ತಿಥಿಗಳಲ್ಲಿಯೂ, ಅನಧ್ಯಾಯ ತಿಥಿಗಳಲ್ಲಿಯೂ, ಉಪನಯನ ಮಾಡಲ್ಪಟ್ಟವನಿಗೆ ಪುನರುಪನಯನ ಮಾಡತಕ್ಕದ್ದು.

**ಯೇಚೈತ್ರವೈಶಾಖಸಿತೇ ತೃತೀಯೇಮಾಘೇಚಸಪ್ತಮ್ಯಥಫಾಲ್ಗುಣೇಚ | ಮೌಂಜೀವ್ರತಂತಾಸುಶುಭಂವದಂತಿ ವಸಿಷ್ಠಗಾರ್ಗ್ಯಾದಿ ಮುನೀಂದ್ರವರ್ಯಾಃ||**

ಚೈತ್ರ, ವೈಶಾಖ ಮಾಸಗಳಲ್ಲಿ ಶುಕ್ಲಪಕ್ಷದ ತೃತೀಯೆಗಳೂ, ಮಾಘ, ಫಾಲ್ಗುಣಮಾಸದಲ್ಲಿ ಶುಕ್ಲಪಕ್ಷದ ಸಪ್ತಮಿ, ಈ ತಿಥಿಗಳಲ್ಲಿ ಉಪನಯನವಂ ಮಾಡುವುದು ಶುಭಕರವೆಂದು ವಶಿಷ್ಠ ಗಾರ್ಗ್ಯಾದಿಮುನಿಗಳಿಂದ ಹೇಳಲ್ಪಟ್ಟಿದೆ.

**ಆಚಾರ್ಯಕಾವ್ಯಸೌಮ್ಯಾನಾಂ ವಾರಾಶ್ಯಸ್ತಾಶುಭೋದಯೇ |**
**ವಾರೌತುಮಧ್ಯಫಲದಾವಿತರೌನಿಂದಿತೌವ್ರತೆ||**

ಶುಭಕಾರ್ಯದಲ್ಲಿ ಬೃಹಸ್ಪತಿ, ಶುಕ್ರ, ಬುಧವಾರಗಳು, ಪ್ರಶಸ್ತಗಳು, ಆದಿತ್ಯ, ಸೋಮವಾರಗಳು, ಮಧ್ಯಮಗಳು; ಅಂಗಾರಕ ಶನಿವಾರಗಳು ಅಧಮಗಳು.

**ಮಂದವಾರೇಮೌಂಜಿಬಂಧಂ ಯಃಕುರ್ಯಾಡ್ವಟುನಾಶನಂ|**
**ಅಂಗಾರಕೇಮೌಂಜಿಬಂಧಂ ಯಜಮಾನೋಮೃತೋಭವೇತ್**

ಶನಿವಾರದಲ್ಲಿ ಉಪನಯನ ಮಾಡಿದರೆ ವಟು ನಾಶವಾಗುತ್ತಾನೆ. ಮಂಗಳವಾರದಲ್ಲಿ ಮಾಡಿದರೆ ಯಜಮಾನನೇ ಸಾಯುತ್ತಾನೆ.

**ಸಹಸ್ರಗುಣಯುಕ್ತೇಪಿಮಂದವಾರೇಕುಜೇತಥಾ|**
**ಶುಭಕರ್ಮನಕುರ್ವೀತಕುರ್ಯಾಚ್ಚೇನ್ಮರಣಂಧ್ರುವಂ ||**

ಸಾವಿರ ಗುಣಗಳಿದ್ದರೂ ಶನ್ಯಂಗಾರಕವಾರಗಳಲ್ಲಿ ಶುಭಕರ್ಮಗಳನ್ನು ಮಾಡಕೂಡದು, ಹಾಗೆ ಮಾಡಿದರೆ ಮರಣ ಸಂಭವಿಸುತ್ತದೆ.

**ವಿಭಜ್ಯಾಹ್ನಃಪ್ರಮಾಣಸ್ತುತತ್ರಾದ್ಯಂಶೇಪಿದೈವಿಕಂ।**
**ದ್ವಿತೀಯೇಮಾನುಷಂಕಾರ್ಯಂ ತೃತೀಯಾಂಶೇಪಿಪೈತೃಕಂ॥**

ಹಗಲನ್ನು ಮೂರುಭಾಗಮಾಡಿ ೧ನೇ ಭಾಗದಲ್ಲಿ ದೈವಕಾರ್ಯವನ್ನೂ, ೨ನೇ ಭಾಗದಲ್ಲಿ ಮನುಷ್ಯನ ಕಾರ್ಯವನ್ನೂ, ೩ನೇ ಭಾಗದಲ್ಲಿ ಪಿತೃಕಾರ್ಯ ಗಳನ್ನೂ ಮಾಡತಕ್ಕದ್ದು.

**ಏಕಸ್ಮಿನ್ಕೇಂದ್ರಗೇಜೀವೇಶುಕ್ರೇವಾಪಾಪಕೇಂದ್ರಜಾಃ।**
**ದೋಷಾವಿನಾಶಮಾಯಾನ್ತಿಪಾಪಂಭಾಗೀರಥೀಜಲಾತ್॥**

ಒಬ್ಬ ಬೃಹಸ್ಪತಿಯಾದಗೂ, ಒಬ್ಬ ಶುಕ್ರನಾದರೂ, ಕೇಂದ್ರಸ್ಥಾನ ಗಳಲ್ಲಿದ್ದರೆ ಗಂಗಾನದಿಯು ಪಾಪಗಳನ್ನು ಪರಿಹರಿಸುವಂತೆ ಪಾಪಗ್ರಹಗಳು ಕೇಂದ್ರಸ್ಥಾನಗಳಲ್ಲಿ ನೇರುವುದರಿಂದುಂಟಾಗುವ ದೋಷಗಳನ್ನು ಹೋಗ ಲಾಡಿಸುವನು.

**ಮಿತ್ರರಾಶಿಗತೇಜೀವೇ ಶುಕ್ರೇವಾ ಪಾಪಕೇಂದ್ರಜಾಃ।**
**ಹರೇರ್ನಶ್ಯಂತಿ ದೋಷಾಗ್ಜ ಸ್ಮರಣಾದಘರಾಶಯಃ॥**

ಗುರುವಾದರೂ, ಶುಕ್ರನಾದರೂ, ಮಿತ್ರಕ್ಷೇತ್ರದಲ್ಲಿದ್ದರೆ ಪಾಪಗ್ರಹಗಳು ಕೇಂದ್ರಗಳಲ್ಲಿ ಇರುವ ದೋಷಗಳನ್ನು ಹರಿಸ್ಮರಣೆಯು ಪಾಪಗಳನ್ನು ಹರಿಸು ವಂದದಿ ಹೋಗಲಾಡಿಸುತ್ತಾರೆ.

**ಅತಿಮಿತ್ರನವಾಂಶಸ್ಥೇ ಶಾಖೇಸೇಚತ್ರಿಕೋಣಗೇ।**
**ದೋಷೋವಿನಾಶಮಾಯಾಂತಿ ಗ್ರೀಷ್ಮೇಷು ಸಲಿಲಂಯಥಾ॥**

ಶಾಖಾಧಿಪತಿಯು ಅತಿಮಿತ್ರನವಾಂಶದಲ್ಲಿದ್ದರೂ, ಪಂಚಮತ್ರಿಕೋಣ ಗಳಲ್ಲಿದ್ದರೂ, ಗ್ರೀಷ್ಮಕಾಲದಲ್ಲಿ ನೀರುಗಳೊಣಗಿ ಹೋಗುವಂತೆ ಸಮಸ್ತ ದೋಷಗಳು ನಾಶವನ್ನು ಹೊಂದುತ್ತವೆ.

**ಯತ್ರೈಕಾದಶಗಸ್ಸೂರ್ಯಶ್ಚಂದ್ರೋವಾಮಿತ್ರರಾಶಿಗಃ।**
**ಹಂತಿಲಗ್ನೋದ್ಭವಂದೋಷಂ ಪೂತನಾಮಿವಕೇಶವಃ॥**

ಲಗ್ನಕ್ಕೆ ೧೧ ರಲ್ಲಿ ಸೂರ್ಯನಿದ್ದರೂ, ಚಂದ್ರನು ಅತಿಮಿತ್ರ ನವಾಂಶದಲ್ಲಿ ಇದ್ದರೂ, ಈ ಯೋಗವು ಬಾಲಕೃಷ್ಣನು ಪೂತನಿಯನ್ನು ಕೊಂದಂತೆ ಲಗ್ನ ದಿಂದ ಹುಟ್ಟಿದ ಸಮಸ್ತ ದೋಷಗಳನ್ನೂ ಹರಿಸುತ್ತದೆ

**ಅತಿಮಿತ್ರಗತಸ್ಸೂರ್ಯಶ್ಚಂದ್ರೋವಾಯದಿಲಾಭಗಃ।**
**ಹಂತಿದೋಷಚಯಸ್ತದ್ವತ್ಪಾಪಸಂಘಂಹರೇಸ್ಮೃತಃ॥**

ಅತಿಮಿತ್ರಕ್ಷೇತ್ರದಲ್ಲಿರುವ ರವಿಯು, ೧೧ರಲ್ಲಿರುವ ಚಂದ್ರನು ಸಹ ಹರಿಸ್ಮರಣವು ಪಾಪವನ್ನು ಹೋಗಲಾಡಿಸಿದಂತೆ ದೋಷಸಮೂಹವನ್ನು ಹರಿಸುತ್ತಾರೆ.

**ತ್ರಿಷಷ್ಠಲಾಭಗೋಭೌಮಃ ಶಶಿವಾಯದಿತುಂಗಗಃ ।**
**ಸರ್ವದೋಷಚಯಂಹಂತಿ ಪಾಪಂಪಂಚಾಕ್ಷರೀಯಥಾ ॥**

೩-೬-೧೧ ಈ ಸ್ಥಾನಗಳಲ್ಲಿರುವ ಕುಜನು, ಉಚ್ಚಕ್ಷೇತ್ರದಲ್ಲಿರುವ ಚಂದ್ರನು ಸಹ ಪಂಚಾಕ್ಷರೀ ಮಂತ್ರವು ಪಾಪಗಳನ್ನು ಹರಿಸುವಂತೆ ಸರ್ವ ದೋಷಗಳನ್ನು ಹರಿಸುತ್ತಾರೆ.

**ಸ್ವಕಮಿತ್ರಗತೋಭೌಮಶ್ಶಶೀವಾಯದಿಲಾಭಗಃ ।**
**ಹಂತಿದೋಷಚಯಂ ಸರ್ವಂ ಪಿನಾಕೀ ತ್ರಿಪುರಂಯಥಾ ॥**

ಮಿತ್ರಕ್ಷೇತ್ರದಲ್ಲಿರುವ ಕುಜನು, ಲಾಭದಲ್ಲಿರುವ ಚಂದ್ರನು ಸಹ ತ್ರಿಪುರವನ್ನು ಈಶ್ವರನು ಹೊಡೆದಂತೆ ಸರ್ವದೋಷಗಳನ್ನು ಪರಿಹರಿಸುತ್ತಾರೆ.

**ಲಗ್ನಾತ್ತ್ರಿಷಷ್ಠಗಸ್ಸೂರ್ಯಸ್ಸ್ವತುಂಗಸ್ಥೋಭವೇದ್ಯದಿ ।**
**ನಾಶಯತ್ಯಖಿಲಾನ್ದೋಷಾನ್ ಸೂರ್ಯೋದಯಾತ್ತಿಮಿರಂಯಥಾ ॥**

ಉಪನಯನ ಲಗ್ನಕ್ಕೆ ೩-೬ ಈ ಸ್ಥಾನಗಳಲ್ಲಿ ಸೂರ್ಯನು ಉಚ್ಚಗತನಾಗಿದ್ದರೆ ಸೂರ್ಯೋದಯದಲ್ಲಿ ಅಂಧಕಾರದಂತೆ ಸರ್ವದೋಷಗಳೂ ನಾಶವನ್ನು ಹೊಂದುತ್ತವೆ.

**ಕೇಂದ್ರತ್ರಿಕೋಣಗಃಸೌಮ್ಯೋ ಮಿತ್ರರಾಶ್ಯಂಶಗೋಯದಿ ।**
**ಪಾಪಕೇಂದ್ರಕೃತಾನ್ದೋಷಾನ್ ಹಂತೀಭಂ ಕೇಸರೀಯಥಾ ॥**

ಬುಧನು ಲಗ್ನದ ಕೇಂದ್ರತ್ರಿಕೋಣಗಳಲ್ಲಾದರೂ ಮಿತ್ರರಾಶ್ಯಂಶಗಳಲ್ಲಿಯಾದರೂ ಇದ್ದರೆ ಈ ಯೋಗವು ಕೇಂದ್ರದಲ್ಲಿ ಪಾಪಗ್ರಹಗಳಿರುವ ದೋಷಗಳನ್ನು ಸಿಂಹವು ಆನೆಗಳನ್ನು ಹೊಡೆಯುವಂತೆ ನಾಶಮಾಡುವುದು.

**ಲಗ್ನಾಧಿಪೋವಾಂಶಪತಿಬಲಿಷ್ಠಃ ಕೇಂದ್ರತ್ರಿಕೋಣೇತ್ರಿಭವೇ**
**ಸ್ಥಿತೋಪಿಲಗ್ನಸ್ಯಕೇಂದ್ರೇಷ್ವಶುಭಸ್ಥದೋಷಾನ್ನಿಹಂತಿಸೌಮ್ಯೈ**
**ರ್ಯುತವೀಕ್ಷಿತೋವಾ ॥**

ಲಗ್ನಾಧಿಪತಿಯಾದರೂ ನವಾಂಶಾಧಿಪತಿಯಾದರೂ ಬಲಿಷ್ಠನಾಗಿ ೧-೩-೫-೯-೧೧ ಈ ಸ್ಥಾನಗಳಲ್ಲಿ ಶುಭಗ್ರಹಗಳಿಂದ ನೋಡಲ್ಪಟ್ಟವನಾಗಿಯೂ

ಕೂಡಿದವನಾಗಿಯೂ ಇದ್ದರೆ ಲಗ್ನಕ್ಕಿಂತ ಅನ್ಯಕೇಂದ್ರಗಳಲ್ಲಿ ಪಾಪಗ್ರಹ ಗಳಿರುವ ದೋಷಗಳನ್ನು ಹರಿಸುತ್ತಾರೆ.

**ವಿದ್ಯಾಂವಟೋರ್ಶ್ನಿನಶ್ಯೇತಾಂ ಮುಂದಭೌಮೌದ್ವಿತೀಯಗೌ।**
**ಅನ್ಯೋನ್ಯಮಥವಾಷ್ಟಸ್ಥೌ ದ್ವಾದಶಸ್ಥೌತುಬಂಧನಂ ॥**

ಉಪನಯನಕ್ಕೆ ಅಂಗಾರಕ ಶನಿಗಳೂ ದ್ವಿತೀಯಸ್ಥಾನದಲ್ಲಿದ್ದರೆ ವಟು ವಿಗೆ ವಿದ್ಯಾನಾಶವನ್ನು ಮಾಡುತ್ತಾರೆ, ಅವರುಗಳೊಬ್ಬರಿಗೊಬ್ಬರು ಅಷ್ಟಮ ದಲ್ಲಾದರೂ ದ್ವಾದಶದಲ್ಲಾದರೂ ಇದ್ದರೆ ಆ ವಟುವಿಗೆ ಬಂಧನವನ್ನುಂಟು ಮಾಡುತ್ತಾರೆ.

**ಕುಜಾರ್ಕಜೌ ಬಂಧನದೌ ವ್ಯಯಸ್ಥೌ ವಿದ್ಯಾಪ್ರದೌವಾ ಧನ ಬಂಧ ಸಂಸ್ಥೌ । ವ್ಯಯಸ್ಥಮರ್ಕಂ ಕ್ಷಿತಿಜೇವಿಶ್ಯನ್ನಾಚಾರ್ಯ ಮಂಥಂ ಕುರುತೇಬಲಾಢ್ಯಃ॥**

ಕುಜ ಶನಿಗಳು ೧೨ನೇ ಸ್ಥಾನದಲ್ಲಿದ್ದರೆ ವಟುವಿಗೆ ಬಂಧನ ಉಂಟಾಗು ವದು, ಅವರುಗಳು ೨-೪ ಈ ಸ್ಥಾನಗಳಲ್ಲಿದ್ದರೆ ವಿದ್ಯೆಯನ್ನುಂಟುಮಾಡುತ್ತಾರೆ, ಅವರಲ್ಲಿ ಬಲಿಷ್ಟನಾದ ಅಂಗಾರಕನು ೧೨ನೇ ರಾಶಿಯಲ್ಲಿ ಇರುವ ಸೂರ್ಯನನ್ನು ನೋಡುವಂತಾವನಾಗಿ ಬ್ರಹ್ಮೋಪದೇಶ ಮಾಡುವ ಗುರುವನ್ನು ಕುರುಡ ನನ್ನಾಗಿ ಮಾಡುತ್ತಾನೆ.

**ವ್ಯಯಸ್ಥಂರವಿಮಾರ್ಕಿರ್ಶ್ವಾ ಸ್ವದೃಷ್ಟ್ಯಾಯದಿಪಶ್ಯತಿ ।**
**ಶಿಷ್ಯವಿದ್ಯಾಂ ಬಲೀಹನ್ಯಾದ್ವಿಬಲೀರೋಗದಃ ಶಿಶೋಃ॥**

ದ್ವಾದಶಸ್ಥಾನದಲ್ಲಿರುವ ಸೂರ್ಯನನ್ನು ಶನಿ ಬಲಿಷ್ಠನಾಗಿ ತನ್ನ ೩-೭-೧೦ ಈ ದೃಷ್ಟಿಗಳಿಂದ ನೋಡಿದರೆ ಶಿಷ್ಯನಿಗೆ ವಿದ್ಯಾನಾಶವನ್ನು ಮಾಡುತ್ತಾನೆ, ದುರ್ಬಲನಾಗಿ ನೋಡಿದರೆ ಶಿಶುವಿಗೆ ರೋಗವನ್ನುಂಟುಮಾಡುತ್ತಾನೆ.

## ಲಗ್ನಚಂದ್ರಫಲವು-ವಾಸಿಷ್ಠದಲ್ಲಿ

**ಪ್ರಾಲೇಯರಶ್ಮೌಯದಿ ಲಗ್ನಸಂಸ್ಥೇ ವಳಕ್ಷೆಪಕ್ಷೇಪಿಭವೇಸ್ಸ ರೋಗೀ । ವ್ರತೀಚಸೌಮ್ಯಗ್ರಹವರ್ಗಗೇಪಿಖಲೋಪಿನಿಸ್ವಶ್ರುತಿ ಕರ್ಮಹೀನಃ ॥**

ಶುಕ್ಲಪಕ್ಷದಲ್ಲಿದ್ದರೂ ಚಂದ್ರನು ಲಗ್ನದಲ್ಲಿದ್ದರೆ ಶುಭ, ಗ್ರಹಷಡ್ವರ್ಗದಲ್ಲಿ ದ್ದರೂ ಆ ಹುಡಗನನ್ನು ರೋಗಿಷ್ಟನನ್ನಾಗಿಯೂ ದುಷ್ಟನನ್ನಾಗಿಯೂ,

ದರಿದ್ರನನ್ನಾಗಿಯೂ, ಕರ್ಮಹೀನನನ್ನಾಗಿಯೂ ಮಾಡುತ್ತಾನೆ.

## ಕಾಶ್ಯಪದಲ್ಲಿ

**ಸ್ವೋಚ್ಚ ಸಂಸ್ಥೋಪಿಶೀತಾಂಶುರ್ವ್ರತಿನಂಯದಿಲಗ್ನಗಃ ।**
**ತಂಕರೋತಿಶಿಶುಂನಿಸ್ಸ್ವಂ ಸತತಂಕ್ಷಯರೋಗಿಣಂ ॥**

ಚಂದ್ರನು ಉಚ್ಚಸ್ಥಾನದಲ್ಲಿದ್ದರೂ ಲಗ್ನದಲ್ಲಿದ್ದರೆ ವಟುವನ್ನು ದರಿದ್ರನನ್ನಾಗಿಯೂ, ಕ್ಷಯರೋಗಿಯನ್ನಾಗಿಯೂ ಮಾಡುತ್ತಾನೆ

ಇಲ್ಲಿ ಗರ್ಗ ಮುನೀಶ್ವರನು ಮಾಡಿದ ವ್ಯವಸ್ಥೆ ಏನಂದರೆ:

**ಪ್ರಾಲೇಯರಶ್ಮಿರ್ಯದಿಲಗ್ನಸಂಸ್ಥೋ ವಲಕ್ಷಪಕ್ಷೇಶುಭಕೃನ್ನಿತಾಂತಂ । ಸೋಪೀಹಸೌಮ್ಯಗ್ರಹವರ್ಗಗಶ್ಚೇದ್ವಹ್ವಾಯುರಾರೋಗ್ಯ ಸುಖಾನಿದದ್ಯಾತ್ ॥**

ಶುಕ್ಲಪಕ್ಷದ ಚಂದ್ರನು ಉಪನಯನ ಲಗ್ನದಲ್ಲಿದ್ದರೆ ಶುಭವನ್ನುಂಟು ಮಾಡುವನು, ಮತ್ತು ಶುಭಗ್ರಹ ಷಡ್ವರ್ಗದಲ್ಲಿದ್ದರೆ ವಟುವಿಗೆ ವಿಶೇಷವಾಗಿ ಆಯುಸ್ಸು, ಆರೋಗ್ಯ, ಐಶ್ವರ್ಯ, ಸೌಖ್ಯ, ಇವುಗಳನ್ನು ಕೊಡುವನು.

## ಲಗ್ನದೋಷಕ್ಕೆ ಭಂಗವು-ಗಾರ್ಗ್ಯದಲ್ಲಿ

**ಲಗ್ನೇಕುಳೀರೇಗುರುಚಂದ್ರಸಂಸ್ಥೇ ಮೇಷೇಸಿತಜ್ಞೌ ವೃಷಭೇಪತಂಗೇ । ಶೇಷೈಸ್ತ್ರಿಷಷ್ಠಾಯಗತೈರ್ಗ್ರಹೈಸ್ಯಾದ್ಯಶ್ಚೋಪನೀತಸ್ಸಮುಪೈತಿಲಕ್ಷ್ಮೀಂ ॥**

ಕಟಕವು ಲಗ್ನವಾಗಿದ್ದು ಅಲ್ಲಿ ಗುರುಚಂದ್ರರು ಕಲತಿರುವಾಗಲೂ, ಶುಕ್ರಬುಧರು ಮೇಷಲಗ್ನದಲ್ಲಿ ಇರುವಾಗಲೂ, ವೃಷಭಲಗ್ನದಲ್ಲಿ ಸೂರ್ಯನಿರುವಾಗಲೂ, ಮಿಕ್ಕ ಶನಿ ಅಂಗಾರಕ ಮೊದಲಾದವರು ೩--೬--೧೧ ಈ ಸ್ಥಾನದಲ್ಲಿರುವಾಗಲೂ, ಉಪನಯನ ಮಾಡಲ್ಪಟ್ಟ ಹುಡುಗನು ಐಶ್ವರ್ಯವನ್ನು ಹೊಂದುವನು.

**ಕೇಂದ್ರೇಮರೆಜ್ಯೇ ಭವನೇಪತಂಗೇ ಚಂದ್ರೇಶುಭಾಂಶೇ ಭವತಿತೃತೀಯೇ । ವಾಗೀಶ್ವರೀತಸ್ಯಮುಖೇವಸಂತೀ ಪದ್ಮಾಯಥಾಪದ್ಮವನೇಸದಾಚ ॥**

ಗುರುವು ಉಪನಯನ ಲಗ್ನಕ್ಕೆ ೧-೪-೭-೧೦ ನೇ ಸ್ಥಾನಗಳಲ್ಲಿದ್ದರೂ ಸೂರ್ಯನು ಉಪನಯನ ಲಗ್ನದಲ್ಲಿದ್ದರೂ ಚಂದ್ರನು ಶುಭನವಾಂಶವನ್ನು

ಪಡದು ೩ನೇ ಸ್ಥಾನದಲ್ಲಿದ್ದರೂ ಆ ವಟುವಿನ ಮುಖದಲ್ಲಿ ಸರಸ್ವತಿಯು ಯಾವಾಗ್ಯೂ ಕಮಲವನದಲ್ಲಿ ಲಕ್ಷ್ಮಿಯಂತೆ ವಾಸಮಾಡುವಳು.

**ಲಗ್ನೇಸಿತಃ ಕರ್ಮಣಿ ದೇವಪೂಜ್ಯೋ ಭವೇದ್ರವಿಶ್ಶೀತಕರಶ್ಶು ಭಾಂಶೇ । ಹೃದಿಸ್ಥಶಾಸ್ತ್ರಾಣ್ಯಪಿವರ್ಧಯಂತಿ ಪ್ರಿಯಕ್ಷಣೇನೈವ ಯಥೇಂದ್ರಿಯಾಣಿ ॥**

ಉಪನಯನ ಲಗ್ನದಲ್ಲಿ ಶುಕ್ರನು, ಕರ್ಮಸ್ಥಾನದಲ್ಲಿ ಗುರುವು, ಶುಭ ನವಾಂಶದಲ್ಲಿ ಸೂರ್ಯನೂ ಚಂದ್ರನೂ ಇದ್ದರೆ ವಟುವಿನ ಹೃದಯದಲ್ಲಿ ಸರ್ವ ಶಾಸ್ತ್ರವೂ ವೃದ್ಧಿ ಹೊಂದುವುವು

**ಭೃಗೌಮೀನೇವೃಷೇವಾಪಿ ಜೀವೇಕೇಂದ್ರತ್ರಿಕೋಣಗೇ ।**
**ಕರ್ಕಿಚಾಪಝಷೆತಸ್ಮಿನ್ ಯೋಗಃ ಶುಭತರಾಹ್ವಯಃ ॥**

ಶುಕ್ರನು ಮೀನ, ವೃಷಭ ಈ ರಾಶಿಗಳಲ್ಲಿದ್ದರೂ, ಬೃಹಸ್ಪತಿಯು ಕೇಂದ್ರತ್ರಿಕೋಣದಲ್ಲಿದ್ದರೂ ಅಥವಾ ಕಟಕ, ಧನುಸ್ಸು, ಮೀನಗಳಲ್ಲಿದ್ದರೂ ವಟುವಿಗೆ ಅತ್ಯಂತ ಶುಭಯೋಗ ಉಂಟಾಗುವುದು.

**ಜೀವಃಕಾವ್ಯೋಪಿವಾಯಸ್ಯ ಮೌಂಜೀಬಂಧಲಗ್ನಗಃ ।**
**ತಸ್ಯವಿದ್ಯಾಪ್ರಭೂತಾಸ್ಯಾದ್ವಿವಾಹಶ್ಚಾ ಚಿರಾದ್ಭವೇತ್ ॥**

ಗುರುವಾದರೂ ಶುಕ್ರನಾದರೂ ಉಪನಯನ ಲಗ್ನದಲ್ಲಿದ್ದರೆ ವಟುವಿಗೆ ಸಕಲ ವಿದ್ಯೆಗಳೂ ಬರುವುವು, ಶೀಘ್ರವಾಗಿ ಅವನಿಗೆ ಮದುವೆಯೂ ಆಗುವುದು.

**ದೋಷೇಬಲವಿಹೀನೇಚ ಗುಣೇಬಹುಬಲೈರ್ಯುತೇ ।**
**ಅಪವಾದಬಲೈರ್ದೋಷಪ್ರಧ್ವಂಸಾಭಾವಕಶ್ಶುಭಃ ॥**

ದೋಷಗಳು ಬಲಹೀನವಾಗಿಯೂ, ಗುಣಗಳು ಬಲಿಷ್ಠವಾಗಿಯೂ ಇದ್ದರೆ ವಿಶೇಷ ಶಾಸ್ತ್ರದಿಂದ ಉಪನಯನ ಮುಹೂರ್ತಕ್ಕೆ ವಿಶೇಷ ಶುಭ ವುಂಟಾಗುವದು.

**ಕರ್ತುರ್ಭಾರ್ಯಾಗರ್ಭಿಣೀಚೇದ್ವಾಸ್ತುಕರ್ಮೋಪನಾಯನಂ।**
**ಷಣ್ಮಾಸಾತ್ಪರತಸ್ಯೋಪಿ ನಕುರ್ಯಾದಿತಿಶೌನಕಃ ॥**

ಪುರುಷನು ತನ್ನ ಹೆಂಡತಿಯು ಗರ್ಭವತಿಯಾದ ೬ ತಿಂಗಳಮೇಲೆ ಗೃಹನಿರ್ಮಾಣವನ್ನಾದರೂ, ಮಗನ ಉಪನಯನವನ್ನಾದರೂ ಮಾಡ ಕೂಡದು, ೫ ತಿಥಿಗಳವರಿಗೆ ಮಾಡಬಹುದೆಂದು ತಾತ್ಪರ್ಯವು.

**ರಜಸ್ವಲಾವಟೋರ್ಮಾತಾ ಇಡಾವಾಚನತಃಪುರಾ ।**
**ನೈವೋಪನಯನಂಕಾರ್ಯಂ ಪರತಶ್ಚೇಚ್ಛುಭಂಜಗುಃ ॥**

ನಾಂದಿ ಆವಾಹನಕ್ಕೆ ಮುಂದಾಗಿಯೇ ಹುಡುಗನ ತಾಯಿ ರಜಸ್ವಲಿಯಾದರೆ ಉಪನಯನ ಮಾಡಕೂಡದು ನಾಂದಿಯಾದ ತರುವಾಯವಾದರೆ ಉಪನಯನ ಮಾಡಬಹುದು.

## ರಜಸ್ವಲಾದೋಷ ಭಂಗವು

**ಅಲಬ್ಧೇಸುಮುಹೂರ್ತಸ್ಯ ರಜೋದೋಷೇಚಮಾತರಂ ।**
**ಸ್ತ್ರಿಯಂಸಂಪೂಜ್ಯತತ್ಕುರ್ಯಾನ್ಮೌಂಜೀಬಂಧನಮುತ್ತಮಂ ॥**

ಉಪನಯನ ಮುಹೂರ್ತಕ್ಕೆ ರಜಸ್ವಲಾದೋಷವು ಪ್ರಾಪ್ತವಾಗದೆ ಇರುವಾಗ ತಾಯನ್ನು ಪೂಜಿಸಿ ಶುಭಕರ್ಮವನ್ನು ಮಾಡತಕ್ಕದ್ದು.

**ಶಾಖಾಧಿಪತಿವಾರಶ್ಚ ಶಾಖಾಧಿಪಬಲಂಶಿಶೋಃ ।**
**ಶಾಖಾಧಿಪತಿಲಗ್ನಂಚ ದುರ್ಲಭಂತ್ರಿತಯಂವ್ರತೇ ॥**

ಉಪನಯನದಲ್ಲಿ ಮಗುವಿನ ಶಾಖಾಧಿಪನ ವಾರವೂ, ಅವನ ಬಲವೂ, ಅವನ ಲಗ್ನವೂ, ಈ ಮೂರು ದುರ್ಲಭವಾಗಿರುವುವು.

**ನನೈಧನಂನೈಧನಶುದ್ಧಿ ಲಗ್ನಂ ನನೈಧನರ್ಕ್ಷಂನಚತಂನವಾಂಶಂ ।**
**ನನೈಧನೈಶೋನಚವಾಂತ್ಯಜೇಶೋ ಲಗ್ನೇಪ್ರಶಸ್ತಂಖಲುರಾತ್ರಿನಾಥಃ ॥**

ಉಪನಯನ ಲಗ್ನವು ವಟುವಿನ ಜನ್ಮರಾಶಿಗೆ ಅಷ್ಟಮವಾಗಿರಕೂಡದು, ಅಷ್ಟಮಾಂಶವಾಗಿಯೂ ಇರಕೂಡದು, ನೈಧನ ತಾರೆಯಾಗದು, ಉಪನಯನ ಲಗ್ನಕ್ಕೆ ಅಷ್ಟಮದಲ್ಲಿಯೂ, ದ್ವಾದಶದಲ್ಲೂ ಚಂದ್ರನಿರಕೂಡದು. ಏವಂಚ ಲಗ್ನವು ಅಷ್ಟಮಶುದ್ಧಿಯುಳ್ಳದ್ದಾಗಿಯೂ ಶುಭಗ್ರಹಸಹಿತವಾಗಿಯೂ ಇರಬೇಕು.

## ಕೇಂದ್ರದಲ್ಲಿರುವ ಸೂರ್ಯಾದಿ ಪಾಪಗ್ರಹಗಳ ಫಲವು

**ಕುಜೇಚೇತ್ಕೂಜಿತೋದೋಷಶ್ಶಿಷ್ಯಾಚಾರ್ಯವಿನಾಶನಂ ।**
**ಮಂದೇತುರುದಿರೋದೋಷಃ ಕರೋತಿಮಹತೀಂಗದಾಂ ॥**
**ರಾಹೌರಂಧ್ರಾಹ್ವಯೋದೋಷಶ್ಶಿಶೋರ್ಮಾತೃವಿನಾಶನಂ ।**

**ಕೇತೌಕೇಂದ್ರೇತೂಗ್ರದೋಷೋ ವಿದ್ಯಾಯುರ್ಧನನಾಶನಂ॥**
**ಪಂಚದೋಷೇತರಂಲಗ್ನಂ ಶುಭದಂಚೋಪನಾಯನೇ ।**
**ದ್ವಾದಶಸ್ಥಂರವಿಂಭೌಮಃ ಪಶ್ಯನ್ನಾಚಾರ್ಯನೇತ್ರಹೃತ್ ॥**

ಉಪನಯನ ಲಗ್ನಕ್ಕೆ ಕೇಂದ್ರಗಳಲ್ಲಿ ಅಂಗಾರಕನಿದ್ದರೆ ಕೂಜಿತವೆಂಬ ದಾಗಿ ಒಂದು ದೋಷ ಉಂಟಾಗುತ್ತದೆ. ಅದು ಗುರುಶಿಷ್ಯರಿಗೆ ನಾಶಕರವು, ಶನಿ ಇದ್ದರೆ ರುಧಿರವೆಂಬ ದೋಷವು, ಅದು ಹುಡುಗನಿಗೆ ಮಹಾರೋಗಕರವು, ರಾಹುವಿದ್ದರೆ ರಂಧ್ರವೆಂಬ ದೋಷವು, ಅದು ಹುಡುಗನ ತಾಯಿಗೆ ನಾಶ ಕರವು, ಕೇತುವಿದ್ದರೆ ಉಗ್ರವೆಂಬ ದೋಷವು, ಅದು ವಿದ್ಯೆ, ಧನ, ಇವುಗಳಿಗೆ ನಾಶಕರವು, ಇಂಥಾ ಐದು ದೋಷಗಳಿಲ್ಲದ ಲಗ್ನದಲ್ಲಿ ಮಾಡಿದ ಉಪನಯನವು ಶುಭಕರವು ಇದು ಅಲ್ಲದೆ ಉಪನಯನ ಲಗ್ನಕ್ಕೆ ದ್ವಾದಶದಲ್ಲಿರುವ ಸೂರ್ಯ ನನ್ನು ಅಂಗಾರಕನು ನೋಡಿದರೆ ಆಚಾರ್ಯನ ಕಣ್ಣು ಹೋಗುವುದು

**ಸರ್ವತ್ರಶುಭದಶ್ಶುಕ್ರೋರಿಷ್ಫಃಷಷ್ಠಾಷ್ಟಮಾನ್ವಿನಾ ।**
**ಷಷ್ಠಾಷ್ಟಮವ್ಯೈರ್ವಿನಾಜೀವಸ್ಸರ್ವತ್ರಶುಭಕೃತ್ಸದಾ ॥**

ಶುಕ್ರನು ೬-೮-೧೧ ಈ ಸ್ಥಾನಗಳನ್ನು ಬಿಟ್ಟು ಕಡಮೆ ಸ್ಥಾನಗಳಲ್ಲೆಲ್ಲಾ ಶುಭಪ್ರದನು, ಗುರುವು ೬-೮ಸ್ಥಾನಗಳನ್ನು ಬಿಟ್ಟು ಕಡಮೆಸ್ಥಾನಗಳಲ್ಲೆಲ್ಲಾ ಶುಭ ಪ್ರದನು, ಗುರುವು ೬-೮ ಸ್ಥಾನಗಳನ್ನು ಬಿಟ್ಟು ಮಿಕ್ಕ ಸ್ಥಾನಗಳಲ್ಲಿ ಶುಭಕರನು

**ವಿಶೇಷಾನ್ನೈಧನಸ್ಥಾನೇ ನೇಷ್ಯಂತೆಸರ್ವದಾಗ್ರಹಾಃ ।**
**ಆಚಾರ್ಯಂತಂಶುಭಾಘ್ನಂತಿ ಶಿಷ್ಯಂಘ್ನಂತಿಶುಭೇತರಾಃ ॥**

ಉಪನಯನ ಲಗ್ನಕ್ಕೆ ಅಷ್ಟಮಸ್ಥಾನದಲ್ಲಿ ಸರ್ವಗ್ರಹಗಳೂ ಅಶುಭ ಕರವು, ಅದರಲ್ಲಿ ಶುಭಗ್ರಹಗಳು ಇದ್ದರೆ ಗುರುವಿಗೆ ಹಾನಿಕರವು, ಪಾಪಗ್ರಹ ಗಳು ಇದ್ದರೆ ಶಿಷ್ಯನಿಗೆ ನಾಶವನ್ನು ಮಾಡುತ್ತಾರೆ

## ಅನಂತರ ಒಂದೇ ದಿನದಲ್ಲಿ ವಿವಾಹೋಪನಯನ ವಿಷಯ

**ವಿವಾಹೋಪನಯೌಯತ್ರತ್ವೇಕಸ್ಮಿನ್ದಿವಸೇಯದಿ।**
**ಮೇಖಲಾಬಂಧನಮ್ಪೂರ್ವಂ ಪರಂವೈವಾಹಿಕಂಜಗುಃ ॥**

ಒಂದೇ ದಿನದಲ್ಲಿ ವಿವಾಹವನ್ನೂ ಉಪನಯನವನ್ನೂ ಮಾಡಬೇಕಾ

ಗಿದ್ದರೆ ಮೊದಲು ಉಪನಯನವನ್ನು ಮಾಡಿ ತರುವಾಯ ವಿವಾಹವನ್ನು ಮಾಡತಕ್ಕದ್ದು.

**ಚೌಲೋಪನಯಸೀಮಂತಜಾತನಾಮಾನ್ನಪುಂಸವೇ ।**
**ಚಾತುರ್ಮಾಸ್ಯೇಧ್ಯುಪಾಕರ್ಮ ಸೋದರಾನ್ನುಗಪ್ತ್ಯಜೇತ್ ॥**

ತಂದೆಯು ಏಕೋದರರಾದ ತನ್ನ ಮಕ್ಕಳಿಗೆಲ್ಲರಿಗೂ ಚೌಲ, ಉಪನಯನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಪುಂಸವನ, ವೇದವ್ರತ, ಪ್ರಥಮಶ್ರಾವಣ, ಹೋಮ, ಈ ಕರ್ಮಗಳನ್ನು ಒಂದೇಸಾರಿ ಮಾಡಕೂಡದು, ಒಬ್ಬೊಬ್ಬನಿಗೆ ಪ್ರತ್ಯೇಕ ಮಾಡತಕ್ಕದ್ದು.

# ವೇದಾರಂಭವು

**ಹಸ್ತಾಶ್ವಯುಕ್ಶ್ರವಣಪುಷ್ಯ ಸಮೀರಮಿತ್ರಚಿತ್ರಾದಿತಿತ್ರಿಪುರಜಿತ್ಜಲಾಸುರೇಷು । ಶಸ್ತೋತ್ತರಾಕಮಲಸಂಭವಪೌಷ್ಣಭೇಷು ಪ್ರೋಕ್ತಂ ನವಶ್ರುತಿಸಮಾಗಮನಂ ದ್ವಿಜಾನಾಂ ॥**

ಹಸ್ತ, ಅಶ್ವಿನಿ, ಶ್ರವಣ, ಪುಷ್ಯ, ಸ್ವಾತೀ, ಅನೂರಾಧಾ, ಚಿತ್ರಾ, ಪುನರ್ವಸು, ಆರ್ದ್ರಾ, ಪೂರ್ವಾಷಾಢಾ, ಮೂಲ, ಉತ್ತರ, ಉಷಾ, ಉಭಾ, ರೋಹಿಣೀ, ರೇವತಿ, ಈ ನಕ್ಷತ್ರಗಳಲ್ಲಿ ಬ್ರಾಹ್ಮಣರಿಗೆ ವೇದಾರಂಭ ಮಾಡತಕ್ಕದ್ದು.

**ರಿಕ್ತಾಷ್ಟಮೀಪಂಚದಶೀನಿಷಿದ್ಧಾಃ ತ್ರಯೋದಶೀಸಪ್ತಮಿಕಾಚ ಮಧ್ಯೇ । ವಿದ್ಯಾಗಮೇ ಈಪ್ಸಿತ ಮಂತ್ರಿಣಾಂಸ್ಯಾರ್ವಾರೋದಯಂ ಮಧ್ಯಮಮಿಂದುಭಾನ್ವೋಃ ॥**

ವೇದವನ್ನು ಸ್ವಲ್ಪ ಕಲಿತು ಬಿಟ್ಟು ಪುನಹ ಆರಂಭಿಸುವಂಥವರಿಗೆ ರಿಕ್ತ ತಿಥಿಗಳು, ಅಷ್ಟಮೀ, ಪೂರ್ಣಿಮಾ, ಇವುಗಳು ನಿಷಿದ್ಧಗಳು. ತ್ರಯೋದಶೀ, ಸಪ್ತಮೀ ಇವುಗಳು ಮಧ್ಯಮಗಳು. ಸೂರ್ಯ, ಚಂದ್ರ ವಾರಗಳು ಇವರುಗಳ ಲಗ್ನಗಳೂ ಸಹ ಮಧ್ಯಮಗಳು

**ವೇದಾರಂಭೇದ್ವಿಸ್ವಭಾವಾವಶಿಷ್ಟಾ ವಂಧ್ಯಾಃ ಪ್ರೋಕ್ತಾಯೇ ಚರಾರಾಶಯಶ್ಚ । ಶುದ್ಧೇರಾಶೌನ್ಯೈಧನೇಚಾಂದ್ರವಾರೇ ಕುರ್ಯಾದ್ಪ್ರಾಜ್ಞೈಸರ್ವವಿದ್ಯಾಸ್ಸಮಾಪ್ತಿಂ ॥**

ವೇದಾರಂಭ ವಿಷಯದಲ್ಲಿ ಸ್ಥಿರರಾಶಿಗಳು, ಚರರಾಶಿಗಳು ಇವು ನಿಷ್ಫಲಗಳು. ಆರಂಭ ಲಗ್ನಕ್ಕೆ ೮ನೇ ರಾಶಿಯು ಶುದ್ಧವಾಗಿರುವಾಗಲೂ, ಚಂದ್ರವಾರದಲ್ಲೂ, ಕ್ಷತ್ರಿಯನಿಗೆ ವಿದ್ಯಾರಂಭವನ್ನು ಮಾಡಿದರೆ ಅದು ಸರ್ವವಿದ್ಯಾ ಸಮಾಪ್ತಿಯನ್ನು ಉಂಟುಮಾಡುವುದು.

**ಜನ್ಮಯೋಗಶಕುನಾದಿವಿಸ್ತರೇಗೋಚರೇಚಶುಭದೇನ್ವಯೋಷಿತೋಃ । ಸಾಂಪ್ರದಾಯಸಮಯೇ ಗುಣಾನ್ವಿತೇ ಪಾಣಿಪೀಡನ ವಿಧಿರ್ವಿಧೀಯತೇ॥**

ಜನನಕಾಲದ ಶುಭಗ್ರಹಸಂಪತ್ತಿಯು, ಶುಭಶಕುನಗಳು, ಶುಭಗೋಚಾರಗಳು ಸಗುಣಗಳುಳ್ಳ ಸಂಪ್ರದಾಯ ಸಮಯಗಳಲ್ಲಿಯೂ, ಸ್ತ್ರೀಪುರುಷರಿಗೆ ವಿವಾಹವು ಶುಭಪ್ರದವು.

**ಅರ್ಕೆ ಕರ್ಕಟಿ ಕನ್ಯಕಾಘಟಧನುರ್ಮುಕ್ತೇಭೃಗೌಮಂತ್ರಿಣಿಸ್ಫಾರಜ್ಯೋತಿಷಿಶೀತರೋಚಿಷಿಬಲೋಪೇತವಿರಿಕ್ತೇತಿಥೌ । ರೋಹಿಣ್ಯುತ್ತರ ರೇವತೀ ಪಿತೃಮರುನ್ಮಿತ್ರೇಂದುಹಸ್ತಾಸುರೆ । ಸ್ವಾರಾರ್ಕ್ಯಾರ್ಕಜವಾಸರೈಶ್ಚರಹಿತೇಷೂದ್ವಾಹಕರ್ಮಾರಭೇತ್ ॥**

ಸೂರ್ಯನು ಕರ್ಕಾಟಕ, ಕನ್ಯಾ, ಕುಂಭ, ಧನುಸ್ಸು ಈ ರಾಶಿಗಳನ್ನು ದಾಟಿದಾಗಲೂ, ಗುರು ಶುಕ್ರರು ಆಕಾಶದಲ್ಲಿ ಪ್ರಕಾಶಿಸುತ್ತಿರುವಾಗಲೂ, ಚಂದ್ರನು ಬಲವಂತನಾಗಿರುವಾಗಲೂ, ರಿಕ್ತತಿಥಿಗಳನ್ನು ಬಿಟ್ಟು ರೋಹಿಣೀ, ಉತ್ತರಾ, ಉಷಾ, ಉಭಾ, ರೇವತಿ, ಮಖಾ, ಸ್ವಾತಿ, ಅನೂ, ಮೃಗಶಿರ, ಹಸ್ತ, ಮೂಲ, ಈ ನಕ್ಷತ್ರಗಳಲ್ಲಿಯೂ ಕುಜ, ರವಿ, ಶನಿವಾರಗಳನ್ನು ಬಿಟ್ಟು ಕಡಮೆ ವಾರಗಳಲ್ಲೂ ವಿವಾಹಕರ್ಮವನ್ನು ಮಾಡತಕ್ಕದ್ದು.

**ಶ್ರೇಷ್ಠಾಸ್ತೌಳಿಯುಮಾಂಗನಾಘಟಧನುರ್ಗೋಕರ್ಕಕಂಠೀರವಾಃ ಮಧ್ಯಾ ಸೌಮ್ಯಯುತಾಸ್ತದೋಧ್ವರ್ಗರಹಿತಾಸ್ಸರ್ವೆ ವಿವಾಹೆಹಿತಾಃ । ಸೌಮ್ಯಃ ಕೇಂದ್ರಧನಾಯಪುತ್ರಸಹಿತಾಃ ಸ್ತ್ರೀಪಾಪಷಷ್ಠಾಯಗಾಃಪೂಜ್ಯಾಶುಕ್ರಗುರೂಮೃತಾವಶುಭದೌಶುದ್ಧೋಭವೇತ್ಸಪ್ತಮಃ ।**

ವಿವಾಹದಲ್ಲಿ ತುಲಾ, ಮಿಥುನ, ಕನ್ಯಾ, ಕುಂಭ, ಧನುಸ್ಸು, ವೃಷಭ, ಕರ್ಕಾಟಕ, ಸಿಂಹ, ಈ ರಾಶಿಗಳು ಶುಭಗಳು, ಇತರ ರಾಶಿಗಳು ಮಧ್ಯಮ

ಗಳು, ಸರ್ವರಾಶಿಗಳು ಪಾಪಗ್ರಹ ಸಂಬಂಧವಿಲ್ಲದೆ ಶುಭಗ್ರಹಗಳೊಂದಿಗೆ ಕೂಡಿದ್ದರೆ ಶುಭಕರಗಳಾಗಿಯೇ ಇರುವುವು ಶುಭಗ್ರಹಗಳು ೧-೨-೪-೫-೧೦-೧೧ ಈ ಸ್ಥಾನಗಳಲ್ಲಿ ಇದ್ದರೂ, ಪಾಪಗ್ರಹಗಳು ೩-೬-೧೧ ಈ ರಾಶಿಗಳಲ್ಲಿ ಇರುವಾಗಲು ಶುಭಫಲವುಂಟಾಗುತ್ತದೆ ಗುರು ಶುಕ್ರರು ಮೌಢ್ಯರೂ ಅಸ್ತಂಗತರಾಗಿಯೂ ಇದ್ದರೆ ಅಶುಭಕರವು ಏವಂಚ ಗುರುಶುಕ್ರರಿಗೆ ಮೌಢ್ಯ, ಅಸ್ತಮಾನಗಳಿಲ್ಲದೆ ಇರುವಾಗಲೂ, ವಿವಾಹಲಗ್ನಕ್ಕೆ ಸಪ್ತಮಶುದ್ಧಿ ಇರುವಾಗಲೂ ವಿವಾಹವು ಶುಭಕರವಾಗುವುದು.

## ವಿವಾಹಪ್ರಶ್ನವು

**ಶುಭೆದಿನೆದೇವವಿದಂತ್ವಭಿಜ್ಞಂ ತಾಂಬೂಲಪುಷ್ಪಾಕ್ಷತಪೂರ್ಣ ಪಾಣಿಃ । ಕರ್ತ್ಯಾಚಗತ್ವಾಪ್ರಣಿಪತ್ಯಪೃಚ್ಛೇನ್ನಿವೇದ್ಯತಸ್ಮೈವರ ಕನ್ಯಯೋರ್ಭಂ ॥**

ವಿವಾಹವನ್ನು ಮಾಡಿಸುವವನು ಶುಭದಿನದಲ್ಲಿ ಪುಷ್ಪ, ತಾಂಬೂಲಗಳನ್ನು ಕೈಯಲ್ಲಿ ತೆಗೆದುಕೊಂಡು ಜ್ಯೋತಿಶ್ಶಾಸ್ತ್ರವನ್ನು ತಿಳಿದ ಬ್ರಾಹ್ಮಣನ ಬಳಿಗೆ ಹೋಗಿ ವಂದನಮಾಡಿ ಕನ್ಯಾ ವರರ ನಕ್ಷತ್ರಗಳನ್ನು ತಿಳಿಸಿ ವಿವಾಹವನ್ನು ಕುರಿತು ಪ್ರಶ್ನೆಮಾಡತಕ್ಕದ್ದು

## ಗೋತ್ರವರ್ಜ್ಯ

**ಸ್ವಗೋತ್ರಪ್ರವರೋಪೇತಾ ಹೀನಾಧಿಕಕುಲೋದ್ಭವಾ ।**
**ಕನ್ಯಾವಯೋಧಿಕಾನೇಷ್ಟಾ ದುರ್ಲಕ್ಷಣಗುಣಾನ್ವಿತಾ ॥**

ವರನ ಗೋತ್ರದವಳಾಗಿಯೂ, ಪ್ರವರವುಳ್ಳವಳಾಗಿಯೂ ವರನಿಗಿಂತ ಉತ್ತಮಕುಲದಲ್ಲಿ ಹುಟ್ಟಿದವಳಾಗಿಯೂ ಹೀನಕುಲದವಳಾಗಿಯೂ, ವರನಿಗಿಂತ ದೊಡ್ಡವಳಾಗಿಯೂ, ದುರ್ಲಕ್ಷಣ ಗುಣಗಳುಳ್ಳವಳಾಗಿ ಇರುವ ಕನ್ಯಕೆಯನ್ನು ಬಿಡತಕ್ಕದ್ದು.

**ಕುಲಂಚಶೀಲಂಚವಪುರ್ವಯುಶ್ಚ ವಿದ್ಯಾಂಚವಿತ್ತಂಚಸನಾಥತಾಂಚ । ಏತಾನ್ಗುಣಾಂತ್ಸಪ್ತ ಪರೀಕ್ಷದ್ಯೇಯಾತ್ಕನ್ಯಾಬುಧೈಶ್ಶೇಷಮಚಿಂತನೀಯಂ ॥**

ವರನ ಕುಲ, ನಡತೆ, ದೇಹ, ವಯಸ್ಸು, ವಿದ್ಯೆ, ಧನ, ಪಾಲಕರು, ಈ ಏಳು ಗುಣಗಳನ್ನು ಪರೀಕ್ಷಿಸಿ ಕನ್ಯೆಯನ್ನು ಕೊಡಬೇಕು, ಮಿಕ್ಕ ವಿಷಯ

ಗಳನ್ನು ಯೋಚಿಸಕೆಲಸವಿಲ್ಲ ಅಂದರೆ ಕನ್ಯೆಯನ್ನು ಕೊಡುವವನು ಇವುಗಳನ್ನು ಚೆನ್ನಾಗಿ ತಿಳಿದು ಕೊಡಬೇಕು

# ಜನ್ಮನಕ್ಷತ್ರ ನಾಮನಕ್ಷತ್ರ ವಿಷಯ

**ದಂಪತ್ಯೋರ್ಜನ್ಮತಾರಾಭ್ಯಾಂ ನಾಮರ್ಕ್ಷಾಭ್ಯಾಮಥಾಪಿವಾ ।**
**ಸ್ತ್ರೀಜನ್ಮತಾರಾಪೂರ್ವಾಭ್ಯಾಂ ಬ್ರೂಯಾತ್ಪ್ರಾಜ್ಞಶ್ಶುಭಾಶುಭಂ ॥**

ದಂಪತಿಗಳ ಜನ್ಮನಕ್ಷತ್ರಗಳಿಂದಾಗಲಿ, ನಾಮನಕ್ಷತ್ರಗಳಿಂದಾಗಲಿ, ಕನ್ಯೆಯ ನಕ್ಷತ್ರ ಮೊದಲಾಗಿ ಜ್ಯೋತಿಶ್ಶಾಸ್ತ್ರಜ್ಞನು ಶುಭಾಶುಭಗಳನ್ನು ಹೇಳತಕ್ಕದ್ದು.

**ಜನ್ಮಧಿಷ್ಣ್ಯಭವನೋದ್ಭವಂಫಲಂ ಕಾಮಿನೀಪುರುಷಯೋರ್ವಿಚಿಂತಯೇತ್ । ಜನ್ಮಧಿಷ್ಣ್ಯಭವನಾನಭಿಜ್ಞಯಾ ನಾಮತೋಖಿಲಮಿದಂವಿಚಿಂತಯೇತ್ ॥**

ಸ್ತ್ರೀಪುರುಷರಿಗೆ ಜನ್ಮನಕ್ಷತ್ರ ಜನ್ಮರಾಶಿಗಳನ್ನು ವಿಚಾರಿಸಿ ಶುಭಾಶುಭ ಫಲಗಳನ್ನು ಯೋಚಿಸಬೇಕು ಅದು ತಿಳಿಯದಿದ್ದರೆ ನಾಮನಕ್ಷತ್ರರಾಶಿಗಳಿಂದ ಶುಭಾಶುಭಗಳನ್ನು ಚಿಂತಿಸತಕ್ಕದ್ದು.

**ಅಜ್ಞಾತಜನ್ಮನಾಂನೃಣಾಂ ನಾಮಭಂಪರಿಕಲ್ಪಯೇತ್ ।**
**ತೇನೈವಚಿಂತಯೇತ್ಸರ್ವಂ ರಾಶಿಕೂಟಾದಿಜನ್ಮವತ್ ॥**

ಜನ್ಮನಕ್ಷತ್ರ ತಿಳಿಯದ ಮನುಷ್ಯರಿಗೆ ನಾಮನಕ್ಷತ್ರವನ್ನೇ ಹಿಡಿಯತಕ್ಕದ್ದು, ಅದರಿಂದಲ ರಾಶಿಕೂಟ ಮುಂತಾದ ಎಲ್ಲಾ ವರ್ಗಗಳನ್ನು ಆಲೋಚಿಸತಕ್ಕದ್ದು.

**ಜನ್ಮನಾಜನ್ಮಕುರ್ವೀತ ನಾಮ್ನಾನಾಮ್ನೈವಕಾರಯೇತ್ ।**
**ಉಭಯಂದುರ್ಬಲಹೀನಂಚೇತ್ಪುಂಜನ್ಮಸ್ತ್ರೀಷುನಾಮತಃ ॥**

ಪುರುಷನಿಗೂ ಸ್ತ್ರೀಗೂ ಜನ್ಮನಕ್ಷತ್ರಗಳನ್ನೇ ಹಿಡಿಯುವದೊಂದು ಪಕ್ಷವು, ನಾಮನಕ್ಷತ್ರವನ್ನೇ ಹಿಡಿಯುವದೊಂದು ಪಕ್ಷವು, ಈ ಎರಡು ಪಕ್ಷಗಳೂ ದುರ್ಬಲಗಳಾಗಿರುವ ಪಕ್ಷದಲ್ಲಿ ಪುರುಷನ ಜನ್ಮ ನಕ್ಷತ್ರದಿಂದಲೂ, ಸ್ತ್ರೀಯ ನಾಮನಕ್ಷತ್ರದಿಂದಲೂ ಶುಭಾಶುಭಗಳನ್ನು ಯೋಚಿಸತಕ್ಕದು.

# ಏಕನಕ್ಷತ್ರ ವಿವಾಹವು

**ರೋಹಿಣ್ಯಾದ್ರಾ್ರಮಘೇಂದ್ರಾಗ್ನಿತಿಷ್ಯಶ್ರವಣಪೌಷ್ಣಭಂ ।**
**ಅಹಿರ್ಬುಧ್ನ್ಯರ್ಕ್ಷಮೇತಾಷ್ಟಾಚ ನಕ್ಷತ್ರೈಕ್ಯೇಶುಭಾವಹಾಃ ॥**

ರೋಹಿಣಿ, ಆದ್ರಾ್ರ, ಮಖಾ, ವಿಶಾಖಾ, ಪುಷ್ಯ, ಶ್ರವಣ, ರೇವತಿ, ಉಭಾ, ಈ ನಕ್ಷತ್ರಗಳಲ್ಲಿ ಹುಟ್ಟಿದ ಸ್ತ್ರೀಪುರುಷರು ಒಂದೇ ನಕ್ಷತ್ರದವರಾಗಿದ್ದರೆ ಶುಭಕರಗಳು

**ಅಶ್ವಿನೀಚಯಮಸ್ವಾತಿ ಸಾರ್ಪಫಾಲ್ಗುಣಮೇವಚ ।**
**ಮೈತ್ರವಾರುಣಮೂಲಾಖ್ಯಂ ನಕ್ಷತ್ರೈಕ್ಯೇಪಿಮಧ್ಯಮಾಃ ॥**

ಅಶ್ವಿನೀ, ಭರಣೀ, ಸ್ವಾತೀ, ಆಶ್ಲೇಷಾ, ಪೂರ್ವಫಲ್ಗುಣೀ ಅನೂ, ಶತಭಿಷಕ್, ಮೂಲ, ಈ ಎಂಟು ನಕ್ಷತ್ರಗಳಲ್ಲಿ ಹುಟ್ಟಿದ ಸ್ತ್ರೀಪುರುಷರಿಗೆ ನಕ್ಷತ್ರಗಳೊಂದಾಗಿದ್ದರೆ ಮಧ್ಯಮವು

ಅಜೈಕಪಾದ್ವಸುವಿಷ್ಣ್ವಾಚ ಪುನರ್ವಸ್ವಗ್ನಿಕೃತ್ತಿಕಾ ।
ಮೃಗಶೀರ್ಷಂಚಚಿತ್ರಾಚ ಸವಿತ್ರೋತ್ತರಫಲ್ಗುನೀ ।
ಜ್ಯೇಷ್ಠಾಚವಿಶ್ವತೋಯಂಚ ನಕ್ಷತ್ರೈಕ್ಯೇವಿನಶ್ಯತಿ ।
ಏಕರಾಶಾಪೃಥಗ್ಧಿಷ್ಣ್ಯೇಚೋತ್ತಮಮ್ಪ್ರಾಣಿಪೀಡನಂ ॥

ಪೂರ್ವಾಭಾದ್ರ, ಧನಿಷ್ಠಾ, ಪುನರ್ವಸು, ಕೃತ್ತಿಕಾ, ಮೃಗಶೀರ್ಷ, ಚಿತ್ರಾ, ಹಸ್ತ, ಉತ್ತರಾ, ಜ್ಯೇಷ್ಠ, ಪೂಷಾ, ಉಷಾ ಈ ೧೦ ನಕ್ಷತ್ರಗಳಲ್ಲಿ ಹುಟ್ಟಿದ ಸ್ತ್ರೀಪುರುಷರಿಗೆ ನಕ್ಷತ್ರೈಕ್ಯವುಂಟಾದರೆ ಸ್ತ್ರೀಪುರುಷರಿಗೆ ನಾಶಕರವಾಗುತ್ತದೆ, ಮತ್ತು ಸ್ತ್ರೀಪುರುಷರಿಗೆ ಜನ್ಮರಾಶಿಯೊಂದಾಗಿ ನಕ್ಷತ್ರಗಳು ಬೇರೆಯಾಗಿ ಇದ್ದಲ್ಲಿ ವಿವಾಹ ಉತ್ತಮವಾದುದು.

**ರಾಶ್ಯೈಕ್ಯೇಚೆದ್ಭಿನ್ನಮೃಕ್ಷಂ ದ್ವಯೋಸ್ಯಾನ್ನಕ್ಷತ್ರೈಕ್ಯೇ ರಾಶಿಯುಗ್ಮಂತಥೈವ । ನಾಡೀದೋಷೋನೋಗಣಾನಾಂಚ ದೋಷೋ ನಕ್ಷತ್ರೈಕ್ಯೈಭಿನ್ನಪಾದಶ್ಶುಭಸ್ಸ್ಯಾತ್ ॥**

ದಂಪತಿಗಳೊಂದೇ ರಾಶಿಯಲ್ಲಿ ಹುಟ್ಟಿದವರಾಗಿ ಇದ್ದರೆ ನಕ್ಷತ್ರಭೇದ ಉಂಟಾದರೂ ಹಾಗೆ ಒಂದೇ ನಕ್ಷತ್ರದಲ್ಲಿ ಹುಟ್ಟಿದವರಾಗಿದ್ದರೆ ರಾಶಿಭೇದ ಉಂಟಾದರೂ ನಾಡೀ ದೋಷವು, ಗಣ ದೋಷವು ಸಹ ಉಂಟಾಗುವದಿಲ್ಲ.

ವಧೂವರರು ಒಂದೇ ನಕ್ಷತ್ರದಲ್ಲಿ ಹುಟ್ಟಿದ್ದರೂ ಬೇರೆ ಬೇರೆ ಪಾದಗಳಲ್ಲಿ ಹುಟ್ಟಿದವರಾದರೆ ಅವರ ವಿವಾಹವು ಶುಭಕರವಾಗುವದು.

## ಗ್ರಂಥಾಂತರದಲ್ಲಿ

**ಏಕರ್ಕ್ಷೈಕ್ಯೈಕಪಾದೇತು ವಿವಾಹಃ ಪ್ರಾಣಹಾನಿದಃ ।**
**ದಂಪತ್ಯೋರೇಕನಕ್ಷತ್ರೇ ಭಿನ್ನಪಾದೇಶುಭಾವಹಃ ॥**

ಒಂದೇ ನಕ್ಷತ್ರದಲ್ಲೂ, ಒಂದೇ ಪಾದದಲ್ಲೂ, ಹುಟ್ಟಿದವರಿಗೆ ವಿವಾಹವು ಅವರಿಗೆ ಪ್ರಾಣಹಾನಿಕರವು, ಒಂದೇ ನಕ್ಷತ್ರದಲ್ಲೂ ಬೇರೆ ಬೇರೆ ಪಾದಗಳಲ್ಲಿ ಹುಟ್ಟಿದವರಿಗೆ ವಿವಾಹವು ಶುಭಕರವು

**ವಾರುಣಾರ್ಕಮರುದ್ದಸ್ರವಹ್ನ್ಯಪಶ್ಚವಿಧುಃಪಿತಾ ।**
**ವಿಷುಸ್ತ್ರೀಪೂರ್ವವತ್ವೆಪಿ ರಾಶ್ಯೈಕ್ಯೈನತುದೋಷಭಾಕ್ ॥**

ಶತಭಿಷಕ್, ಹಸ್ತ, ಸ್ವಾತಿ, ಅಶ್ವಿನೀ, ಕೃತ್ತಿಕಾ, ಪೂಷಾ, ಮೃಗಶಿರ, ಮಘಾ, ಈ ನಕ್ಷತ್ರಗಳಲ್ಲಿ ಕನ್ಯೆಯು ಪ್ರಥಮವಾದದಲ್ಲಿ ಹುಟ್ಟಿದ್ದರೆ ದಂಪತಿಗಳು ಒಂದೇ ನಕ್ಷತ್ರ ಒಂದೇ ರಾಶಿಯಲ್ಲಿ ಹುಟ್ಟಿದವರಾದರೂ ದೋಷವಿಲ್ಲ.

**ಯುಗ್ಮಪಾದೇಚುಧಿಷ್ಣ್ಯೇತು ವರಃ ಪೂರ್ವಾರ್ಧಗೋಜಯಃ ।**
**ಅಪರಾರ್ಧೋರ್ಗ್ಭವಾನಾರೀ ಚೈಕರ್ಕ್ಷೇಪಿಶುಭಾವಹಃ ॥**

ಸ್ತ್ರೀಪುರುಷರೊಂದೇ ನಕ್ಷತ್ರದಲ್ಲಿ ಹುಟ್ಟಿದನರಾಗಿ ಇರುವಾಗ ಆನಕ್ಷತ್ರವು ದ್ವಿಪಾದ ನಕ್ಷತ್ರವಾಗಿಯೂ ಅದರಲ್ಲಿ ವರನು ಪೂರ್ವಾರ್ಧದಲ್ಲಿಯೂ, ಸ್ತ್ರೀಯು ಅಪರಾರ್ಧದಲ್ಲಿಯೂ ಪುಟ್ಟಿದವರಾಗಿದ್ದರೆ ಅಂಥವರಿಗೆ ಜಯವೂ, ಶುಭವೂ ಸಹ ಉಂಟಾಗುವದು.

**ಏಕರಾಶೌದ್ವಿನಕ್ಷತ್ರೆ ಪುಂತಾರಾಪ್ರಥಮಾಭವೇತ್ ।**
**ಅತೀವಶೋಭನಂಪ್ರೋಕ್ತಂ ಸ್ತ್ರೀತಾರಾಚೆದ್ವಿನಾಶನಂ ॥**

ಎರಡು ನಕ್ಷತ್ರಗಳ ಸಂಬಂಧವುಳ್ಳ ಒಂದು ರಾಶಿಯಲ್ಲಿ ಹುಟ್ಟಿದ ಸ್ತ್ರೀ ಪುರುಷರೊಳು ಆ ರಾಶಿಯ ನಕ್ಷತ್ರಗಳಲ್ಲಿ ಪುರುಷನ ನಕ್ಷತ್ರವು ಮುಂದಿನದಾಗಿ ಇದ್ದರೆ ವಿವಾಹವು ಶುಭಕರವು, ಸ್ತ್ರೀ ನಕ್ಷತ್ರವು ಮೊದಲನೇದಾಗಿದ್ದರೆ ಅವರಿಗೆ ನಾಶವುಂಟಾಗುತ್ತದೆ.

## ನಾಮಾಂಶವು

**ಶುಭಮಂಶೈಕ್ಯಮುದ್ವಾಹೇದ್ದಂಪತ್ಯೋರ್ನಾಮತಾರಕೇ ।**
**ಗ್ರಾಮಸಂಗ್ರಾಮಸೇವಾಸು ಸಮಾಂಶಮಶುಭಂವಿದುಃ ॥**

ದಂಪತಿಗಳ ನಾಮನಕ್ಷತ್ರಗಳಿಗೆ ಅಂಶ ಒಂದೇ ಆಗಿದ್ದರೆ ಶುಭಕರವಹುದು ಗ್ರಾಮಪ್ರವೇಶ, ಯುದ್ಧಾರಂಭ, ಅಧಿಕಾರ ಪ್ರವೇಶಗಳಲ್ಲಿ ಸಮಾಂಶವು ಅಶುಭಕರವು.

**ವಿರುದ್ಧೇರಾಶಿನಕ್ಷತ್ರೇಭವೇತಾಮಪಿಚೇತ್ತದಾ ।**
**ದಂಪತ್ಯೋಃ ಪ್ರೀತಯೇನ್ಯಾಣಾಂ ನಾಮಾಂತರಮಥಕ್ಷಿಪೇತ್॥**

ದಂಪತಿಗಳ ನಕ್ಷತ್ರ ರಾಶಿಗಳು ವಿರುದ್ಧಗಳಾಗಿದ್ದರೆ ಅವರುಗಳಿಗೆ ಪರಸ್ಪರ ಪ್ರೀತಿಯುಂಟಾಗುವದಕ್ಕಾಗಿ ಬೇರೆ ಹೆಸರನ್ನು ಇಡಬಹುದು.

## ಗ್ರಂಥಾಂತರದಲ್ಲಿ

**ದಂಪತ್ಯೋರೇಕನಕ್ಷತ್ರೇ ದ್ವಿಪದರ್ಕ್ಷೇಮೃತಿರ್ಭವೇತ್ ।**
**ತ್ರಿಪದರ್ಕ್ಷೇಗವೋತ್ಪತ್ತಿಶ್ಚತುಷ್ಪಾದೆ ಶುಭಾವಹಃ ॥**

ದಂಪತಿಗಳು ಹುಟ್ಟಿದ ಒಂದೇ ನಕ್ಷತ್ರವು ದ್ವಿಪಾದವಾಗಿದ್ದರೆ ಮೃತ್ಯುವು, ತ್ರಿಪಾದ ನಕ್ಷತ್ರವಾದರೆ ಪಶುಗಳಿಂದ ಫಲವುಂಟಾಗುವದು, ಚತುಷ್ಪಾದ ನಕ್ಷತ್ರವಾದರೆ ಶುಭಕರವಹುದು

## ಕನ್ಯೆಗೆ ನಾಮಾಂತರ ವಿಷಯ

**ಪಂಚತ್ವಕ್ಸಿತಸರ್ಷಪಾನ್ವಿತಜಲಂ ಕುಂಭೆಸ್ಥಿತಂನೂತನಂ ।**
**ದೂರ್ವಾಶ್ವತ್ಥದಳೈರ್ವಿವಾಹಸಮಯೆ ಸಂಪ್ರೋಕ್ಷಣಂಕಲ್ಪಯೇತ್ ।**
**ಕನ್ಯಾಯಾಸ್ತದನಂತರಂ ದ್ವಿಜವರಸ್ತಸ್ಯಾಶ್ಚಪುಣ್ಯಾಂಗಣಾ ।**
**ಪೂರ್ವೋಕ್ತಪ್ಪರಿಹೃತ್ಯಮಂಗಳಕರಂ ನಾಮಾಂತರಂಪ್ರಕ್ಷಿಪೆತ್ ॥**

ಕನ್ಯೆಗೆ ವಿವಾಹಕಾಲದಲ್ಲಿ ಒಂದು ನೂತನ ಕುಂಭದಲ್ಲಿ ನೀರು ತುಂಬಿ ಆಲ, ಮಾವು, ನೇರಳೆ, ಅಶ್ವತ್ಥ, ಜುಪ್ಪೀ, ಈ ಐದು ಚಕ್ಕೆಗಳನ್ನೂ, ಬಿಳೀ ಸಾಸುವೆಯನ್ನೂ ಸಹ ಆ ನೀರಿನಲ್ಲಿ ಹಾಕಿ, ಗರಿಕೆ, ಅಶ್ವತ್ಥ ಇವುಗಳ ಚಿಗುರುಗಳಿಂದ ಆ ಕುಂಭವಲ್ಲಿರುವ ನೀರನ್ನು ತೆಗೆದು ಮುತ್ತೈದೆಯರಿಂದ ಆ ಕನ್ಯೆಗೆ

ಪ್ರೋಕ್ಷಣೆ ಮಾಡಿಸಿ, ತರುವಾಯ ಕನ್ಯೆಯ ಹಿಂದಿನ ಹೆಸರನ್ನು ತಪ್ಪಿಸಿ ಶುಭ ವಾದ ಬೇರೆ ಹೆಸರನ್ನು ಬ್ರಾಹ್ಮಣ ಮುತ್ತೈದೆಯರ ಬಾಯಿಯಿಂದ ಹೇಳಿಸ ತಕ್ಕದ್ದು.

**ಮೂಲಜಾಶ್ವಶುರಂಹಂತಿ ವ್ಯಾಳಜಾಚತದಂಗನಾವ್ ।**
**ಜ್ಯೇಷ್ಠಜಾಭಾವುಕಂಹಂತಿ ದೇವರಂತುದ್ವಿದೈವಜಾ ॥**

ಮೂಲಾನಕ್ಷತ್ರದಲ್ಲಿ ಹುಟ್ಟಿದ ಕನ್ಯೆಯು ಮಾವನನ್ನೂ, ಆಶ್ಲೇಷದಲ್ಲಿ ಹುಟ್ಟಿದವಳು ಅತ್ತೆಯನ್ನೂ, ಜ್ಯೇಷ್ಠೆಯಲ್ಲಿ ಹುಟ್ಟಿದವಳು ಗಂಡನ ತಮ್ಮ ನನ್ನೂ, ವಿಶಾಖೆಯಲ್ಲಿ ಹುಟ್ಟಿದವಳು ಗಂಡನ ಅಣ್ಣನನ್ನೂ ಕೊಲ್ಲುವಳು.

**ಮೂಲಾಶ್ಲೇಷಾವಿಶಾಖಾಸು ಮಾಹೇಂದ್ರೇಚೋದ್ಭವಃಪುಮಾ೯ ।**
**ನದೋಷಕೃದ್ವಿವಾಹೇಚ ಸ್ತ್ರಿಯಶ್ಚೈತೇಷುವರ್ಜಿತಾಃ ॥**

ಮೇಲೆ ಹೇಳಿದ ಮೂಲ, ಆಶ್ಲೇಷ, ಜ್ಯೇಷ್ಠಾ, ವಿಶಾಖಾ, ಈ ನಾಲ್ಕು ನಕ್ಷತ್ರಗಳಲ್ಲಿ ಹುಟ್ಟಿದ ಪುರುಷನ ವಿವಾಹ ಶುಭಕರವಹುದು, ಆ ನಕ್ಷತ್ರದಲ್ಲಿ ಹುಟ್ಟಿದ ಸ್ತ್ರೀಯನ್ನು ಬಿಡತಕ್ಕದ್ದು.

## ಗ್ರಂಥಾಂತರದಲ್ಲಿ

**ತುಲಾಯುಕ್ತೇದ್ವಿದೈವರ್ಕ್ಷೆ ಜಾತಾನಾರೀನದೋಷಭಾಕ್ ।**
**ಕೌರ್ಪಿಯುಕ್ತೇದ್ವಿದೈವರ್ಕ್ಷೆ ಜಾತಾಹಂತಿಧ್ರುವಚ ॥**

ವಿಶಾಖೆಯ ೩ ಪಾದದೊಳಗಾಗಿ ತುಲಾರಾಶಿಯಲ್ಲಿ ಸ್ತ್ರೀಯು ಹುಟ್ಟಿದ್ದರೆ ದೋಷವಿಲ್ಲ. ಆ ನಕ್ಷತ್ರದ ೪ನೇ ಪಾದದಲ್ಲಿ ವೃಶ್ಚಿಕ ರಾಶಿಯಲ್ಲಿ ಹುಟ್ಟಿದ್ದರೆ ದೋಷ ಉಂಟಾಗುತ್ತದೆ.

## ದ್ವಾದಶ ಕೂಟಗಳು

**ದಿನಂಗಣಂಚಮಾಹೇಂದ್ರಂ ಸ್ತ್ರಿದೀರ್ಘಂಯೋನಿರೇವಚ ।**
**ರಾಶೀರಾಶ್ಯಧಿಪೋವಶ್ಯೋ ರಜ್ಜುರ್ವೇಧಾತಥಾದಶ ।**
**ಪುನಶ್ಚವರ್ಣಕೂಟಂಚ ನಾಡೀಕೂಟಂಪ್ರಶಸ್ಯತೆ ।**
**ಏತೆದ್ವಾದಶಕೂಟಾಸ್ಯುಃ ಕೂಟಭೇದಾಃ ಪ್ರಕೀರ್ತಿತಾಃ ॥**

ಕನ್ಯಾವರರಿಗೆ ವಿವಾಹದಲ್ಲಿ ದಿನಕೂಟ, ಗಣಕೂಟ, ಮಾಹೇಂದ್ರ ಕೂಟ, ಸ್ತ್ರೀದೀರ್ಘಕೂಟ, ಯೋನಿಕೂಟ, ರಾಶಿಕೂಟ, ರಾಶ್ಯಾಧಿಪತಿಕೂಟ, ವಶ್ಯ

ಕೂಟ, ರಜ್ಜುಕೂಟ, ವೇಧಾಕೂಟ, ವರ್ಣಕೂಟ, ನಾಡೀಕೂಟ ಎಂಬದಾಗಿ ೧೨ ಕೂಟಗಳು ಪ್ರಶಸ್ತಗಳಾಗಿರುತ್ತವೆ

**ರಾಶಿಕೂಟಾದಿಕಂಸರ್ವಂ ಸ್ತ್ರೀಭಮಾರಭ್ಯಚಿಂತಯೇತ್ ।**
**ಪುಂಭಾತಾರಾವಿಶುದ್ಧಸ್ಸ್ಯಾನ್ನಾಡೀರಜ್ಜುಸ್ಸದಸ್ರಭಾತ್ ॥**

ರಾಶಿಕೂಟ ಮೊದಲಾಗಿ ಎಲ್ಲಾ ಕೂಟಗಳು ಸ್ತ್ರೀನಕ್ಷತ್ರದಿಂದ ನೋಡತಕ್ಕದ್ದು, ಪುರುಷನಕ್ಷತ್ರದಿಂದ ತಾರಾಬಲ ನೋಡತಕ್ಕದ್ದು. ಅಶ್ವಿನೀ ನಕ್ಷತ್ರದಿಂದ ನಾಡೀಕೂಟ, ರಜ್ಜುಕೂಟಗಳನ್ನು ನೋಡತಕ್ಕದ್ದು

**ಗ್ರಹಮೈತ್ರಂರಾಶಿಕೂಟಂ ತಾರಾನಾಡೀವಿಶೇಷತಃ ।**
**ಸರ್ವೇಷಾಮೇವವರ್ಣಾನಾಮವಶ್ಯಂಗಣಕೂಟಕಂ ॥**

ಗ್ರಹಮಿತ್ರತ್ವ, ರಾಶಿಕೂಟ, ತಾರಾಬಲ, ನಾಡಿಕೂಟ, ಗಣಕೂಟ ಇವುಗಳು ಎಲ್ಲಾ ವರ್ಣದವರಿಗೂ ಅವಶ್ಯ ನೋಡತಕ್ಕದ್ದು.

**ಗ್ರಹಮೈತ್ರಂದ್ವಿಜಾತೀನಾಂ ಕ್ಷತ್ರಿಯಾಣಾಂಗಣಸ್ತಥಾ ।**
**ಕನ್ಯಾದೂರಂತುವೈಶ್ಯಾನಾಂ ಶೂದ್ರಾಣಾಂಯೋನಿರೇವಚ॥**

ಬ್ರಾಹ್ಮಣರಿಗೆ ಗ್ರಹಮೈತ್ರವು ಕ್ಷತ್ರಿಯರಿಗೆ ಗಣಕೂಟವು, ವೈಶ್ಯರಿಗೆ ಕನ್ಯಾದೂರ, ಅಂದರೆ ಸ್ತ್ರೀದೀರ್ಘಕೂಟ, ಶೂದ್ರರಿಗೆ ಯೋನಿಕೂಟ ಅವಶ್ಯ ನೋಡತಕ್ಕದ್ದು

## ದಿನಕೂಟ

**ಕನ್ಯಾದಿವರಋಕ್ಷಾಂತಂ ಗಣಯೇನ್ನವಸಂಖ್ಯಯಾ ।**
**ಸಮಾಂತ್ಯತಾರಕಂಶ್ರೇಷ್ಠಂ ದಿನಕೂಟಂಪ್ರಶಸ್ಯತೆ ॥**

ಕನ್ಯೆಯ ನಕ್ಷತ್ರ ಮೊದಲು ವರನ ನಕ್ಷತ್ರ ಪರ್ಯಂತ ೯ ನಕ್ಷತ್ರಗಳಾಗಿ ಎಣಿಸುವಾಗ ಪುರುಷ ನಕ್ಷತ್ರವು ಸಮಸಂಖ್ಯೆಯಾಗಿ ಅಂದರೆ ೨ ೪ ೬-೮ ಈ ಮೇರೆ ಇದ್ದರೆ ಉತ್ತಮವು

## ಗಣಕೂಟವು

**ಪುನರ್ವಸುದ್ವಯಂಸ್ವಾತೀ ಕರಶ್ರವಣತಾರಕೆ ।**
**ಪೌಷ್ಣಮೈತ್ರೇಂದುವಸ್ರಾಖ್ಯಾಸ್ತಾರಾದೇವಗಣಾಸ್ಮೃತಾಃ ॥**

ಪುನರ್ವಸು, ಪುಷ್ಯ, ಸ್ವಾತೀ, ಹಸ್ತ, ಶ್ರವಣ, ರೇವತೀ, ಅನೂರಾಧಾ, ಮೃಗಶೀರ್ಷ, ಅಶ್ವಿನೀ, ಈ ೯ ನಕ್ಷತ್ರಗಳು ದೇವಗಣಗಳು.

**ರೋಹಿಣೀತ್ರೀಣಿಪೂರ್ವಾಣಿ ಭರಣೀರೌದ್ರಮೇವಚ |**
**ತ್ರೀಣ್ಯುತ್ತರಾಶ್ಚವಿಜ್ಞೇಯಾ ಮಾನುಷಾಃ ಪರಿಕೀರ್ತಿತಾಃ ||**

ರೋಹಿಣೀ, ಪೂಷ, ಪೂಷಾ, ಪೂಭಾ, ಭರಣೀ, ಆದ್ರಾ್ರ, ಉತ್ತರಾ, ಉಷಾ, ಉಭಾ ಈ ೯ ನಕ್ಷತ್ರಗಳು ಮಾನುಷ ಗಣಗಳು.

**ಅಗ್ನಿಸಾರ್ಪಮಖಾಚಿತ್ರಾ ದ್ವಿದೈವೇಂದ್ರಾಶ್ಚಮೂಲಭಂ |**
**ಶ್ರವಿಷ್ಠಾವಾರುಣಂಚೈವ ರಾಕ್ಷಸಾಖ್ಯಾಗಣಾಸ್ಮೃತಾ ||**

ಕೃತ್ತಿಕಾ, ಆಶ್ಲೇಷಾ, ಮಖಾ, ಚಿತ್ರಾ, ವಿಶಾಖಾ, ಜ್ಯೇಷ್ಠ, ಮೂಲ, ಧನಿಷ್ಠಾ, ಶತಭಿಷಕ್, ಈ ೯ ನಕ್ಷತ್ರಗಳು ರಾಕ್ಷಸ ಗಣಗಳು.

**ಸ್ವಗಣಂಚೋತ್ತಮಂವಿದ್ಯಾನ್ಮಧ್ಯಮಂದೈವಮಾನುಷಂ |**
**ಅಧಮಂರಾಕ್ಷಸಂದೈವಂ ಮೃತ್ಯುರ್ಮಾನುಷರಾಕ್ಷಸಂ |**
**ಸ್ತ್ರೀರಾಕ್ಷಸಂನಕರ್ತವ್ಯಂ ಕರ್ತವ್ಯಂನರರಾಕ್ಷಸಂ ||**

ಸ್ತ್ರೀಪುರುಷರಿಬ್ಬರ ನಕ್ಷತ್ರಗಳೂ ಒಂದೆ ಗಣವಾಗಿ ಇದ್ದರೆ ಉತ್ತಮವು, ದೇವಗಣ ಮನುಷ್ಯಗಣವಾದರೆ ಮಧ್ಯಮವು, ದೇವರಾಕ್ಷಸ ಗಣಗಳು ಅಧಮವು, ಮನುಷ್ಯ ರಾಕ್ಷಸ ಗಣಗಳು ಮೃತ್ಯುವು, ಕನ್ಯೆಯ ನಕ್ಷತ್ರವು, ರಾಕ್ಷಸ ಗಣವಾಗಿದ್ದರೆ ಮದುವೆ ಮಾಡಕೂಡದು

## ಮಾಹೇಂದ್ರ ಕೂಟ

**ವಧ್ವಾದೀನಾಂಚತುಸ್ಸಪ್ತ ದಶಮಂಚತ್ರಯೋದಶಂ |**
**ಷೋಡಶೇಕೋನವಿಂಶಂಚ ದ್ವಾವಿಂಶಂಪಂಚವಿಂಶತಿಃ |**
**ಏತೇಮಾಹೇಂದ್ರಯೋಗಾಸ್ಯುರ್ವಿವಾಹೇಷುಪ್ರಶಸ್ಯತೇ ||**

ಸ್ತ್ರೀ ನಕ್ಷತ್ರ ಮೊದಲು ಎಣಿಸುವಲ್ಲಿ ಪುರುಷನ ನಕ್ಷತ್ರವು ೪-೭-೧೦-೧೩-೧೬-೧೯-೨೨-೨೫ ನೇ ನಕ್ಷತ್ರಗಳಾಗಿದ್ದರೆ ಇದು ಮಾಹೇಂದ್ರಕೂಟವು, ವಿವಾಹದಲ್ಲಿ ಪ್ರಶಸ್ತಗಳು.

## ಸ್ತ್ರೀದೀರ್ಘ ಕೂಟವು

**ಸ್ತ್ರೀಧಿಷ್ಣ್ಯಾದ್ಯನವಕೇಸ್ತ್ರೀದೂರಮತಿನಿಂದಿತಂ |**
**ದ್ವಿತೀಯೇಮಧ್ಯಮಂಪ್ರೋಕ್ತಂ ತೃತೀಯೇನವಕೇಶುಭಂ |**
**ಚತುರ್ದಶಕ್ಷಾದುಪರಿ ಸ್ತ್ರೀಬಾಹುಳ್ಯಂವಿಶಾಂಶುಭಂ ||**

ಸ್ತ್ರೀಯ ನಕ್ಷತ್ರದ ದಿನೆಯಿಂದ ಮೊದಲು ೯ ನಕ್ಷತ್ರಗಳೊಳಗೆ ಪುರುಷ ನಕ್ಷತ್ರವಿದ್ದರೆ ಸ್ತ್ರೀದೀರ್ಘವೆಂಬ ಕೂಟವು ಅತಿ ನಿಂದಿತವು, ಎರಡನೇ ನವಕ ದಲ್ಲಿದ್ದರೆ ಮಧ್ಯಮವು, ೩ನೇ ನವಕದಲ್ಲಿದ್ದರೆ ಉತ್ತಮವು, ವೈಶ್ಯರಿಗೆ ಸ್ತ್ರೀ ನಕ್ಷತ್ರ ಮೊದಲು ಪುರುಷನ ನಕ್ಷತ್ರವು ೧೪ ನಕ್ಷತ್ರಗಳ ಮೇಲೆ ಇದ್ದರೆ ಶುಭವು

## ಸ್ತ್ರೀದೀರ್ಘಕೂಟಾಪವಾದಃ

**ಸ್ತ್ರೀದೀರ್ಘಂಯದಿನೋದ್ವಾಹೇ ಸ್ತ್ರೀನಾಶೋಭವತಿಧ್ರುವಂ ।**
**ಸದೋಷೋನಾಸ್ತಿಯದ್ಯಸ್ತಿ ರಾಶಿಶ್ಚಗ್ರಹಮೈತ್ರಕಂ ॥**

ಮದುವೆಯಲ್ಲಿ ಸ್ತ್ರೀದೀರ್ಘಕೂಟವಿಲ್ಲದಿದ್ದರೆ ಸ್ತ್ರೀ ನಾಶವಹುದು, ರಾಶಿ ಕೂಟವು ಗ್ರಹಮೈತ್ರಕೂಟವು, ಸಹ ಇದ್ದರೆ ಆ ದೋಷವಿಲ್ಲ.

## ಯೋನಿಕೂಟವು

**ಅಶ್ವಿನೀಶತತಾರಾಶ್ವಾ ಭರಣೀರೇವತೀಗಜೌ ।**
**ಕೃತ್ತಿಕಾಪುಷ್ಯಭಂಛಾಗೌರೋಹಿಣೀಂದೂಭುಜಂಗವೌ ।**
**ಮೂಲಾದ್ರ್ರ್ಯತುತಥಾಶ್ವಾನೌಮಖಾಪೂರ್ವಾಚಮೂಷಕೌ ।**
**ಸಾರ್ಪಾದಿತ್ಯೇಚಮಾರ್ಜಾಲೌಸ್ವಾತೀಹಸ್ತಾಚಮಾಹಿಷೌ ।**
**ವಿಶಾಖಾಚಿತ್ರಭೆವ್ಯಾಘ್ರೌ ಮೃಗೌಜ್ಯೇಷ್ಠಾನುರಾಧಕೌ ।**
**ಉತ್ತರೋತ್ತರಭಾದ್ರಾತು ಗಾವೌಚಪರಿಕೀರ್ತಿತೌ ।**
**ಅಭಿಜಿಚ್ಚೋತ್ತರಾಷಾಢಾ ನಕಲೌಪರಿಕೀರ್ತಿತೌ ।**
**ಪೂರ್ವಾಭಾದ್ರಾವಸೂಸಿಂಹೌ ಪೂರ್ವಾಷಾಢಾಹರಿಃ ಕಪಿಃ ॥**

ಅಶ್ವಿನೀ, ಶತಭಿಷಕ್, ಈ ಎರಡೂ ಕುದುರೆ, ಭರಣೀ, ರೇವತೀ ಈ ೨ ಆನೆ, ಕೃತ್ತಿಕಾ,ಪುಷ್ಯ ಈ ೨ ಮೇಕೆ, ರೋಹಿಣೀ,ಮೃಗಶೀರ್ಷ ಈ ೨ ಸರ್ಪ, ಮೂಲ, ಆದ್ರಾ್ರ, ಈ ೨ ನಾಯಿ, ಮಖಾ, ಪೂಫ, ಈ ೨ ಇಲಿ, ಆಶ್ಲೇಷಾ, ಪುನರ್ವಸು, ಈ ೨ ಬೆಕ್ಕು; ಸ್ವಾತೀ, ಹಸ್ತ, ಈ ೨ ಎಮ್ಮೆ, ವಿಶಾಖ, ಚಿತ್ರಾ, ಈ ೨ ಹುಲಿ, ಜ್ಯೇಷ್ಠಾ, ಅನೂರಾಧಾ, ಈ ೨ ಹುಲ್ಲೆ, ಉತ್ತರಾ, ಉತ್ತರಾ ಭಾದ್ರಾ ಈ ೨ ಹಸುವು, ಅಭಿಜಿತ್, ಉಷಾ, ಈ ೨ ಮುಂಗುಸಿ; ಪೂಭಾ, ಧನಿಷ್ಠಾ, ಈ ೨ ಸಿಂಹ, ಪೂರ್ವಾಷಾಢಾ, ಶ್ರವಣ, ಈ ೨ ಕಪಿ.

**ಪುಂಸ್ತ್ರೀಪೂರ್ವವರೌಜ್ಞೇಯಾದಿಷ್ಣ್ಯಾನಾಂ ಯೋನಿಭೇದತಃ।**
**ಏಕಯೋನಿಷುಸಂಪತ್ತಿರ್ದಂಪತ್ಯೋಸ್ಸಂಗಮೇತಥಾ ।**
**ಭಿನ್ನಯೋನಿಷುಮಧ್ಯಂಸ್ಯಾದ್ವೈರಿಭಾವಂನಕಲ್ಪಯೇತ್ ।**
**ಸ್ತ್ರೀಣಾಂಸ್ತ್ರೀಭಿಶ್ಚಸಂಯೋಗೇ ವಿವಾಹೋಮಧ್ಯಮೋಮತಃ।**
**ಪುಂಸಾಂಪುಂಸಶ್ಚಸಂಯೋಗಸ್ಸದಾಶತ್ರುತ್ವಮಾಪ್ನುಯಾತ್ ॥**

ಇಲ್ಲಿ ಹೇಳಲ್ಪಟ್ಟ ಎರಡು ನಕ್ಷತ್ರಗಳಲ್ಲಿ ಮೊದಲನೇದು ಪುರುಷ ನಕ್ಷತ್ರವಾಗಿರಬೇಕು, ಹೀಗೆ ಯೋನಿಕೂಟ ನೋಡುವಾಗ ಸ್ತ್ರೀಪುರುಷರು ಒಂದೇ ಯೋನಿಯಾದರೆ ಉತ್ತಮ, ಶುಭ. ಇಬ್ಬರೂ ಬೇರೆ ಯೋನಿಯಾಗಿದ್ದರೆ ಮಧ್ಯಮವು, ಇಷ್ಟೇ ಹೊರ್ತು ವೈರಯೋನಿ ಎಂದಿಗೂ ಆಗದು ಸ್ತ್ರೀನಕತ್ರದಲ್ಲಿ ಹುಟ್ಟಿದ ಕನ್ಯೆಗೂ, ಅಂಥಾ ಪುರುಷನಿಗೂ, ವಿವಾಹವು ಶುಭವು; ಪುರುಷ ನಕ್ಷತ್ರದಲ್ಲಿ ಹುಟ್ಟಿದ ಸ್ತ್ರೀಪುರುಷರಿಗೆ ವಿವಾಹವು ವೈರವನ್ನುಂಟು ಮಾಡುತ್ತದೆ.

**ಗೋವ್ಯಾಘ್ರಂಗಜಸಿಂಹಮಶ್ವಮಹಿಷಂ ಶ್ವೈಣಂಚಬಭ್ರೂರಗಂ ।**
**ವೈರಂವಾನರಮೇಷಕಂಚ ಸುಮಹತ್ತದ್ವದ್ಬಿಡಾಲೋದುರಂ ॥**
**ಲೋಕಾನಾಂವ್ಯವಹಾರತೋನ್ಯದಪಿಚ ಜ್ಞಾತ್ವಾಪ್ರಯತ್ನಾಧಿಕಂ ।**
**ದಂಪತ್ಯೋರ್ನೃಪಭೃಯೋರಪಿಸದಾವರ್ಜಂಶುಭಂಸ್ಯಾದಿತಿ ॥**

ಗೋವಿಗೆ ಹುಲಿಯು, ಆನೆಗೆ ಸಿಂಹ, ಕುದುರೆಗೆ ಎಮ್ಮೆ, ನಾಯಿಗೆ ಹುಲ್ಲೆ, ಮುಂಗಸಿಗೆ ಹಾವು, ಕೋತಿಗೆ ಮೇಕೆ, ಬೆಕ್ಕಿಗೆ ಇಲಿ, ಈ ಮೇರೆ ಲೋಕವ್ಯವಹಾರದಿಂದ ಇನ್ನೂ ಇತರರುಗಳನ್ನೂ ತಿಳಿದು ದಂಪತಿಗಳಿಗೂ ಸ್ವಾಮಿಭೃತ್ಯರಿಗೂ ಇಂಥಾ ವೈರಯೋನಿಗಳನ್ನು ಬಿಟ್ಟರೆ ಶುಭವಹುದು.

## ರಾಶಿಕೂಟ

**ದ್ವಿಕೇದ್ವಾದಶಕೇಮೃತ್ಯುರಾಯುರ್ದ್ವಾದಶಕೇದ್ವಿಕೇ ।**
**ತೃತೀಯೈಕಾದಶೇದುಃಖ ಸುಖಮೇಕಾದಶೆತ್ರಿಕೆ ।**
**ಚತುರ್ಥದಶನಿಸ್ಸ್ವಂ ಧನಂದಶಚತುಷ್ಕಕೆ ॥**
**ಅಶುಭಂಪಂಚನವಮೇ ಶುಭಂತುನವಪಂಚಕೆ ।**
**ಷಷ್ಠಾಷ್ಟಕೆಪುತ್ರನಾಶಃ ಪುತ್ರಲಾಭೋಷ್ಟಷಷ್ಠಕೆ ।**
**ಸಮಸಪ್ತೇತುಮಾಂಗಲ್ಯಂ ದಂಪತ್ಯೋಃ ಪ್ರೀತಿವರ್ಧನಂ ॥**

ಸ್ತ್ರೀಜನ್ಮರಾಶಿಗೆ ಪುರುಷನ ಜನ್ಮರಾಶಿಯು ೨ನೆಯದಾದರೆ ಮೃತ್ಯುವು, ಪುರುಷರಾಶಿಗೆ ಸ್ತ್ರೀರಾಶಿಯು ೧೨ನೇಯದಾದರೂ ಮೃತ್ಯುವು, ಸ್ತ್ರೀರಾಶಿಗೆ ಪುರುಷರಾಶಿಯು ೧೨ನೆಯದಾದರೂ ಪುರುಷರಾಶಿಗೆ ಸ್ತ್ರೀರಾಶಿ೨ನೆಯದಾದರೂ ದೀರ್ಘಾಯುಷ್ಯವು, ಸ್ತ್ರೀರಾಶಿಗೆ ಪುರುಷರಾಶಿ ೩ನೇಯದಾದರೂ ಪುರುಷ ರಾಶಿಗೆ ಸ್ತ್ರೀರಾಶಿ ೧೧ನೆಯದಾದರೂ ದುಃಖವು. ಸ್ತ್ರೀರಾಶಿಗೆ ಪುರುಷರಾಶಿ ೧೧ನೆಯದಾದರೂ ಪುರುಷರಾಶಿಗೆ ಸ್ತ್ರೀರಾಶಿ ೩ನೆಯದಾದರೂ ಸುಖವು. ಸ್ತ್ರೀರಾಶಿಗೆ ಪುರುಷರಾಶಿಯು ೪ನೆಯದಾದರೂ ಪುರುಷರಾಶಿಗೆ ಸ್ತ್ರೀರಾಶಿಯು ೧೦ನೆಯದಾದರೂ ದಾರಿದ್ರ್ಯವು. ಪುರುಷರಾಶಿಗೆ ಸ್ತ್ರೀರಾಶಿಯು ೧೦ನೆಯ ದಾದರೂ ಧನವುಂಟಾಗುವುದು. ಸ್ತ್ರೀರಾಶಿಗೆ ಪುರುಷರಾಶಿಯು ೫ನೆಯ ದಾಗಿಯೂ ಪುರುಷರಾಶಿಗೆ ಸ್ತ್ರೀರಾಶಿ ೯ನೆಯದಾಗಿಯೂ ಇದ್ದರೆ ಅಶುಭವು. ಸ್ತ್ರೀರಾಶಿಗೆ ಪುರುಷರಾಶಿಯು ೯ನೆಯದಾಗಿಯೂ ಪುರುಷರಾಶಿಗೆ ಸ್ತ್ರೀರಾಶಿ ೫ನೆಯದಾಗಿಯೂ ಇದ್ದರೆ ಶುಭವು. ಸ್ತ್ರೀರಾಶಿಗೆ ಪುರುಷರಾಶಿ ೬ನೆಯ ದಾಗಿಯೂ ಪುರುಷರಾಶಿಗೆ ಸ್ತ್ರೀರಾಶಿ ೮ನೆಯದಾಗಿಯೂ ಇದ್ದರೆ ಪುತ್ರನಾಶವು. ಸ್ತ್ರೀರಾಶಿಗೆ ಪುರುಷರಾಶಿ ೮ನೆಯದಾಗಿಯೂ ಪುರುಷರಾಶಿಗೆ ಸ್ತ್ರೀರಾಶಿ ೬ನೆಯ ದಾದರೂ ಪುತ್ರಲಾಭವು. ಸ್ತ್ರೀಪುರುಷರಾಶಿಗಳೆರಡೂ ಸಮಸಪ್ತಮಗಳಾಗಿ ಇದ್ದರೆ ಸೌಮಂಗಲ್ಯವೂ, ದಂಪತಿಗಳಿಗೆ ಪರಸ್ಪರ ಪ್ರೀತಿಯುಂಟಾಗುವದು.

## ಅಪವಾದವು

**ಓಜಾಲಯಸ್ತ್ರಿಯೋಯತ್ರ ಮಿತ್ರಂಷಷ್ಠಾಷ್ಟಮಂವದೇತ್ ।**
**ಯುಗ್ಮೇದ್ವಿದ್ವಾದಶಂಚೈವ ದಂಪತ್ಯೋಶ್ಶುಭದಂಭವೇತ್ ॥**

ಸ್ತ್ರೀರಾಶಿಯು ಓಜರಾಶಿಯಾದರೆ ಅದಕ್ಕೆ ೬-೮ನೇ ರಾಶಿಗಳಿಗೆ ಮಿತ್ರತ್ವ ಉಂಟಾಗುವುದು, ಮತ್ತು ಯುಗ್ಮರಾಶಿಯಲ್ಲಿ ಹುಟ್ಟಿದ ಸ್ತ್ರೀಗೆ ೨-೧೨ನೇ ರಾಶಿ ಗಳು ದಂಪತಿಗಳಿಗೆ ಶುಭಕರವಾಗುವುದು.

## ಅಪವಾದವು

**ದ್ವಿದ್ವಾದಶೇವಾನವಪಂಚಮೇವಾ ಷಷ್ಠಾಷ್ಟಕೇರಾಕ್ಷಸಕನ್ಯ ಕಾಯೋಃ । ಏಕಾಧಿಪತ್ಯೇಪ್ಯುಭಯೋಸ್ಸುಹೃತ್ವೇ ಪಾಣಿಗ್ರಹೋ ಮಂಗಳಮಾತನೋತಿ ॥**

೨-೧೨ನೇ ರಾಶಿಗಳಲ್ಲಾದರೂ, ೯-೫ನೇ ರಾಶಿಗಳಲ್ಲಾದರೂ, ೬-೮ ನೇ ರಾಶಿಗಳಲ್ಲಾದರೂ ಕನ್ಯೆಯು ರಾಕ್ಷಸಗಣದವಳಾಗಿದ್ದರೂ, ಆಯಾ ಎರಡೆರಡು ರಾಶಿಗಳ ಅಧಿಪತಿಯೊಬ್ಬನೆಯಾದರೂ, ಬೇರೆಬೇರೆ ಗ್ರಹಗಳಧಿಪತಿಗಳಾಗಿ ದ್ದಾಗ್ಯೂ, ಅವರಿಗೆ ಮಿತ್ರತ್ವವುಂಟಾಗಿದ್ದರೂ, ಆ ಸ್ತ್ರೀ ಪುರುಷರಿಗೆ ಮದುವೆ ಶುಭಕರವಹುದು.

**ತೃತೀಯೈಕಾದಶೌಯತ್ರ ಚತುರ್ಥದಶಮಾವಪಿ ।**
**ಉಭಯೋಸ್ಸಪ್ತಮಸ್ತತ್ರ ಗ್ರಹಮೈತ್ರಂನಶೋಧಯೇತ್ ॥**

ಯಾವ ದಂಪತಿಗಳು ಪರಸ್ಪರ ಒಂದೇ ರಾಶಿಯಲ್ಲಿ ಹುಟ್ಟಿದ್ದಾರೋ ಅಥವಾ ಪರಸ್ಪರ ಸಮಸಪ್ತಮ ರಾಶಿಗಳಲ್ಲಿ ಹುಟ್ಟಿದ್ದಾರೋ ಅಂಥವರಿಗೆ ಗ್ರಹ ಮೈತ್ರಕೂಟವನ್ನು ಪರಿಶೋಧಿಸತಕ್ಕದ್ದಲ್ಲ.

## ವರ್ಣಕೂಟವು

**ಝುಷಾಳಿಕರ್ಕಟಾವಿಪ್ರಾಃ ಕ್ಷತ್ರಾಸ್ಸಿಂಹಧನುಸ್ತುಲಾಃ ।**
**ಮೇಷಯುಗ್ಮಘಟಾವೈಶ್ಯಾಶ್ಶೂದ್ರಾವೃಷಮೃಗಾಂಗನಾಃ ॥**

ಮೀನ, ವೃಶ್ಚಿಕ, ಕರ್ಕಾಟಕಗಳು ಬ್ರಾಹ್ಮಣ ಜಾತಿಯು; ಸಿಂಹ, ಧನುಸ್ಸು, ತುಲೆಗಳು ಕ್ಷತ್ರಿಯ ಜಾತಿಯು; ಮೇಷ, ಮಿಥುನ, ಕುಂಭಗಳು ವೈಶ್ಯಜಾತಿಯು, ವೃಷಭ, ಕನ್ಯಾ, ಮಕರಗಳು ಶೂದ್ರಜಾತಿಯು.

**ವರ್ಣಶ್ರೇಷ್ಠಾಂವಣಂಹೀನಂ ವಿವಾಹಂನೈವಕಾರಯೇತ್ ।**
**ಯದಿಕುರ್ಯಾತ್ತುಮೋಹೇನ ಸದ್ಯೋಭರ್ತಾವಿನಶ್ಯತಿ ॥**

ಉತ್ತಮಜಾತಿಯ ನಕ್ಷತ್ರದವಳಾದ ಕನ್ಯೆಗೂ, ಹೀನಜಾತಿ ನಕ್ಷತ್ರದ ಪುರುಷನಿಗೂ ಮದುವೆಯಾಗಕೂಡದು, ಒಂದು ವೇಳೆ ಅಜ್ಞಾನದಿಂದ ಮಾಡಿ ದರೆ ತಕ್ಷಣವೇ ಪುರುಷನು ನಾಶವನ್ನು ಹೊಂದುವನು.

## ವಶ್ಯಕೂಟವು

**ಸಿಂಹಾಳೀಕರ್ಕಿವಣಿಜೌ ಕನ್ಯಾವೃಶ್ಚಿಕಕಾರ್ಮುಕೌ ।**
**ತುಲಾಮೀನಯುಮೌ ನಕ್ರಕನ್ಯೇಕರ್ಕಟಕಸ್ತ್ರಿಮಿಃ ।**
**ಮೇಷಕುಂಭಾವಜೋನಕ್ರರ್ಮೇಷಾದೇರ್ವಶ್ಯರಾಶಯಃ ॥**

ಮೇಷರಾಶಿಗೆ ಸಿಂಹ, ವೃಶ್ಚಿಕಗಳು, ವೃಷಭಕ್ಕೆ ಕಟಕ ತುಲೆಗಳು;

ಮಿಥುನಕ್ಕೆ ಕನ್ಯೆಯು, ಕಟಕಕ್ಕೆ ವೃಶ್ಚಿಕ, ಧನುಸ್ಸು, ಸಿಂಹಕ್ಕೆ ತುಲೆಯು, ಕನ್ಯೆಗೆ ಮೀನ ಮಿಥುನಗಳು, ತುಲೆಗೆ ಮಕರ, ಕನ್ಯೆಗಳು, ವೃಶ್ಚಿಕಕ್ಕೆ ಕಟಕವು ಧನುಸ್ಸಿಗೆ ಮೀನವು, ಮಕರಕ್ಕೆ ಮೇಷ ಕುಂಭಗಳು, ಕುಂಭಕ್ಕೆ ಮೇಷವು ಮೀನಕ್ಕೆ ಮಕರವು, ಈ ಮೇರೆ ಈ ರಾಶಿಗಳಿಗೆ ಈ ರಾಶಿಗಳು ವಶ್ಯಗಳು.

**ವಶ್ಯಯೋಗಾಚ್ಛುಭಂಪ್ರೋಕ್ತಂಸ್ತ್ರೀರಾಶೇಃ ಪುರುಷಸ್ಯಚ ||**
**ಕನ್ಯಕಾವರಯೋರ್ನಿತ್ಯಂ ಶೋಧಯೆನ್ನೃಪಭೃತ್ಯಯೋಃ ||**

ಸ್ತ್ರೀಪುರುಷರ ರಾಶಿಗಳು ವಶ್ಯಗಳಾಗಿ ಇದ್ದರೆ ಶುಭವು, ಹೀಗೆಯೇ ಅರಸನಿಗೂ ಭೃತ್ಯರಿಗೂ ವಶ್ಯಕೂಟವು ನೋಡಿಕೊಳ್ಳತಕ್ಕದ್ದು

## ಗ್ರಹಮೈತ್ರಂ

**ಶತ್ರೂಮಂದಸಿತೌ ಸಮಶ್ಶಿಸುತೋ ಮಿತ್ರಾಣಿಶೇಷಾರವೇಃ |**
**ಸ್ತೀಕ್ಷ್ಣಾಂಶುರ್ಹಿಮರಶ್ಮಿಜಶ್ಚ ಸುಹೃದೌಶೇಷಾಸ್ಸಮಾಶ್ಶೀತಗೋಃ**
**ಜೀವೇಂದೂಷ್ಣಕರಾಃ ಕುಜಸ್ಯಸುಹೃದೋಜ್ಞೋರಿಸ್ಸಿ**
**ತಾರ್ಕಿಸಮೌ |**
**ಮಿತ್ರೇಸೂರ್ಯಸಿತೌ ಬುಧಸ್ಯ ಹಿಮಗೌಶ್ಶತೃಸ್ಸಮಾಶಾ ಪರೆ ||**
**ಸೂರೇಸೌಮ್ಯಸಿತಾವರೀ ರವಿಸುತೋಸೌಹಾರ್ದಮನ್ಯೇಪಿವಾ |**
**ಸೌಮ್ಯಾರ್ಕೀಸುಹೃದೌ ಸಮೌಕುಜಗುರೂ ಶುಕ್ರಸ್ಯಶೇಷಾವರೀ |**
**ಶುಕ್ರಜ್ಞಾಸುಹೃದೌ ಸಮಸ್ಸುರಗುರುಸೌರಸ್ಯಚಾನ್ಯೇರಯೋಃ |**
**ಯೇಪ್ರೋಕ್ತಾ ಸುಹೃದಸ್ತ್ರಿಕೋಣಭವನಾತ್ತೇಮಿಮಯಾ**
**ಕೀರ್ತಿತಾಃ ||**

ಸೂರ್ಯನಿಗೆ ಶನಿ ಶುಕ್ರರು ಶತೃಗಳು, ಬುಧನು ಸಮನು, ಕಡಮೆ ಯವರು ಮಿತ್ರರು; ಚಂದ್ರನಿಗೆ ಸೂರ್ಯನು ಬುಧನು ಸಹ ಮಿತ್ರರು, ಕಡಮೆ ಯವರು ಸಮರು, ಕುಜನಿಗೆ ಗುರು ಚಂದ್ರ ಸೂರ್ಯರು ಮಿತ್ರರು, ಬುಧನು ಶತೃವು, ಅನ್ಯರು ಸಮರು, ಬುಧನಿಗೆ ರವಿ ಶುಕ್ರರು ಮಿತ್ರರು, ಚಂದ್ರನು ಶತೃವು, ಅನ್ಯರು ಸಮರು; ಗುರುವಿಗೆ ಬುಧ ಶುಕ್ರರು ಶತೃಗಳು, ಶನಿಯು ಸಮನು, ಅನ್ಯರು ಮಿತ್ರರು, ಶುಕ್ರನಿಗೆ ಬುಧ ಶನಿಗಳು ಮಿತ್ರರು, ಕುಜ ಗುರು ಗಳು ಸಮರು, ಮಿಕ್ಕವರು ಶತೃಗಳು, ಶನಿಗೆ ಶುಕ್ರ ಬುಧರು ಮಿತ್ರರು, ಗುರು ಸಮನು, ಮಿಕ್ಕವರು ಶತೃಗಳೆಂದು ತಿಳಿಯುವದು.

**ಉತ್ತಮೋಮಿತ್ರವರ್ಗಸ್ಸ್ಯಾತ್ಸಮತ್ರಸ್ತುಮಧ್ಯಮಃ ।**
**ಕನಿಷ್ಠಸ್ಸಮವರ್ಗಸ್ತು ವೈರಿವರ್ಗಸ್ತುಮಾರಕಃ ॥**

ವಿವಾಹದಲ್ಲಿ ಎರಡು ಮಿತ್ರವರ್ಗವಾಗಿದ್ದರೆ ಉತ್ತಮವು, ಒಂದು ಮಿತ್ರ ಮತ್ತೊಂದು ಸಮವಾಗಿದ್ದರೆ ಮಧ್ಯಮವು, ಎರಡೂ ಮಧ್ಯಮವಾಗಿದ್ದರೆ ಅಧಮ, ಎರಡೂ ವೈರಿವರ್ಗವಾಗಿದ್ದರೆ ಮಾರಕವು

**ಕಲಹಃಶತ್ರುಮಿತ್ರತ್ವೆ ವಿಯೋಗಸ್ಸಮಶತ್ರುಕೇ ।**
**ಅಂಶನಾಯಕಯೋಃ ಪ್ರೀತಾವುತ್ತಮಮ್ಪಾಣಿಪೀಡನೇ ॥**

ಎರಡರಲ್ಲಿ ಒಂದು ಶತ್ರುವಾಗಿಯೂ ಒಂದು ಮಿತ್ರವಾದರೆ ದಂಪತಿಗಳಿಗೆ ಕಲಹವುಂಟಾಗುವುದು, ಶತ್ರುಸಮಗಳಾಗಿದ್ದರೆ ದಂಪತಿಗಳು ಸೇರದೇ ಇರುವರು, ಸ್ತ್ರೀಪುರುಷರ ರಾಶ್ಯಾಧಿಪತಿಗಳಿಗೆ ಮಿತ್ರತ್ವವಿಲ್ಲದಿದ್ದರೂ ಅಂಶಾಧಿಪತಿಗಳಿಗೆ ಮಿತ್ರತ್ವವಿದ್ದಲ್ಲಿ ವಿವಾಹವು ಶುಭಕರವು.

## ರಜ್ಜುಕೂಟವು

**ವಿಧುಬಿಂಬತ್ರಯಂಚೈವ ತಿರ್ಯಗ್ರೇಖಾಚತುಷ್ಟಯಂ ।**
**ಅಶ್ವಿನ್ಯಾದೀನಿಧಿಷ್ಣ್ಯಾನಿ ವಾಮಪಾರ್ಶ್ವಾದಿವಿನ್ಯಸೇತ್ ॥**

ದೀರ್ಘವೃತ್ತಗಳಾದ ಮೂರು ಮಂಡಲಗಳನ್ನು ಬರೆದು ಅವುಗಳ ಮೇಲೆ ೪ ಅಡ್ಡಗೆರೆಗಳನ್ನು ಹಾಕಿ ಅವುಗಳಲ್ಲಿ ಎಡಗಡೆ ರೇಖೆಯ ಮೊದಲು ಅಶ್ವಿನ್ಯಾದಿಯಾಗಿ ನಕ್ಷತ್ರಗಳನ್ನು ಬರಿಯತಕ್ಕದ್ದು.

**ಶಿರಃಕಂಠೋದರಃಕಟೀ ಪಾದರೇಖಾದಿಭೇದತಃ ॥**
**ಏಕರೇಖಾಭವೇನ್ನಾಶೋ ಭಿನ್ನರೇಖಾಶುಭಾವಹಃ ॥**

ಶಿರಸ್ಸಿನ ರೇಖೆ, ಕಂಠರೇಖೆ, ಉದರರೇಖೆ, ಕಟೀರೇಖೆ, ಪಾದರೇಖೆ, ಹೀಗೆ ರೇಖೆಗಳ ಮೇಲೆ ನಕ್ಷತ್ರಗಳನ್ನು ಬರಿಯುವಾಗ ಹೆಣ್ಣು ಗಂಡುಗಳ ನಕ್ಷತ್ರಗಳೊಂದೇ ರೇಖೆಯಲ್ಲಿದ್ದರೆ ನಾಶವು, ಬೇರೆ ರೇಖೆಗಳಲ್ಲಿ ಇದ್ದರೆ ಶುಭ ಉಂಟಾಗುವದು

**ಅಶ್ವಿಸಾರ್ಪಮಖಾಜ್ಯೇಷ್ಠಾ ಮೂಲಾಂತ್ಯಂಪೌದರಜ್ಜವಃ ॥**
**ಯಮಾರ್ಯಭಾಗ್ಯಮೈತ್ರಾಪ್ಯ ಮಹಿಂಬುರ್ಧ್ನ್ಯಾಃಕಟೀರಿತಾಃ ॥**
**ಅಗ್ನ್ಯಾದಿತ್ಯಾರ್ಯಮಾಶೂರ್ಪ ವಿಶ್ವಪ್ರೋಷ್ಠಪದೋದರೆ ।**

**ಬ್ರಹ್ಮರುದ್ರಕರಸ್ವಾತಿ ಶ್ರವಣಂ ವಾರುಣಂತಥಾ ।**
**ಕಂಠರಜ್ಜು ರ್ದ್ವಿಜಾನೀಯಾದ್ವಸುಚಿತ್ರೇಂದುಮಸ್ತಕಂ ॥**

ಅಶ್ವಿನೀ, ಆಶ್ಲೇಷಾ, ಮಖಾ, ಜ್ಯೇಷ್ಠಾ, ಮೂಲ, ರೇವತೀ, ಈ ಆರು ನಕ್ಷತ್ರಗಳು ಪಾದರಜ್ಜುಗಳು, ಭರಣೀ, ಪುಷ್ಯ, ಪುಬ್ಬ, ಅನೂರಾಧಾ, ಪೂಷಾ, ಉಭಾ, ಈ ೬ ನಕತ್ರಗಳು ಕಟಿರಜ್ಜುಗಳು, ಕೃತ್ತಿಕಾ, ಪುನರ್ವಸು, ಉತ್ತರಾ, ಫಲ್ಗುನೀ, ವಿಶಾಖಾ, ಉಷಾ, ಪೂರ್ವಾಭಾದ್ರ, ಈ ೬ ಉದರರಜ್ಜುಗಳು, ರೋಹಿಣಿ, ಆರ್ದ್ರಾ, ಹಸ್ತ, ಸ್ವಾತಿ, ಶ್ರವಣ, ಶತಭಿಷಕ್ ಈ ೬ ಕಂಠರಜ್ಜು ಗಳು, ಧನಿಷ್ಠಾ, ಚಿತ್ರಾ, ಮೃಗಶೀರ್ಷ, ಈ ಮೂರು ನಕ್ಷತ್ರಗಳು ಶಿರೋ ರಜ್ಜುಗಳು

## ಏಕರೇಖಾ ರಜ್ಜುಫಲವು

**ಮುಖೇಪತಿಂಗಳೇಕನ್ಯಾಂ ಕುಕ್ಷೌ ಸ್ವಸ್ಯಾತ್ಮಜಾ಼ಹರೇತ್ ।**
**ದರಿದ್ರತಾಭವೇತ್ಕಟ್ಯಾಂ ಪಾದೇವಾಭ್ರಮಣಂತಥಾ ॥**

ವಧೂವರರ ನಕ್ಷತ್ರಗಳು ಶಿರಸ್ಸಿನರೇಖೆಯಲ್ಲಿ ಪತಿಯನ್ನೂ, ಕಂಠರಜ್ಜು ವಿನಲ್ಲಿ ಬಂದರೆ ಕನ್ಯೆಯನ್ನೂ, ಉದರರಜ್ಜುವಿನಲ್ಲಾದರೆ ದಂಪತಿಗಳ ಮಕ್ಕ ಳನ್ನು ನಾಶಮಾಡುವುದು, ಸೊಂಟದ ರಜ್ಜುವಲ್ಲಿ ಬಂದರೆ ದಾರಿದ್ರ್ಯ ಉಂಟಾ ಗುವುದು, ಪಾದರಜ್ಜುವಲ್ಲಿ ಬಂದರೆ ಅವರು ತಿರುಗುತ್ತಲಿರುವರು.

## ವೇಧಾಕೂಟವು

**ಅಶ್ವಾದಿಮೂಲಾದಿಮುಖಾದಿಭಾನಾಂ ಕ್ರಮಾಚ್ಚತುರ್ಣ್ಣಾಮಪಿವೇ ಧಿತಾಸ್ಯುಃ । ಪುರಾಣರಾಜಾಮುನುಭಾನುಸಂಖ್ಯಯಾಚಾನ್ಯೋ ನ್ಯವೇಧಾವಸುಸೋಮಚಿತ್ರಾಃ ॥**

ಅಶ್ವಿನಿಗೆ ೧೮ನೇ ನಕ್ಷತ್ರಕ್ಕೂ, ಭರಣಿಗೆ ೧೬ನೇ ನಕ್ಷತ್ರಕ್ಕೂ, ಕೃತ್ತಿ ಕೆಗೆ ೧೪ನೇ ನಕ್ಷತ್ರಕ್ಕೂ, ರೋಹಿಣಿಗೆ ೧೨ನೇ ನಕ್ಷತ್ರಕ್ಕೂ ವೇಧೆಯುಂಟಾ ಗಿರುವದರಿಂದ ಅವು ವೇಧಾನಕ್ಷತ್ರಗಳು ಇವುಗಳಲ್ಲಿ ಮದುವೆ ಮಾಡಕೂಡದು, ಈ ಪ್ರಕಾರವೇ ಅಶ್ವಿನಿ ಮೊದಲು ೪ ನಕ್ಷತ್ರಗಳಿಗೂ ಮೂಲ ಮೊದಲು ೪ ನಕ್ಷತ್ರಗಳಿಗೂ ಮಖೆ ಮೊದಲು ೪ ನಕ್ಷತ್ರಗಳಿಗೂ ವೇಧೆಯುಂಟು. ಧನಿಷ್ಠಾ, ಮೃಗಶಿರ ಚಿತ್ರಾ ೩ ಈ ನಕ್ಷತ್ರಗಳಿಗೂ ಪರಸ್ಪರ ವೇಧೆಯುಂಟು.

ವಿದ್ಧಾಶ್ಚೈವಪರಸ್ಪರಂಯದಿಭವೇತ್ತಾರಾವಿವಾಹೇತದಾ ।
ಸ್ಯಾಚ್ಛೀಘ್ರಂಯಮರಾಜಪುಣ್ಯಲಲನಾ ಸಂಗಾಂಗಭೋಗೋವರಃ ॥

ವಿವಾಹದಲ್ಲಿ ಸ್ತ್ರೀಪುರುಷ ನಕ್ಷತ್ರಗಳು ಪರಸ್ಪರ ವಿರುದ್ಧಗಳಾಗಿದ್ದರೆ ಮದವಣಿಗನಿಗೆ ಶೀಘ್ರವಾಗಿ ಯಮರಾಯನ ದರ್ಶನ ಉಂಟಾಗುವುದು.

## ನಾಡೀಕೂಟ

ಚತುರ್ನಾಡೀತುಬಾಹ್ಲೀಕೇ ಪಾಂಚಾಲೇಪಂಚಪರ್ವಭಿಃ ।
ಅನ್ಯದೇಶೇತ್ರಿನಾಡೀಸ್ಯಾನ್ನಾಡೀಮುಖ್ಯಾಕರಗ್ರಹೇ ॥

ಬಾಹ್ಲೀಕ ದೇಶದಲ್ಲಿ ನಾಲ್ಕು ಪರ್ವಗಳಿಂದಲೂ, ಪಾಂಚಾಲದೇಶದಲ್ಲಿ ಪಂಚಪರ್ವಗಳಿಂದಲೂ, ಇತರ ದೇಶಗಳಲ್ಲಿ ಮೂರು ಪರ್ವಗಳಿಂದಲೂ ನಾಡೀ ಕೂಟವನ್ನು ವಿಚಾರಿಸತಕ್ಕದ್ದು ನಾಡೀಕೂಟವೆಂಬುವದು ವಿವಾಹ ದಲ್ಲಿ ಅವಶ್ಯಕವಾದುದು.

ನಾಡ್ಯಸ್ತಿಸ್ರಸ್ತ್ರ್ಯಕ್ತನಿಶ್ಯೇಷಧಿಷ್ಣ್ಯ ಸ್ತ್ರೀಭ್ಯೋಽಶ್ವಿನ್ಯಾದಿಭ್ಯ ಏವಪ್ರಶಸ್ತಾಃ । ಸರ್ವಾಕಾರತತ್ರನಾಡೀಸಮಾಯಾಂ ನಕ್ಷತ್ರಾ ಣಾಮೇಕನಾಡೀವ್ಯತಿಸ್ಯಾತ್ ॥

ಅಶ್ವಿನೀ ಮೊದಲಾಗಿ ನಕ್ಷತ್ರಗಳನ್ನು ಬೆರಳುಗಳ ಪರ್ವಗಳ ಮೇಲೆ ಮೂರು ಮೂರು ನಾಡಿಗಳಾಗಿ ಆರೋಹಾವರೋಹಣ ಕ್ರಮದಿಂದ ಎಣಿಸು ವಾಗ ಆ ಮೂರು ನಾಡಿಗಳೊಳು ಒಂದೇ ನಾಡಿಯಲ್ಲಿ ಸ್ತ್ರೀಪುರುಷರ ನಕ್ಷತ್ರ ಗಳೆರಡು ಸೇರಿದರೆ ಅಂಥಾ ಕನ್ಯೆಯನ್ನು ಬಿಟ್ಟುಬಿಡತಕ್ಕದ್ದು. ಹಾಗಿಲ್ಲದೆ ಸ್ತ್ರೀನಕ್ಷತ್ರ ಒಂದು ನಾಡಿಯಲ್ಲೂ, ಪುರುಷ ನಕ್ಷತ್ರ ಮತ್ತೊಂದು ನಾಡಿಯಲ್ಲೂ ಇದ್ದರೆ ಆ ವಿವಾಹವು ಶುಭಕರವಹುದು.

ಬ್ರಹ್ಮಕ್ಷತ್ರವಿಶಾಂನಾಡ್ಯೋ ಮಧ್ಯದಕ್ಷಿಣವಾಮತಃ ।
ಬ್ರಾಹ್ಮಣಾದೇರ್ವಿಶೇಷೇಣ ಮಧ್ಯನಾಡ್ಯಾದಿನಿಂದಿತಂ ॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಧ್ಯ ದಕ್ಷಿಣ ವಾಮನಾಡಿಗಳು, ನಿರ್ಣೀತಗಳು, ಹೇಗೆಂದರೆ :—ಬ್ರಾಹ್ಮಣರಿಗೆ ಮಧ್ಯನಾಡಿ ಎಂಬದಾಗಿಯೂ, ಕ್ಷತ್ರಿಯರಿಗೆ ದಕ್ಷಿಣನಾಡಿ ಎಂಬದಾಗಿಯೂ ವೈಶ್ಯರಿಗೆ ವಾಮನಾಡಿ ಎಂಬದಾ ಗಿಯೂ ತಿಳಿಯತಕ್ಕದ್ದು. ಮತ್ತು ಬ್ರಾಹ್ಮಣರು ಮುಂತಾದವರಿಗೆ ವಿಶೇಷ ವಾಗಿ ಮಧ್ಯನಾಡಿಯೇ ನಿಷೇಧಿಸಲ್ಪಟ್ಟಿರುತ್ತದೆ.

**ಸಾಮುಧ್ಯನಾಡೀಪುರುಷಂನಿಹಂತಿ ತತ್ಪಾರ್ಶ್ವನಾಡೀಖಲುಕನ್ಯ ಕಾಂಚ । ಆಸನ್ನಪರ್ಯಾಯಗತಾಸ್ಸಮಾಚೇದ್ವರ್ಷೇಣ ವಾಚ್ಯಂ ಕ್ರಮಶಸ್ತ್ರಿವರ್ಷೈಃ ॥**

ಮಧ್ಯನಾಡಿಯು ಪುರುಷ ನಾಶಕರವು, ಪಾರ್ಶ್ವನಾಡಿ ಕನ್ಯೆಗೆ ನಾಶ ಕರವು, ಮೊದಲನೇ ಪರ್ಯಾಯದಲ್ಲಿ ಸಮನಾಡಿಯಾದರೆ ಒಂದನೇ ವರ್ಷದಲ್ಲೇ ನಾಶಕರವು ಎರಡನೇ ಪರ್ಯಾಯದಲ್ಲಿ ಎರಡನೇ ವರುಷದಲ್ಲಿ, ೩ನೇ ಪರ್ಯಾ ಯದಲ್ಲಿ ೩ನೇ ವರುಷದಲ್ಲಿ ಎಂದು ಕ್ರಮವಾಗಿ ತಿಳಿಯತಕ್ಕದ್ದು.

## ರಜ್ಜು ಕೂಟಾಪವಾದವು

**ರಜ್ಜೋರಭಾವೋಯದ್ಯಸ್ತಿರಾಶಿಶ್ಚಗ್ರಹಮೈತ್ರಕಂ ।**
**ದಿನಮಾಹೇಂದ್ರಯುಕ್ತೋಪಿ ರಜ್ಜು ದೋಷೋನವಿದ್ಯತೇ ॥**

ರಾಶಿಕೂಟವು, ಗ್ರಹಮೈತ್ರವು, ದಿನ, ಮಾಹೇಂದ್ರ, ಈ ನಾಲ್ಕು ಕೂಟ ಗಳೂ ಇದ್ದರೆ ರಜ್ಜುಕೂಟ ಇಲ್ಲದಿದ್ದರೂ ದೋಷವಿಲ್ಲ.

**ಅಹಿರ್ಬುಧ್ನ್ಯದ್ವಯೇಚೈವ ಪ್ರಾಜಾಪ್ರತ್ಯತ್ರಯೇತಥಾ ।**
**ಶ್ರುತಿಪುಷ್ಯವಿಶಾಖಾಸು ನಾಡೀದೋಷೋನ್ಯವಿದ್ಯತೇ ॥**

ಉಭಾ, ರೇವತಿ, ರೋಹಿಣೀ, ಮೃಗಶಿರ, ಆರ್ದ್ರಾ, ಶ್ರವಣ, ಪುಷ್ಯ, ವಿಶಾಖಾ ಈ ನಕ್ಷತ್ರಗಳಿಗೆ ನಾಡೀ ದೊಷವಿಲ್ಲ, ಅಂದರೆ ಇಂಥಾ ಸ್ತ್ರೀಪುರುಷ ನಕ್ಷತ್ರಗಳೊಂದು ನಾಡಿಯಲ್ಲಿದ್ದರೂ ದೋಷವಿಲ್ಲ.

## ಅಂಶನಾಡೀ ದೋಷಪ್ರಕಾರವು

**ನಕ್ಷತ್ರಾದಂಶತೋನಾಡೀಕೂಟಂಸಾಮಾನ್ಯಮುಚ್ಯತೇ ।**
**ನಕ್ಷತ್ರಪಾದಭೇದೇನ ನಾಡೀಮುಖ್ಯಾಕರಗ್ರಹೇ ॥**

ನಕ್ಷತ್ರಗಳಿಂದಲೂ, ನಕ್ಷತ್ರಪಾದಗಳಿಂದಲೂ, ನಾಡೀಕೂಟವನ್ನು ನೋಡತಕ್ಕದ್ದು ಸಾಮಾನ್ಯವು ವಿವಾಹದಲ್ಲಿ ನಕ್ಷತ್ರದಿಂದ ನಕ್ಷತ್ರಪಾದವು ಮುಖ್ಯವು.

**ದಸ್ರಾದ್ಯಂಶಾಸ್ತುವಿಜ್ಞೇಯಾ ಅಷ್ಟೋತ್ತರಶತಂಕ್ರಮಾತ್ ।**
**ಪೂರ್ವಂನಕ್ಷತ್ರಸಂಖ್ಯಾವದ್ಗಣಯೇದಂಶನಾಡಿಕಾಃ ॥**

ಅಶ್ವಿನೀ ಮೊದಲು ೨೭ ನಕ್ಷತ್ರಗಳಿಗೆ ೧೦೮ ಪಾದಗಳಾಗುತ್ತವೆ ಮೊದಲು ನಕ್ಷತ್ರಗಳಿಂದ ನಾಡಿಗಳನ್ನೆಣಿಸಿದಂತೆ ನಕ್ಷತ್ರಪಾದಗಳನ್ನು ಎಣಿಸ ತಕ್ಕದ್ದು.

## ನಾರದೀಯೆ

**ಚತುಸ್ತ್ರೀದ್ವ್ಯಂಘ್ರಿಹೋದ್ವಾಯಾಃ ಕನ್ಯಾಯಾಃ ಕ್ರಮಶೋಽಶ್ವಿ ಭಾಕ್ । ವಹ್ನಿಭಾಗಿಂದುಭಾಜ್ನಾಡೀತ್ರಿಚತುಃಪಂಚಪರ್ವಸು ॥**

ನಾಲ್ಕು ಪಾದವುಳ್ಳ ನಕ್ಷತ್ರದಲ್ಲಿ ಹುಟ್ಟಿದ ಕನ್ಯೆಗೆ ಅಶ್ವಿನೀ ಮೊದಲಾದ ಮೂರುನಾಡೀ ಪರ್ವಗಳಲ್ಲಿಯೂ ತ್ರಿಪಾದ ನಕ್ಷತ್ರದಲ್ಲಿ ಹುಟ್ಟಿದವಳಿಗೆ ಕೃತ್ತಿಕೆ ಮೊದಲಾ ನಾಲ್ಕು ನಾಡೀ ಪರ್ವಗಳಲ್ಲಿಯೂ, ದ್ವಿಪಾದ ನಕ್ಷತ್ರಗಳಲ್ಲಿ ಹುಟ್ಟಿದವಳಿಗೆ ಮೃಗಶಿರ ಮೊದಲು ಐದು ನಾಡಿಗಳ ಪರ್ವಗಳಲ್ಲೂ ನಾಡಿ ಎಣಿಸಬೇಕು.

## ಮಾತುಲ ಕನ್ಯಾ ವಿವಾಹವು

**ರಾಶೀಶತ್ರುತ್ವಮಥೈಕನಾಡೀ ಷಷ್ಠಾಷ್ಟಮಂವಾ ನವಪಂಚಮಂ ವಾ । ಕರಗ್ರಹೇ ಮಾತುಲಕನ್ಯಕಾಯಾಶ್ಶುಭೋಯದಿಸ್ಯಾ ಚ್ಛಕುನಂತ್ವಭೀಷ್ಟಂ ॥**

ಸೋದರಮಾವನ ಮಗಳನ್ನು ಮದುವೆಮಾಡಿಕೊಳ್ಳುವಲ್ಲಿ ರಾಶಿಶತೃತ್ವ, ರಾಶ್ಯಾಧಿಪತಿ ಶತೃತ್ವವು, ರಾಶಿಗಳ ಷಷ್ಟಾಷ್ಟಮವು, ನವಪಂಚಮಗಳು ಇವುಗಳಿದ್ದರೂ ಶುಭಶಕುನವಾದರೆ ಆ ವಿವಾಹವು ಮಂಗಳಕರವಹುದು.

**ಗೌತಮ್ಯಾಯಾಮ್ಯದಿಗ್ಭಾಗೇ ಕಾವೇರ್ಯಾಶ್ಚೋತ್ತರೆತಟೆ । ಮಾತುಲಸ್ಯಸುತೋದ್ವಾಹಂ ಪ್ರಶಂಸಂತಿಮನೀಷಿಣಃ ॥**

ಗೌತಮಿನದಿಯ ದಕ್ಷಿಣಭಾಗದಲ್ಲೂ, ಕಾವೇರಿಯ ಉತ್ತರದಿಗ್ಭಾಗ ದಲ್ಲೂ, ಮಾತುಲಕನ್ಯಾ ವಿವಾಹವನ್ನು ವಿದ್ವಾಂಸರು ಒಪ್ಪಿಕೊಳ್ಳುವರು

**ಪಿತೃಷ್ವಸುಸುತಾಯಾಶ್ಚ ಸುತಾಯಾಮಾತುಲಸ್ಯಚ । ವಿವಾಹೋ ದಿನಕೂಟಾದಿ ನವಿಚಾರ್ಯಪ್ರವರ್ತತೆ ॥**

ಸೋದರತ್ತೆ ಮಗಳ ವಿವಾಹದಲ್ಲೂ ಸೋದರಮಾವನ ಮಗಳ ವಿವಾಹ ದಲ್ಲೂ ದಿನಕೂಟಾದಿ ವರ್ಗಗಳನ್ನು ವಿಚಾರಿಸದೆಯೇ ಪ್ರವರ್ತಿಸಬಹುದು.

## ವಿವಾಹಾಂತರ ವಿಷಯವು

**ಭಾರ್ಯಾಂತರವಿವಾಹಸ್ಸ್ಯಾದಯುಗ್ಮೇವತ್ಸರೇಶುಭಃ ।**
**ಯುಗ್ಮೇಭರ್ತೃರ್ವಿನಾಶಾಯ ಗಾರ್ಗ್ಯಸ್ಯವಚನಂಯಥಾ ॥**

ಪತ್ನೀವಿಯೋಗವಾದ ೧-೩-೫-೭ ನೇ ಈ ಮೇರೆ ವಿಷಮ ವರ್ಷಗಳಲ್ಲಿ ೨ನೇ ಮದುವೆ ಮಾಡಬೇಕೇ ಹೊರ್ತು ೨-೪-೬ ಈ ಮೇರೆ ಸಮವರ್ಷಗಳಲ್ಲಿ ಮಾಡಕೂಡದು.

## ಗ್ರಂಥಾಂತರೇ

**ಪತ್ನೀವಿಯೋಗೆ ಪ್ರಥಮೇಚವರ್ಷೆ ನೋಚೆದ್ವಿವರ್ಷೆಪುನ ರುದ್ವಹೇತ್ಸಃ ॥ ಅಯುಗ್ಮಮಾಸೇಷು ಶುಭಂ ವದಂತಿ ವಸಿಷ್ಠ ಗಾರ್ಗ್ಯಾದಿ ಮುನೀಂದ್ರವರ್ಯಾಃ ॥**

ಪತ್ನಿವಿಯೋಗವಾದ ೧ ವರುಷದಲ್ಲೇ ೨ ನೇ ವಿವಾಹವಾಗದೇ ಹೋದರೆ ೨ ನೇ ವರುಷಗಳಲ್ಲಾದರೂ ವಿಶಮ ಮಾಸದಲ್ಲಿ ಮಾಡಬಹುದೆಂದು ವಸಿಷ್ಠಾದಿ ಋಷಿಗಳು ಹೇಳುತ್ತಾರೆ.

## ನಾರದೀಯೆ

**ಯುಗ್ಮೇಬ್ದೆಜನ್ಮತಸ್ತ್ರೀಣಾಂ ಪ್ರೀತಿದಂಪಾಣಿಪೀಡನಂ ।**
**ಸಂಪತ್ಪುಂಸಾಮಯುಗ್ಮೇಬ್ದೆ ವ್ಯತ್ಯಯೇನಾಶನಂತಯೋಃ ॥**

ಕನ್ಯೆಗೆ ಸಮವರ್ಷದಲ್ಲೂ ಪುರುಷನಿಗೆ ವಿಷಮವರ್ಷದಲ್ಲಿಯೂ ವಿವಾಹವು ಶುಭಕರವು, ಹಾಗಿಲ್ಲದೆ ಸ್ತ್ರೀಗೆ ವಿಷಮ ವರ್ಷವು ಪುರುಷನಿಗೆ ಸಮ ವರ್ಷವೂ ಆದರೆ ಹಾನಿಕರವಹುದು.

**ನಕದಾಚಿದ್ವಿಂಶತ್ರ್ಯಕ್ಷೆ ಭಾನೋರಾದ್ರಾಪ್ರವೇಶನಾತ್ ॥**
**ವಿವಾಹೊದೇವತಾನಾಂಚ ಪ್ರತಿಷ್ಠಾಚೋಪನಾಯನಂ ।**
**ನಾಸ್ತಂಗತೆಸಿತೆಜೀವೇ ನತಯೊರ್ಬಾಲವೃದ್ಧಯೋಃ ।**
**ನಗುರೌಸಿಂಹರಾಶಿಸ್ಥೇ ಸಿಂಹಾಂಶಕಗತೇಪಿವಾ ॥**

ಸೂರ್ಯನು ಆದ್ರಾ ಪ್ರವೇಶವಾದ ೨೦ ನಕ್ಷತ್ರಗಳವರಿಗೂ ಗುರುಶುಕ್ರರು ಅಸ್ತಂಗತರಾಗಿ ಇರುವಾಗಲೂ ಅವರು ಬಾಲರಾಗಿಯೂ ವೃದ್ಧರಾಗಿಯೂ ಇರುವಾಗಲೂ ಮತ್ತು ಗುರುವು ಸಿಂಹರಾಶಿಯಲ್ಲಾದರೂ ಸಿಂಹಾಂಶದಲ್ಲಾ

ದರೂ ಇರುವಾಗಲೂ ಸಹ ವಿವಾಹ ಉಪನಯನ ದೇವತಾಪ್ರತಿಷ್ಠೆ, ಈ ಶುಭ ಕಾರ್ಯಗಳನ್ನು ಮಾಡಿಸಕೂಡದು.

## ಅಪವಾದ-ವಾಸಿಷ್ಠದಲ್ಲಿ

**ಸಿಂಹಂಗತೆ ದೇವಗುರೌ ವಿವಾಹಂ ನೈಚ್ಛಂತಿ ಯಾತ್ರಾಂ ಯಮುನಾ ತಟಾಂತೆ । ಕಳಿಂಗ ವಂಗೇಷ್ವಥ ಮಾಗಧೇಷು ದೋಷಃಪ್ರಯುಕ್ತೋನನುಚಾರ್ಯದೇಶೆ ॥**

ಗುರುವು ಸಿಂಹರಾಶಿಯಲ್ಲಿ ಇರುವಾಗ ಯಮುನಾನದಿಯ ತೀರದಲ್ಲಿ ಇರುವ ದೇಶದವರು ವಿವಾಹವನ್ನು ಪ್ರಯಾಣವನ್ನು ನಹ ನಿಷೇಧಿಸುವರು, ಹಾಗೆಯೇ ಕಳಿಂಗ ವಂಗ ಮಾಗಧ ಈ ದೇಶದವರು ಸಹ ಅದನ್ನು ಒಪ್ಪುವುದಿಲ್ಲ. ಅವುಗಳಿಂದ ಅನ್ಯದೇಶದವರು ಅಂಥಾ ವಿವಾಹ ಪ್ರಯಾಣಗಳನ್ನು ಒಪ್ಪುತಾರೆ.

## ಗುರುಶುಕ್ರರಿಗೆ ವೃದ್ಧತ್ವ ಬಾಲ್ಯದೋಷಗಳು

**ಪಶ್ಚಾತ್ಪ್ರಾಗುದಿತಶ್ಶುಕ್ರೋ ದಶತ್ರಿದಿವಸಂ ಶಿಶುಃ ।**
**ವೃದ್ಧಃ ಪಂಚದಿನಂಪಕ್ಷಂ ಗುರೋಃಪಕ್ಷಂತು ಸರ್ವದಾ ॥**

ಪಶ್ಚಿಮದಲ್ಲೂ ಪೂರ್ವದಿಕ್ಕಿನಲ್ಲೂ, ಶುಕ್ರನು ಉದಯವಾದ ಹದಿಮೂರು ದಿನಗಳವರಿಗೂ ಬಾಲನು, ಅಸ್ತಮಯಕ್ಕೆ ಮುಂದೆ ೫ ದಿನ ವೃದ್ಧನು ೧೫ ದಿನವೆಂದು ಕೆಲವರು ಹೇಳುವರು, ಹಾಗೆಯೇ ಗುರು ಉದಯವಾದ ಮೇಲೂ ೧೫ ದಿನ ಬಾಲನು, ಅಸ್ತಮಕ್ಕೆ ಮುಂದೆ ೧೫ ದಿನ ವೃದ್ಧನು.

**ಶುಕ್ರೋಗುರುಃ ಪ್ರಾಕ್ಪರತಶ್ಚಕಾಲೇ ವಿಂಧ್ಯೆದಶಾವಂತಿಷು ಸಪ್ತರಾತ್ರಂ । ವಂಗೇಷುಹೂಣೇಷುಚ ಷಟ್ಕಪಂಚಶೇಷೇತು ದೆಶೆ ತ್ರಿದಿನಂಚ ವರ್ಜ್ಯಂ ॥**

ಶುಕ್ರನಿಗೂ ಗುರುವಿಗೂ ಉದಯಾಸ್ತಮಯಗಳ ಹಿಂದುಮುಂದು ಕಾಲಗಳಲ್ಲಿ ೧೦ ದಿನ ಬಾಲ್ಯ, ೧೦ ದಿನ ವೃದ್ಧತ್ವವೆಂದು ವಿಂಧ್ಯಪರ್ವತ ಪ್ರಾಂತ್ಯದಲ್ಲಿ ೭ರಾತ್ರಿಗಳೆಂದು ಅವಂತಿ ದೇಶದಲ್ಲೂ ವಂಗದೇಶದಲ್ಲೂ ಹೂಣದೇಶದಲ್ಲೂ ೬-೫ ದಿನಗಳು ಇವುಗಳಿಗೆ ಇತರಗಳಾದ ದೇಶಗಳಲ್ಲಿ ೩ ದಿನದವರಿಗೂ ಬಾಲ್ಯ ವೃದ್ಧತ್ವಗಳೆಂದು ತಿಳಿಯತಕ್ಕದ್ದು.

**ವಿಂಧ್ಯಸ್ಯದಕ್ಷಿಣೇದೇಶೇ ವೃದ್ಧಬಾಲ್ಯೆಸಿತೇಜ್ಯಯೋಃ ।**
**ತ್ರಿದಿನಂವರ್ಜಯಿತ್ವಾತು ತತಸ್ತುಸ್ಯಾಂಚಶೋಭನಂ ।**

ವಿಂಧ್ಯಪರ್ವತದ ದಕ್ಷಿಣದೇಶದಲ್ಲಿ ಶುಕ್ರ ಗುರುಗಳಿಗೆ ವೃದ್ಧತ್ವ ಬಾಲ್ಯಗಳು ಮೂರು ಮೂರು ದಿನಗಳೇ ಆದ್ದರಿಂದ ಅವುಗಳನ್ನು ಬಿಟ್ಟು ಕಡಿಮೆ ದಿನಗಳಲ್ಲಿ ಶುಭಕಾರ್ಯಗಳನ್ನು ಮಾಡಬಹುದು.

## ಮೌಢ್ಯವರ್ಜ್ಯಗಳು

**ವಾಪೀಕೂಪತಟಾಕಯಾಗಗಮನಕ್ಷೌರಪ್ರತಿಷ್ಠಾವ್ರತಂ ।**
**ವಿದ್ಯಾಮಂದಿರಕರ್ಣವೇಧನಮಹಾದಾನಂ ವನಸ್ಥಾಪನಂ ।**
**ತೀರ್ಥೋದ್ವಾಹಜಪಾಭಿಷೇಕಮಖಿಲಾನ್ದೋಷ ಪ್ರಯು ಕ್ತೇತರಾನ್ ।**
**ದೂರೇಣೈವಚಜೀವಿಷುಃಪರಿಹರೇದಾರ್ಯೇಸ್ತಗೇವಾಸಿತೇ ॥**

ಕ್ಷೇಮವನ್ನು ಅಪೇಕ್ಷಿಸುವನು ಗುರುವಾದರೂ ಶುಕ್ರನಾದರೂ ಅಸ್ತಂಗತರಾಗಿರುವಾಗ ಭಾವಿ, ಕೂಪ, ತಟಾಕ, ಯಜ್ಞ, ಪ್ರಯಾಣ, ಕ್ಷೌರ, ದೇವತಾಪ್ರತಿಷ್ಠೆ, ವ್ರತಾರಂಭ, ವಿದ್ಯಾರಂಭ, ಗೃಹನಿರ್ಮಾಣ, ಕರ್ಣವೇಧನ, ಮಹಾದಾನ, ವನಾಂತರ ಹಾಕುವುದು, ಪುಣ್ಯತೀರ್ಥಸ್ನಾನ, ವಿವಾಹ, ಮಂತ್ರಾರಂಭ, ಪಟ್ಟಾಭಿಷೇಕ ಮುಂತಾದವುಗಳು ಇನ್ನೂ ನಿರ್ದೋಷಗಳಾದ ಇತರ ಶುಭಕರ್ಮಗಳನ್ನು ಬಿಟ್ಟುಬಿಡಬೇಕು.

## ಮೌಢ್ಯಕರ್ತವ್ಯಗಳು

**ಭುಜಂಗಮೂಲಗ್ರಹರೋಗಶಾಂತಿಷ್ಟಲಭ್ಯಯೋಗೆ ಗ್ರಹಣಾಭಿಷೇಕೆ । ದೋಷಪ್ರಯುಕ್ತ್ಯೈಷ್ವಖಿಲವ್ರತೇಷುಚೊತ್ಪಾತಶಾಂತೌನಚಮೌಢ್ಯದೋಷಃ ॥**

ಆಶ್ಲೇಷಾ ಮೂಲಾದಿ ಗಂಡ ನಕ್ಷತ್ರಗಳ ಶಾಂತಿಯು ಗ್ರಹಚಾರದ ಶಾಂತಿಯು ರೋಗೋಪದ್ರವ ಶಾಂತಿಯು ಆಕಸ್ಮಿಕವಾಗಿ ಬಂಧ ಗ್ರಹ ಶಾಂತಿಯು ಪಟ್ಟಾಭಿಷೇಕವು ದೋಷಪ್ರಯುಕ್ತಗಳಾದ ಸಕಲ ವ್ರತಗಳಲ್ಲಿಯೂ ಸಿಡಿಲು ಮುಂತಾದ ಉತ್ಪಾತ ಶಾಂತಿಗಳು ಇವುಗಳಲ್ಲಿ ಜಪಹೋಮಾದಿಗಳಿಗೆ ಗುರುಶುಕ್ರರ ಮೌಢ್ಯದೋಷವಿಲ್ಲ.

## ಮೂಢದೋಷಾಪವಾದಃ-- ಕಾಲಪ್ರಕಾಶಿಕೆಯಲ್ಲಿ

**ಏಕೋಮೂಢೋಭವೇದನ್ಯಸ್ತ್ವೋಚ್ಚಮಿತ್ರಾಂಶಗೋಯದಿ ।**
**ಸ್ವರಾಶೌಮೂರ್ತಿಗೆಶ್ಚೈವ ಮೌಢ್ಯದೋಷೋನವಿದ್ಯತೆ ॥**

ಗುರು ಶುಕ್ರರಿಬ್ಬರಲ್ಲಿ ಒಬ್ಬನು ಅಸ್ತಂಗತನಾಗಿ ಇರುವಾಗ ಮತ್ತೊಬ್ಬನು ಉಚ್ಚ ಸ್ಥಾನ ಮಿತ್ರಾಂಶಗಳಲ್ಲಿದ್ದರೂ ಸ್ವಕ್ಷೇತ್ರದಲ್ಲಿದ್ದರೂ ಮೌಢ್ಯ ದೋಷವು ಇಲ್ಲ.

**ಜೀವೆಲಗ್ನೇಬಲೋಪೇತೆ ಪಾಪಸ್ತ್ರ್ಯಾಯಾರಿರಾಶಿಷು ।**
**ಸ್ಥಿತಾಶ್ಚೇದಸ್ತಶುಕ್ರಸ್ಯ ದೋಷೋನಾಸ್ತೀತಿಭಾರ್ಗವಃ ॥**

ಬೃಹಸ್ಪತಿ ಬಲಿಷ್ಠನಾಗಿ ಲಗ್ನದಲ್ಲಿದ್ದರೂ ಪಾಪಗ್ರಹಗಳು ೩-೬-೧೧ ನೇ ರಾಶಿಗಳಲ್ಲಿದ್ದರೂ ಶುಕ್ರನು ಅಸ್ತಂಗತನಾಗಿದ್ದರೂ ದೋಷವಿಲ್ಲೆಂದು ಭಾರ್ಗವ ಮುನಿಯ ಮತ.

**ಗುರೋರಸ್ತಂಗತೋದೋಷೊ ನಾಸ್ತಿಶುಕ್ರೋದಯೋಯದಿ।**
**ದ್ವಯೋರಸ್ತಮಯಸ್ಯಾಚ್ಚೇದಪವಾದೈರ್ನಭಿದ್ಯತೆ ॥**

ಹಾಗೆಯೇ ಗುರು ಅಸ್ತಂಗತನಾಗಿದ್ದರೂ ಶುಕ್ರೋದಯವಾಗಿದ್ದರೆ ದೋಷವಿಲ್ಲ, ಅವರಿಬ್ಬರೂ ಅಸ್ತಂಗತರಾಗಿದ್ದರೆ ದೋಷ ಪ್ರಬಲವಾಗುತ್ತದೆ, ಅದಕ್ಕಪವಾದವಿಲ್ಲ

## ವರ್ಷಮಾಸಾದ್ಯಂತವರ್ಜ್ಯಾಃ

**ವರ್ಷಾಂತೆವರ್ಜಯೇತ್ಪಕ್ಷಂ ಮಾಸಾಂತೆಚ ದಿನತ್ರಯಂ ।**
**ಋಕ್ಷಾಂತೆಘಟಿಕೆದ್ವೇಚ ಗ್ರಹಣೇ ದಿನಸಪ್ತಕಂ ॥**

ಸಂವತ್ಸರದ ಅಂತ್ಯದಲ್ಲಿ ೧೫ ದಿವನಗಳು, ಮಾಸದ ಕೊನೆಯಲ್ಲಿ ೩ ದಿವಸಗಳು, ನಕ್ಷತ್ರಗಳ ಅಂತ್ಯದಲ್ಲಿ ೨ ಘಳಿಗೆಗಳು, ಗ್ರಹಣದಲ್ಲಿ ೭ ದಿವಸ ಗಳು, ಶುಭಕಾರ್ಯಗಳಲ್ಲಿ ಅವಶ್ಯವಾಗಿ ಬಿಡತಕ್ಕದ್ದು

## ಕಶಪ್ಯಃ

**ಮಾಸಾಂತೆತ್ರಿದಿನಂನೇಷ್ಟಂ ವರ್ಷಾಂತೆದಿನಪಂಚಕಂ ।**
**ಷಷ್ಠ್ಯಂತೆವತ್ಸರಸ್ಯಾಜ್ಯೋ ಷಣ್ಮಾಸಂವಾವಿಸರ್ಜಯೇತ್ ॥**

ಮಾಸದ ಕೊನೆಯಲ್ಲಿ ೩ ದಿನಗಳನ್ನೂ ವರ್ಷದ ಕೊನೆಯಲ್ಲಿ ೫ ದಿನ

ಗಳನ್ನೂ, ೬೦ ವರ್ಷಗಳ ಕೊನೆಯಲ್ಲಿ ೧ ವರ್ಷವನ್ನೂ ಅಥವಾ ೬ ತಿಂಗಳನ್ನಾದರೂ ಶುಭಕಾರ್ಯಗಳಲ್ಲಿ ಬಿಡತಕ್ಕದ್ದು.

**ಪ್ರಾಕೃತಾಬ್ದೋಗುರೋರಬ್ದೋ ಸೌರಾಬ್ದಸ್ತ್ರಿವಿಧಸ್ಮೃತಃ ।**
**ತೇಷಾಮಾದಾವಂತಥಾಂತೇಚ ವರ್ಜಯೇಚ್ಚ ದಿನತ್ರಯಂ ॥**

ಶಾಸ್ತ್ರದಿಂದ ಹೇಳಲ್ಪಟ್ಟ ಚಾಂದ್ರ, ಬಾರ್ಹಸ್ಪತ್ಯ, ಸೌರಮಾನ ವರ್ಷಗಳಲ್ಲಿ ಆದ್ಯಂತಗಳಾದ ಚಾಂದ್ರ ಸೌರಮಾನ ವರ್ಷಗಳ ಅಂತ್ಯಭಾಗಗಳಲ್ಲಿ ೩ ದಿನಗಳನ್ನು ವರ್ಜಿಸತಕ್ಕದ್ದು.

**ಅಂಗವಂಗಕಳಿಂಗೇಷು ಮಾಸಷಟ್ಕಂ ವಿಸರ್ಜಯೇತ್ ।**
**ಆಂಧ್ರದೇಶೇಷು ಸರ್ವತ್ರ ತ್ರಿಮಾಸಂ ವರ್ಜಯೇದ್ಬುಧಃ ॥**

ಅಂಗ ವಂಗ ಕಳಿಂಗ ದೇಶಗಳಲ್ಲಿ ೬೦ ವರ್ಷಗಳ ಅಂತ್ಯಭಾಗದಲ್ಲಿ ೬ ತಿಂಗಳನ್ನು ಬಿಡತಕ್ಕದ್ದು. ಎಲ್ಲಾ ಆಂಧ್ರದೇಶಗಳಲ್ಲೂ ೩ ತಿಂಗಳನ್ನು ಬಿಡತಕ್ಕದ್ದು.

## ಜನ್ಮಮಾಸಾದಿವರ್ಜ್ಯ

**ಜನ್ಮೋದಯೇಜನ್ಮರಾಶೌ ಜನ್ಮರ್ಕ್ಷೇಜನ್ಮವಾಸರೆ ।**
**ಜನ್ಮಮಾಸೇಚದಂಪತ್ಯೋರ್ವಿವಾಹೋತ್ಯಂತದುಃಖದಃ ॥**

ದಂಪತಿಗಳ ಜನ್ಮಲಗ್ನ, ಜನ್ಮರಾಶಿ, ಜನ್ಮನಕ್ಷತ್ರ, ಜನ್ಮದಿನ, ಜನನ ಮಾಸ ಇವುಗಳಲ್ಲಿ ಮಾಡಲ್ಪಟ್ಟ ವಿವಾಹ ಅವರಿಗೆ ಅತ್ಯಂತ ದುಃಖಕರ ಮಾಗಿರ್ಪುದು.

**ಸಾಂಘಾತಿಕೆಜನ್ಮನಿಸಾಮುದಾಯೆ ವೈನಾಶಿಕೆಕರ್ಮಣಿಮಾನಸರ್ಕ್ಷೇ । ಚೌಲವ್ರತೆಹೋಮವಿಧಿರ್ನಕಾರ್ಯಾ ಕರ್ತುಕ್ರಿಯಾನಷ್ಟಕರೀಭವೇತ್ಸಾ ॥**

ಸಾಂಘಾತಿಕನಕ್ಷತ್ರ, ಜನ್ಮನಕ್ಷತ್ರ, ಸಾಮುದಾಯ ನಕ್ಷತ್ರ, ವೈನಾಶಿಕ ನಕ್ಷತ್ರ, ಕರ್ಮನಕ್ಷತ್ರ, ಮಾನಸಾಖ್ಯ ನಕ್ಷತ್ರ, ಇವುಗಳಲ್ಲಿ ಚೌಲ, ಉಪನಯನ, ವಿವಾಹ, ಈ ಶುಭಕಾರ್ಯಗಳನ್ನು ಮಾಡಕೂಡದು, ಹಾಗೆ ಮಾಡಿದವರಿಗೆ ಹಾನಿಯುಂಟಾಗುವದು.

## ವಿವಾಹ ಯೋಗ್ಯಾಯೋಗ್ಯ ಮಾಸಾಃ

**ಮಾಘಫಾಲ್ಗುನವೈಶಾಖಜೇಷ್ಠಮಾಸಾಶ್ಶುಭಪ್ರದಾಃ ।**
**ಮಧ್ಯಮೌಕಾರ್ತಿಕೋಮಾರ್ಗಶೀರ್ಷೋऽನ್ಯೈನಿಂದಿತಾಃಪರೆ ॥**

ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠ ಮಾಸಗಳು, ಶುಭಪ್ರದಗಳು, ಕಾರ್ತೀಕ, ಮಾರ್ಗಶೀರ್ಷ ಮಾಸಗಳು ಮಧ್ಯಮಗಳು; ಇತರ ಮಾಸಗಳು ವರ್ಜ್ಯಗಳು.

**ಅಜಗೋಯುಗ್ಮಕುಂಭಾಳಿ ಮೃಗರಾಶಿಗತೆರವೌ ।**
**ಮುಖ್ಯಃ ಕರಗ್ರಹಸ್ತ್ವನ್ಯರಾಶಿಕೇನ ಕದಾಚನ ॥**

ಮೇಷ, ವೃಷಭ, ಮಿಥುನ, ಕುಂಭ, ವೃಶ್ಚಿಕ, ಮಕರ ಈ ರಾಶಿಗಳಲ್ಲಿ ಸೂರ್ಯನಿರುವಾಗ ವಿವಾಹವು ಶುಭಕರವು, ಇತರ ರಾಶಿಗಳಲ್ಲಿರುವಾಗ ಯಾವಾಗ್ಯೂ ಮಾಡಕೂಡದು.

## ಶೂನ್ಯಮಾಸವು

**ಉತ್ತರಾಯಣಗೆಸೂರ್ಯೆ ಮೀನಚೈತ್ರಂತುವರ್ಜಯೇತ್ ।**
**ಮೀನಚೈತ್ರೋऽಥನುಃಪುಷ್ಯೋ ಮಿಥುನಾಷಾಢಕೋಪಿಚ ।**
**ಕನ್ಯಾಭಾದ್ರಪದೌಮಾಸೌ ಶೂನ್ಯಮಾಸಾಃಪ್ರಕೀರ್ತಿತಾಃ ॥**

ಸೂರ್ಯನು ಉತ್ತರಾಯಣದಲ್ಲಿರುವಾಗ ಮೀನ ಚೈತ್ರವನ್ನು ಬಿಡತಕ್ಕದ್ದು ; ಯಾತಕ್ಕೆಂದರೆ :—ಮೀ ನ ಚೈ ತ್ರ ವು, ಧನುಃ ಪುಷ್ಯವು, ಮಿಥುನಾಷಾಢವು, ಕನ್ಯಾ ಭಾದ್ರಪದವು, ಇವುಗಳೆಲ್ಲವೂ ಶೂನ್ಯ ಮಾಸಗಳೆಂದು ತಿಳಿಯತಕ್ಕದ್ದು.

**ಪೌಷ್ಯೋऽನದೂಷ್ಯೋऽಮಕರೇಣಯುಕ್ತಶ್ಚೈತ್ರಸ್ತಥಾಮೇಷಸಮನ್ವಿತಶ್ಚ । ಶುಚಿಶ್ಚಕೆಚಿನ್ಮಿಥುನೇನಯುಕ್ತೋ ವಿವಾಹಕಾರ್ಯಂ ಶುಭದಂನದಂತಿ ॥**

ಮಕರ ಪುಷ್ಯ, ಮೇಷ ಚೈತ್ರ, ಮಿಥುನ ಜ್ಯೇಷ್ಠ, ಈ ಮಾಸಗಳಲ್ಲಿ ವಿವಾಹವು ಶುಭಪ್ರದವೆಂಬದಾಗಿ ಕೆಲವರು ಹೇಳುತ್ತಾರೆ.

**ಮುಂಡನಂಮೀನಚೈತ್ರೇತು ಮುಂಡನಂಮೇಷಚೈತ್ರಕೆ ।**
**ಮುಂಡನಂಮುಂಡನಂಚೈವ ಮೇಷಚೈತ್ರೇವಿಧೀಯತೆ ॥**

ಮೀನಚೈತ್ರದಲ್ಲಿ ಮುಂಡನವೆಂಬ ಉಪನಯನವನ್ನು ಮಾಡಬಹುದು. ಮೇಷ ಚೈತ್ರದಲ್ಲಾದರೂ ಉಪನಯನವನ್ನೂ ಮುಂಡನವೆಂಬ ವಿವಾಹವನ್ನೂ ಸಹ ಮಾಡಕ್ಕೂಡದು.

# ಸೂರ್ಯನ ಆರ್ದ್ರಾ ಪ್ರವೇಶದಲ್ಲಿ ಶುಭಕರ್ಮವರ್ಜ್ಯ ಗಾರ್ಗ್ಯದಲ್ಲಿ

**ಆರ್ದ್ರಾಧಿಕೆಸ್ವಾತಿವಿರಾಮಕಾಲೇ ನಕ್ಷತ್ರಬೃಂದೆದಶಕೇತಥೈವ ।**
**ವಿವಾಹಚೌಲವ್ರತಬಂಧನಾಖ್ಯಂ ಸುರಪ್ರತಿಷ್ಠಾಚನಕಾರ್ಯಮೇವ ॥**

ಸೂರ್ಯನು ಆರ್ದ್ರಾನಕ್ಷತ್ರ ಮೊದಲು ಸ್ವಾತೀ ನಕ್ಷತ್ರದವರಿಗೂ ಹತ್ತು ನಕ್ಷತ್ರಗಳಲ್ಲಿರುವಾಗ ವಿವಾಹ, ಚೌಲ, ಉಪನಯನ ಕರ್ಮಗಳನ್ನು ಮಾಡ ಕೂಡದು.

## ಕಾಶ್ಯಪೆ

**ಜ್ಯೇಷ್ಠಮಾಸೆಯದಾಸೂರ್ಯೋರುದ್ರರ್ಕ್ಷೇಚಾರ್ಧಭೋಗವಾ**
**ವಿವಾಹಾದಿಶುಭಂಕಾರ್ಯಂ ಕೇಚಿದಾಹುಸ್ತ್ರಯೋಂಶಕಾಃ ॥**

ಜ್ಯೇಷ್ಠಮಾಸದಲ್ಲಿ ಸೂರ್ಯನು ಆರ್ದ್ರೆಯಲ್ಲಿರುವಾಗ ೩ ಪಾದಗಳವರಿಗೂ ವಿವಾಹ ಮುಂತಾದ ಶುಭಕರ್ಮಗಳನ್ನು ಮಾಡಬಹುದೆಂದು ಕೆಲವರು ಹೇಳುತ್ತಾರೆ.

## ಆಷಾಢಮಾಸ ವರ್ಜ್ಯ

**ಶುಚಿಮಾಸೇನವೋಢಾಯಾಃ ಪ್ರವೇಶಂಶ್ವಶೃಮಂದಿರಂ ।**
**ವರ್ಜಯೇನ್ಮತಿಮಾಂಸ್ತತ್ರ ಮುನಯೋಪಿವದಂತಿಹಿ ॥**

ಹೊಸದಾಗಿ ಮದುವೆಯಾದ ಹೆಣ್ಣನ್ನು ಆಷಾಢಮಾಸದಲ್ಲಿ ಗಂಡನ ಮನೆಗೆ ಕರೆದುಕೊಂಡುಹೋಗಿ ಗೃಹಪ್ರವೇಶ ಮಾಡಕೂಡದೆಂಬದಾಗಿ ಮುನೀಶ್ವರರು ಹೇಳುತ್ತಾರೆ.

**ಚಾತುರ್ಮಾಸ್ಯೇನದೂಷ್ಯಸ್ಯಾದ್ಗಾಂಧರ್ವಾಖ್ಯಕರಗ್ರಹಃ ।**
**ಮಾಸಪ್ರಾಧಾನ್ಯಕರ್ಮಾಣಿ ಕರ್ತವ್ಯಾನಿಮುನೀಷಿಭಿಃ ॥**

ಆಷಾಢಾದಿ ನಾಲ್ಕು ತಿಂಗಳಲ್ಲಿ ಗಾಂಧರ್ವವೆಂಬ ವಿವಾಹವು ನಿಷೇಧಿಸ ತಕ್ಕದಲ್ಲ, ಮತ್ತು ಆಯಾ ಮಾಸಗಳಲ್ಲಿ ಮಾಡತಕ್ಕ ವ್ರತಾದಿ ಕರ್ಮಗಳು ಬುದ್ಧಿವಂತರಿಂದ ಅವಶ್ಯ ಮಾಡತಕ್ಕದ್ದು.

## ಸ್ತ್ರೀಲಕ್ಷಣ

**ಕುರ್ಯಾಚ್ಛ್ವಶುರಯೋಃ ಪಾದವಂದನಂ ಭರ್ತೃತತ್ಪರಾ ।**
**ದ್ವಾರೋಪಸೇವನಂನಿತ್ಯಂ ಗವಾಕ್ಷಾವೇಕ್ಷಣಂ ತಥಾ ॥**

ಸ್ತ್ರೀಯು ನಿತ್ಯವೂ ಅತ್ತೆ ಮಾವ ಇವರ ಪಾದಸೇವೆಯನ್ನು ಮಾಡುತ್ತಾ ತಲಬಾಗಲಲ್ಲಿ ಗಂಡನ ಬರುವಿಕೆಯನ್ನು ಎದುರುನೋಡುತ್ತಾ ಗಂಡನಲ್ಲಿ ಅತ್ಯಂತ ಆಸಕ್ತಿಯುಳ್ಳವಳಾಗಿರಬೇಕು.

**ವಿವಾಹೆಬಲಮಾವಶ್ಯಂ ದಂಪತ್ಯೋರ್ಗುರುಸೂರ್ಯಯೋಃ ।**
**ಪೂಜಾಂಪ್ರಯತ್ನತಃ ಕುರ್ಯಾದ್ದುರ್ಬಲಪ್ರದಯೋಸ್ತಯೋಃ ॥**

ವಿವಾಹದಲ್ಲಿ ಗುರು ಸೂರ್ಯ ಇವರುಗಳು ಬಲಿಷ್ಠರಾಗಿರಬೇಕು, ಒಂದು ವೇಳೆ ಅವರುಗಳು ದುರ್ಬಲರಾಗಿ ಇದ್ದರೂ ಅಂಥವರಿಗೆ ವಿಶೇಷವಾಗಿ ಪೂಜೆಯನ್ನು ಮಾಡಿದರೆ ಅವರು ಶುಭಫಲವನ್ನು ಕೊಡುವರು.

**ಶುಭೇಕ್ಷಿತಯುತಾಶ್ಯಸ್ತಾ ಉದ್ವಾಹೆಖಿಲರಾಶಯಃ ।**
**ಶುಭಷಡ್ವರ್ಗಲಗ್ನೇ ಮಹಾದೋಷವಿವರ್ಜಿತೆ ।**
**ಜಾಮಿತ್ರಶುದ್ಧಿಸಂಯುಕ್ತೆ ವಿವಾಹಶ್ಶುಭದೋಮತಃ ॥**

ವಿವಾಹದಲ್ಲಿ ಶುಭಗ್ರಹಗಳೊಡನೆ ಕೂಡಿಯೂ ಅವರಿಂದ ನೋಡಲ್ಪಟ್ಟಿರುವ ಎಲ್ಲಾ ರಾಶಿಗಳೂ ಶುಭಪ್ರದಗಳು, ಮತ್ತು ಲಗ್ನವು ಶುಭಷಡ್ವರ್ಗವುಳ್ಳದ್ದಾಗಿಯೂ, ಮಹಾ ದೋಷವರ್ಜಿತವಾಗಿಯೂ ಇರುವಾಗಲೂ ಸಪ್ತಮ ಶುದ್ಧಿ ಇರುವಾಗಲೂ ವಿಶೇಷ ಶುಭಫಲ ಉಂಟಾಗುವದು.

## ಪುಷ್ಕರಾಂಶಾಃ

**ಏಕವಿಂಶೋಮನುಶ್ಚೈವ ಜನಾಶ್ಚಮುನಯಃ ಕ್ರಮಾತ್ ।**
**ಮೇಷಾದಿಮೀನಪರ್ಯಂತಂ ಪುಷ್ಕರಾಂಶಾಃಪ್ರಕೀರ್ತಿತಾಃ ॥**

ಮೇಷ ಮೊದಲು ಮೀನ ಪರ್ಯಂತವಾಗಿ ರಾಶಿಗಳಲ್ಲಿ ೨೧-೧೪-೨೪-೭ ಈ ಅಂಶಗಳು ಪುಷ್ಕರಾಂಶಗಳೆಂದು ಹೇಳಲ್ಪಡುತ್ತವೆ.

**ಶ್ವಶುರೋರ್ಕಸ್ಸಿತಶ್ಯ್ವಶ್ರೂ ಸ್ತ್ರೀಣಾಮಸ್ತಪತಿಃಪತಿಃ ।**
**ತೇಷೂಚ್ಚಾದಿಸ್ಥಿತೇಷ್ವೇಷು ಶುಭಂನೀಚಾರಿಗೇಷ್ವಸತ್ ॥**

ಸ್ತ್ರೀಯರಿಗೆ ಸೂರ್ಯನು ಮಾವನು, ಶುಕ್ರನು ಅತ್ತೆ, ಶನಿಯು ಗಂಡನು,

ಈ ಮೂರು ಗ್ರಹಗಳೂ ಉಚ್ಚ, ಮೂಲ ತ್ರಿಕೋಣ, ಸ್ವಕ್ಷೇತ್ರಗಳಲ್ಲಿದ್ದರೆ ಶುಭವಾಗುವುದು. ಅವರು ನೀಚ ಶತೃಕ್ಷೇತ್ರಗಳಲ್ಲಿದ್ದರೆ ಅಶುಭವಾಗುವುದು.

## ವಿವಾಹವೇದಿಕಾ ಲಕ್ಷಣ

**ಹಸ್ತೋಚ್ಛ್ರಿತಾಂಹಸ್ತಚತುಷ್ಟಯೇನ ವಿಸ್ತೀರ್ಣತಾಂಮಂದಿರ ವಾಮಭಾಗ । ವಿಚಿತ್ರತಾಂಸ್ತಂಭಚತುಷ್ಕಯುಕ್ತಾಂ ಸೋಪಾನ ರಮ್ಯಾಂಚವಿವಾಹವೇದಿಂ ॥**

ಒಂದು ಮೊಳ ಎತ್ತರವಾಗಿಯೂ, ನಾಲ್ಕು ನಾಲ್ಕು ಮೊಳ ಚೌಕ ವಾಗಿಯೂ, ಮನೆಯ ಬಲಗಡೆಯಲ್ಲಿ ಈಶಾನ್ಯಭಾಗದಲ್ಲಿ ನಾಲ್ಕು ಕಂಭ ಗಳಿಂದಲೂ ಅಂಕೆಗಳಿಂದಲೂ ಭೂಷಿತವಾಗಿ ವಿವಾಹವೇದಿಕೆಯನ್ನು ಮಾಡಿಸತಕ್ಕದ್ದು.

## ವಿವಾಹಪೀಠ ಲಕ್ಷಣ

**ಕುರ್ಯಾದ್ವಿವಾಹಪೀಠಂತು ಶುಭಲಕ್ಷಣಸಂಯುತಂ ।**
**ಸಪ್ತತ್ರಿಂಶತಿಕಂದೀರ್ಘಮಾಯಾಮಂಪಂಚಕಂತಥಾ ।**
**ಷಡುನ್ನತಂಚಾಂಗುಳಾನಾಂ ವಿವಾಹೇಪೀಠಮುಚ್ಯತೆ ॥**

ವಿವಾಹದಲ್ಲಿ ವಧೂವರರು ಕುಳಿತುಕೊಳ್ಳುವ ಹಣೆಯು ೩೭ ಅಂಗುಲ ಉದ್ದವು, ೫ ಅಂಗುಲ ಅಗಲವು, ೬ ಅಂಗುಲ ಎತ್ತರವುಳ್ಳದ್ದಾಗಿಯೂ, ತೋರಣ ರಂಗೋಲಿ ಮುಂತಾದ ಅಲಂಕಾರಯುಕ್ತವಾಗಿಯೂ ಇರತಕ್ಕದ್ದು.

## ಪಂಚಕ

**ತಿಥಿವಾರೋಡುಭಿರ್ಯುಕ್ತಂ ತತ್ಕಾಲೋದಯಮಿಶ್ರಿತಂ ।**
**ನವಸಂಖ್ಯಾಹರೇದ್ಭಾಗಂ ಶೇಷಂಪಂಚಕನಿರೂಪಿತಂ ।**

ತಿಥಿ, ವಾರ, ನಕ್ಷತ್ರ, ತತ್ಕಾಲ, ಲಗ್ನ ಇವುಗಳನ್ನು ಸೇರಿಸಿ ಲೆಖ್ಖ ಮಾಡಿ ೯ ರಿಂಡ ಭಾಗ ಮಾಡುವಲ್ಲಿ ಮಿಕ್ಕದ್ದು ಪಂಚಕವೆನಿಸಿಕೊಳ್ಳುವದು.

**ಏಕೋಮೃತ್ಯುರ್ದ್ವಯೋ ವಹ್ನಿಶ್ಚತ್ವಾರೋರಾಜಪಂಚಕಃ ।**
**ಷಟ್ಚೋರಅಷ್ಟರೋಗಸ್ಯಾದಿತ್ಯೆತತ್ಪಂಚಕಂಸ್ಮೃತಂ ॥**

೧ ಮಿಕ್ಕರೆ ಮೃತ್ಯುಪಂಚಕ, ೨ ಮಿಕ್ಕರೆ ಅಗ್ನಿ, ೪ ಮಿಕ್ಕರೆ ರಾಜ, ೬ ಮಿಕ್ಕಳೆ ಚೋಳ, ೮ ಮಿಕ್ಕರೆ ರೋಗ, ಇದು ಪಂಚಕವು ಇದನ್ನು ಬಿಡತಕ್ಕದ್ದು.

**ಸೇವಾಯಾಂರಾಜಕಂಮಾರ್ಗೆ ಚೋರಂರಾಜಾಗ್ನಿಮಾಲಯೇ ।**
**ಮೌಂಜೀಬಂಧನಉದ್ವಾಹೆ ರೋಗಂಮೃತ್ಯುಂಚ ವರ್ಜಯೇತ್ ॥**

ಉದ್ಯೋಗ ಪ್ರವೇಶದಲ್ಲಿ ರಾಜಪಂಚಕವನ್ನೂ, ಪ್ರಯಾಣದಲ್ಲಿ ಚೋರ ಪಂಚಕವನ್ನೂ, ಗೃಹನಿರ್ಮಾಣದಲ್ಲಿ ರಾಜಾಗ್ನಿ ಪಂಚಕಗಳನ್ನೂ, ಉಪನಯನ ವಿವಾಹಗಳಲ್ಲಿ ರೋಗ ಮೃತ್ಯು ಪಂಚಕಗಳನ್ನೂ ನಹ ಬಿಡತಕ್ಕದ್ದು.

**ತ್ಯಜೇತ್ಪಂಚಕಂ ಭಾನುವಾರೆತುರೋಗಂ ಶನೌಮೃತ್ಯುಕಂ ಭೂಮಿ ಪುತ್ರೇತುವಹ್ನಿಂ । ಗುರೌಸೋಮವಾರೇಚರಾಜಾನ ಮೇವಂ ಬುಧೆ ಭಾರ್ಗವೆತಸ್ಕರಾಖ್ಯಂಶುಭಾರ್ಥಿ ॥**

ಭಾನುವಾರದಲ್ಲಿ ರೋಗಪಂಚಕವನ್ನೂ, ಶನಿವಾರದಲ್ಲಿ ಮೃತ್ಯುಪಂಚಕ ವನ್ನೂ, ಕುಜವಾರದಲ್ಲಿ ಅಗ್ನಿಪಂಚಕವನ್ನೂ, ಗುರು ಸೋಮವಾರೆಗಳಲ್ಲಿ ರಾಜಪಂಚಕವನ್ನೂ, ಬುಧ ಶುಕ್ರವಾರಗಳಲ್ಲಿ ಚೋರ ಪಂಚಕವನ್ನು ಬಿಡ ತಕ್ಕದ್ದು.

**ಚೋರರೋಗಂತ್ಯಜೇದ್ರಾತ್ರೌದಿವಾರಾಜಾಗ್ನಿಮೇವಚ ।**
**ಅರ್ಧರಾತ್ರೇತ್ಯಜೇನ್ಮೃತ್ಯುಂ ಪಂಚಕಂಯತ್ರದೃಶ್ಯತೆ ॥**

ರಾತ್ರಿಯಲ್ಲಿ ಚೋರ ರೋಗ ಪಂಚಕಗಳನ್ನೂ, ಹಗಲಲ್ಲಿ ರಾಜ ಅಗ್ನಿ ಪಂಚಕಗಳನ್ನೂ, ಅರ್ಧರಾತ್ರಿಯಲ್ಲಿ ಮೃತ್ಯು ಪಂಚಕವನ್ನೂ ಬಿಡತಕ್ಕದ್ದು.

## ಸ್ವಲ್ಪದೋಷಾಃ

**ಉಪಗ್ರಹಾಖ್ಯಂದೋಷಂಚ ಭಗ್ರಹಂಯುದ್ಧದೂಷಿತಂ ।**
**ವಿರುದ್ಧಯೋಗನಾಡ್ಯಶ್ಚ ಪಂಗ್ವಂಧಗ್ರಹಜನ್ಮಭಂ ॥**

ದೋಷಯುಕ್ತವಾದ ಉಪಗ್ರಹವೆಂಬ ದೋಷವು, ಯುದ್ಧದೂಷಿತ ವೆಂಬ ದೋಷವು, ಗ್ರಹವೆಂಬ ದೋಷವು, ಮರಣಯೋಗ ನಾಶಯೋಗಾದಿ ಗಳ ಘಳಿಗೆಗಳು, ಕುಂಟ, ಕುರುಡ ರಾಶಿಗಳು, ಜನ್ಮ ನಕ್ಷತ್ರವು, ಇವೆಲ್ಲವೂ ಸ್ವಲ್ಪ ದೋಷಗಳು.

## ಈ ದೋಷಗಳಿಗೆ ದೇಶವ್ಯವಸ್ಥೆಯು

**ಉಪಗ್ರಹರ್ಕ್ಷಂಕುರುಬಾಹ್ಲಿಕೇಷು ಕಳಿಂಗವಂಗೇಷುಚಲತ್ತ ಸಂಭವಂ । ಸೌರಾಷ್ಟ್ರಘೂರ್ಜೇಷುಚಪಾತಜನ್ಯಂ ಶೆಷೇತುದೆಶೇ ನವಿರುದ್ಧದೋಷಃ ॥**

ಕುರು ಬಾಹ್ಲೀಕ ದೇಶಗಳಲ್ಲಿ ಉಪಗ್ರಹ ನಕ್ಷತ್ರವು, ಕಳಿಂಗ ವಂಗ ದೇಶಗಳಲ್ಲಿ ಲತ್ತಾ ದೋಷವು ಸಹ ಬಿಡತಕ್ಕದ್ದು, ಸೌರಾಷ್ಟ್ರ ಘೂರ್ಜರ ದೇಶಗಳೊಳು ಪಾತಜನ್ಯವಾದ ದೋಷವು ಸಹಾ ಬಿಡತಕ್ಕದ್ದು, ಮಿಕ್ಕ ದೇಶಗಳಲ್ಲಿ ವಿರುದ್ಧ ದೋಷವಿಲ್ಲ.

**ಏವಮಾನದಗ್ಧಾದಯ ಏವದೋಷಾ ವಿವರ್ಜನೀಯಾಃ ಖಲು ಮಧ್ಯದೇಶೆ । ದುಸ್ಸ್ವಪ್ನದುರ್ದರ್ಶನದುರ್ನಿಮಿತ್ತದುಶ್ಯಾಕುನಾದ್ಯಾ ಅಪಿಯತ್ರತತ್ರ ॥**

ಕರ್ಮನಕ್ಷತ್ರ ದಗ್ಧನಕ್ಷತ್ರ ಮುಂತಾದವುಗಳು ಮಧ್ಯ ದೇಶದಲ್ಲಿ ಬಿಡತಕ್ಕವು, ದುಸ್ವಪ್ನ ದುಷ್ಟವಸ್ತುದರ್ಶನ ದುಶ್ಯಕುನಗಳೆಲ್ಲಿ ಕಾಣಲ್ಪಡುತ್ತವೋ ಅಲ್ಲೇ ಬಿಡತಕ್ಕವು.

**ವಜ್ರೇತುಘಟಿಕಾಷಟ್ಕಂ ಜ್ವಾಲಾಖ್ಯೆಘಟಿಕಾಷ್ಟಕಂ ।**
**ತಿಸ್ರಃಪಂಚೋತ್ಪಾತಮೃತ್ಯೋರ್ನವಸ್ಯುರ್ಯಮಕಂಟಕೆ ॥**

ವಜ್ರಯೋಗದಲ್ಲಿ ೬ ಘಳಿಗೆಗಳು, ಜ್ವಾಲಾಯೋಗದಲ್ಲಿ ೮ ಘಳಿಗೆಗಳು, ಉತ್ಪಾಪಯೋಗದಲ್ಲಿ ೩ ಘಳಿಗೆಗಳು, ಮೃತ್ಯುಯೋಗದಲ್ಲಿ ೫ ಘಳಿಗೆಗಳು ಯಮಕಂಟಕಯೋಗದಲ್ಲಿ ೯ ಘಳಿಗೆಗಳೂ ಬಿಡತಕ್ಕವು.

## ದೋಷಭಂಗ

**ಶುಕ್ರಪಂಚಸಹಸ್ರಾಣಿ ಬುಧಪಂಚಶತಾನಿಚ ।**
**ಲಕ್ಷಮೇಕಂತುದೋಷಾಣಾಂ ಗುರುಃಕೇಂದ್ರೇವ್ಯಪೋಹತಿ ॥**

ಲಗ್ನ ಕೇಂದ್ರದಲ್ಲಿರುವ ಶುಕ್ರನು ೫ ಸಾವಿರ ದೋಷಗಳನ್ನೂ, ಬುಧನು ಐದು ನೂರು ದೋಷಗಳನ್ನೂ, ಗುರುವು ಲಕ್ಷದೋಷಗಳನ್ನೂ ಹೋಗಲಾಡಿಸುವರು.

**ಏಲಗ್ನದೋಷಾಃಕುನವಾಂಶದೋಷಾಃ ಪಾಪಗ್ರಹೈರ್ದೃಷ್ಟಿನಿಪಾತದೋಷಾಃ । ಲಗ್ನೇಗುರುಸ್ತಾನ್ನಿಮುಲೀಕರೋತಿ ಬೀಜಂಯಥಾಂಭಃಕತಕದ್ರುಮಸ್ಯ ॥**

ಲಗ್ನದಲ್ಲಿ ಇರುವ ಗುರುವು ಲಗ್ನದೋಷಗಳನ್ನೂ ನವಾಂಶದೋಷಗಳನ್ನೂ, ಪಾಪಗ್ರಹಗಳ ದೃಷ್ಟಿಸಂಬಂಧ ದೋಷಗಳನ್ನೂ ಸಹ ಹೋಗ

ಲಾಡಿಸಿ ಚಿಲ್ಲದ ಬೀಜವು ನೀರನ್ನು ನಿರ್ಮಲ ಮಾಡುವಂತೆ ಲಗ್ನವನ್ನು ಪರಿಶುದ್ಧ ಮಾಡುವನು.

**ಗುರುಸುದೀಪ್ತಸ್ತನುಕೇಂದ್ರಸಂಸ್ಥಿತಸ್ಸ್ವವರ್ಗಸಂಸ್ಥೋಭೃಗುಚೋಬುಧೋವಾ । ಬಲಾಧಿಕೋ ಲಗ್ನಗತೋ ವಿಶೇಷತೋ ನಿಹಂತಿದೋಷಾನ್ಸಕಲಾನ್ಸಥಾಪಿತಾರ್ ॥**

ಬೃಹಸ್ಪತಿಯು ಪ್ರಕಾಶಉಳ್ಳವನಾಗಿ ಲಗ್ನಕೇಂದ್ರದಲ್ಲಿದ್ದರೂ, ಶುಕ್ರನು ತನ್ನ ಶುಭಷಡ್ವರ್ಗಗಳಲ್ಲಿದ್ದರೂ, ಬುಧನು ಬಲಿಷ್ಠನಾಗಿ ಲಗ್ನದಲ್ಲಿದ್ದರೂ ಸಮಸ್ತ ದೋಷಗಳನ್ನು ಹೋಗಲಾಡಿಸುವರು.

**ಕಾವ್ಯೋಗುರುರ್ಬ್ಬಾಸೌಮ್ಯೋವಾ ಯದಾಕೇಂದ್ರತ್ರಿಕೋಣಗಃ ।
ನಶ್ಯಂತಿಸಕಲಾದೋಷಾಃ ಪಾಪಾನೀವಹರಿಸ್ಮೃತೇಃ ॥**

ಶುಕ್ರನಾದರೂ, ಗುರುವಾದರೂ, ಬುಧನಾದರೂ, ಕೇಂದ್ರತ್ರಿಕೋಣಗಳಲ್ಲಿದ್ದರೆ ಶ್ರೀ ಹರಿಸ್ಮರಣದಿಂದ ಪಾಪಗಳು ನಶಿಸುವಂತೆ ಸರ್ವ ದೋಷಗಳೂ ನಶಿಸುವುವು.

**ಮುಹೂರ್ತಲಗ್ನಷಡ್ವರ್ಗ ಕುನವಾಂಶಗ್ರಹೋದ್ಭವಾಃ ॥
ಏದೋಷಾಸ್ತಾನ್ನಿಹಂತ್ಯೇವ ಯತ್ರ್ಯೈಕಾದಶಗಶ್ಶಶೀ ॥**

ಯಾವ ಲಗ್ನಕ್ಕೆ ಚಂದ್ರನು ೧೧ನೇ ರಾಶಿಯಲ್ಲಿರುತ್ತಾನೋ ಆ ಲಗ್ನಕ್ಕೆ ಲಗ್ನ ಷಡ್ವರ್ಗಕುನವಾಂಶ ಗ್ರಹಗಳಿಂದುಂಟಾಗುವ ದೋಷಗಳನ್ನೆಲ್ಲಾ ಅವನು ಪರಿಹರಿಸುವನು.

**ಯತ್ರ್ಯೈಕಾದಶಗಸ್ಸೂರ್ಯೋ ದೋಷನಾಶಂಯುಯುಸ್ತದಾ ।
ಸ್ಮರಣಾಧಿವ ರುದ್ರಸ್ಯ ಪಾಪಂಜನ್ಮಶತೋದ್ಭವಂ ।**

ಲಗ್ನಕ್ಕೆ ೧೧ನೇ ರಾಶಿಯಲ್ಲಿರುವ ಸೂರ್ಯನು, ಶಿವಸ್ಮರಣವು ಬಹು ಜನ್ಮಕೃತ ಪಾಪವನ್ನು ಹರಿಸುವಂತೆ ಸಮಸ್ತ ದೋಷಗಳನ್ನು ಹರಿಸುವನು.

**ಬುಧೋಪಿಮಿತ್ರಕ್ಷಗತಸ್ತದಂಶಸಂಸ್ಥೋಪಿವಾತೇನ ನಿರೀಕ್ಷಿತೋವಾ। ಚೆಲ್ಲಗ್ನಗೋದೋಷಚಯಂನಿಹಂತಿ ರಾಮೋಯಥಾ ರಾವಣದೈತ್ಯಬೃಂದಂ ॥**

ಬುಧನು ಮಿತ್ರಕ್ಷೇತ್ರದಲ್ಲಾದರೂ, ಮಿತ್ರಾಂಶದಲ್ಲಾದರೂ ಇದ್ದರೂ, ಮಿತ್ರನಿಂದ ನೋಡಲ್ಪಟ್ಟಿದ್ದರೂ, ಈ ಗುಣಗಳೊಡನೆ ಆ ಲಗ್ನದಲ್ಲಿದ್ದರೂ,

ರಾಮನು ರಾಕ್ಷಸರ ಸಮೂಹವನ್ನು ನಾಶಮಾಡಿದಂತೆ ದೋಷಗಳನ್ನೆಲ್ಲಾ ಹರಿಸುವನು.

**ಲಗ್ನಸ್ಥೋಭಾರ್ಗವೋಜೀವೋ ಯದಿವಾಚಂದ್ರನಂದನಃ ।**
**ನಾಶಯತ್ಯಖಿಲಾನ್ದೋಷಾನ್ ತೂಲಸಂಘಮಿವಾನಲಃ ॥**

ಲಗ್ನದಲ್ಲಿರುವ ಗುರುವು, ಶುಕ್ರನು, ಬುಧನು, ಇವರುಗಳು ಹತ್ತಿಯ ರಾಶಿಯನ್ನು ಬೆಂಕಿ ಸುಟ್ಟಂತೆ ದೋಷಗಳ ರಾಶಿಯನ್ನು ಸುಟ್ಟುಬಿಡುವರು.

**ಕಾಣಾಂಧಬಧಿರೋದ್ಭೂತಾ ದಗ್ಧಲಗ್ನಾದಿಕೋದ್ಭವಾಃ ।**
**ತೇದೋಷಾನಾಶಮಾಯಾಂತಿ ಕೇಂದ್ರಸಂಸ್ಥೈಶುಭಗ್ರಹೈಃ ॥**

ಲಗ್ನಕೇಂದ್ರದಲ್ಲಿ ಶುಭಗ್ರಹಗಳಿದ್ದರೆ ಕುಂಟಲಗ್ನ, ಕುರುಡುಲಗ್ನ, ಕಿವುಡುಲಗ್ನ ಇವುಗಳಿಂದುಂಟಾದ ದೋಷಗಳೆಲ್ಲವು ಪರಿಹರಿಸಲ್ಪಡುತ್ತದೆ.

**ಉಚ್ಚಗಶ್ಶುಭಏಕೋಪಿ ಲಗ್ನಗೋದೋಷಸಂಚಯಂ ।**
**ಹಂತಿಪಾಪಾನ್ಹರಿತಿಥೌಚೋಪವಾಸವ್ರತಂಯಥಾ ॥**

ಉಚ್ಚವಾದ ಒಂದು ಗ್ರಹವಾದರೂ ಲಗ್ನದಲ್ಲಿದ್ದರೆ ಏಕಾದಶ್ಯುಪವಾಸವು ಪಾಪಗಳನ್ನು ನಾಶಮಾಡುವಂತೆ ಸಕಲ ದೋಷಗಳನ್ನೂ ಹರಿಸುವದು

**ಏಕೋಪಿಮಿತ್ರರಾಶಿಸ್ಥಶ್ಶುಭೋಯದಿವಿಲಗ್ನಗಃ ।**
**ಹಂತಿದೋಷಾನ್ಮಹಾದೋಷಾನ್ ಶಿವರಾತ್ರಿವ್ರತಂಯಥಾ ॥**

ಮಿತ್ರರಾಶಿಯಲ್ಲಿರುವ ಒಂದು ಗ್ರಹವಾದರೂ ಲಗ್ನದಲ್ಲಿದ್ದರೆ ಶಿವರಾತ್ರಿ ವ್ರತವು ಪಾಪಪರಿಹಾರ ಮಾಡುವಂತೆ ಸಕಲ ದೋಷಗಳನ್ನೂ ಹರಿಸುವರು.

**ವಿಪದಿಪ್ರತ್ಯಗೇಚೈವ ಚರಮಂಚಾದ್ಯಕಂವಿನಾ ।**
**ಸ್ವೋಚ್ಚಸ್ವರ್ಕ್ಷಗತಶ್ಚಂದ್ರಶ್ಶುಭದಸ್ಸರ್ವಕರ್ಮಸು ॥**

ಪರಮಮೈತ್ರ ತಾರೆಯು, ಜನ್ಮತಾರೆಯು, ಈ ಎರಡು ನಕ್ಷತ್ರಗಳನ್ನು ಬಿಟ್ಟು ವಿಪತ್, ಪ್ರತ್ಯತ್, ಈ ನಕ್ಷತ್ರಗಳಲ್ಲಿ ಸ್ವಕ್ಷೇತ್ರ ಸ್ವೋಚ್ಚರಾಶಿಗಳಲ್ಲಿರುವ ಚಂದ್ರನು ಸರ್ವಕರ್ಮಗಳಲ್ಲಿಯೂ ಶುಭಪ್ರದನಾಗುತ್ತಾನೆ.

**ಜನ್ಮರ್ಕ್ಷಲಗ್ನಯೋರ್ವಾಪಿ ಚಂದ್ರಶ್ಯಸ್ತಶುಭೇಕ್ಷಿತಃ ।**
**ಕೇಂದ್ರೇಶುಭೇಸ್ವವರ್ಗೇವಾ ಲಗ್ನಾದುಪಚಯೇಪಿವಾ ॥**

ಜನ್ಮನಕ್ಷತ್ರದಲ್ಲೂ ಜನ್ಮಲಗ್ನದಲ್ಲೂ ಇರುವ ಚಂದ್ರನು, ಅಥವಾ ಕೇಂದ್ರ ಸ್ಥಾನಗಳಲ್ಲೂ, ಶುಭಸ್ವವರ್ಗಗಳಾದ ಸ್ವೋಚ್ಚ ಮಿತ್ರಸ್ಥಾನ ಮೂಲತ್ರಿಕೋಣ

ಗಳಲ್ಲಾದರೂ ೩-೬-೧೧ನೇ ಸ್ಥಾನಗಳಲ್ಲಾದರೂ ಶುಭಗ್ರಹಗಳಿಂದ ನೋಡಲ್ಪಟ್ಟಿದ್ದರೆ ಶುಭಪ್ರದನಾಗುತ್ತಾನೆ.

**ಜೀವೇಸಿತೇಕಂಟಕಸ್ಥೇ ಪಾಪೇವಾತ್ರಿಷಡಾಯಗೆ ।**
**ವಾರ್ಕ್ಷತಿಥಿಯೋಗಾನಾಂ ದೋಷಮಾಶುವ್ಯಪೋಹತಿ ॥**

ಗುರುವಾದರೂ ಶುಕ್ರನಾದರೂ ಕೇಂದ್ರದಲ್ಲಿರುವಾಗಲೂ, ಪಾಪಗ್ರಹಗಳು ೩-೬-೧೧ ನೇ ಸ್ಥಾನಗಳಲ್ಲಿರುವಾಗಲೂ, ವಾರ ನಕ್ಷತ್ರ ತಿಥಿ ಯೋಗಗಳಿಂದುಂಟಾದ ದೋಷಗಳೆಲ್ಲವೂ ಪರಿಹರಿಸಲ್ಪಡುತ್ತವೆ.

**ಏವಂಗುಣಾಗುಣಾನ್‌ಸಂವೀಕ್ಷ್ಯ ಲಗ್ನಂನಿಶ್ಚಿತ್ಯಯತ್ನತಃ ।**
**ಸಿದ್ಧಾಂತೋಕ್ತೇನಮಾರ್ಗೇಣ ಲಗ್ನಕಾಲಂಸಮಾನಯೇತ್ ॥**

ಈ ಮೇರೆ ಸೂರ್ಯಸಿದ್ಧಾಂತದಿಂದ ಹೇಳಲ್ಪಟ್ಟ ಮಾರ್ಗದಿಂದ ಗುಣದೋಷಗಳನ್ನು ವಿಚಾರಿಸಿ, ಲಗ್ನವನ್ನು ನಿರ್ಣಯಿಸಿ ವಿವಾಹ ಶುಭಕಾಲವನ್ನು ಏರ್ಪಡಿಸತಕ್ಕದ್ದು.

**ವೈಧವ್ಯಂತರಣಿಸ್ತನೋತಿಹಿಮಗುಸ್ತಾಮೇವಹಂತ್ಯಾದರಾದ್ಭೌ**
**ಮೋದಂಪತಿಹಾಶಶಾಂಕತನಯಸೌಭಾಗ್ಯಮಾಯಚ್ಛತಿ ।**
**ಆಯುರ್ದೌರ್ಗುರುಭಾರ್ಗವೌ ಮೃದುಗತಿರ್ದಾರಿದ್ರ್ಯದಸ್ಸರ್ವದಾ**
**ರಾಹೋಶ್ಚಾಸ್ಯನಪತ್ಯಕೃನ್ನಿಜಗುಣೈರ್ಲಗ್ನೇವಿವಾಹೇಷ್ವಭಿಃ ॥**

ವಿವಾಹಲಗ್ನದಲ್ಲಿರುವ ಸೂರ್ಯನು ಕನ್ಯೆಗೆ ವೈಧವ್ಯವನ್ನು ಮಾಡಿಸುವನು, ಚಂದ್ರನು ಮರಣವನ್ನೂ, ಕುಜನು ದಂಪತಿಗಳ ನಾಶವನ್ನುಂಟುಮಾಡುವನು, ಬುಧನು ಸೌಭಾಗ್ಯವನ್ನು ಕೊಡುವನು, ಗುರಶುಕ್ರರು ಆಯುರ್ವೃದ್ಧಿ ಮಾಡುವರು, ಶನಿ ದಾರಿದ್ರ್ಯವನ್ನೀಯುವನು, ರಾಹುವು ಸಂತಾನ ಹಾನಿಯನ್ನುಂಟು ಮಾಡುವನು, ಈ ಮೇರೆ ಸೂರ್ಯಾದಿ ೮ ಗ್ರಹಗಳು ಅವರವರ ಎಂಟು ಗುಣಗಳಿಂದ ಈ ೮ ಫಲಗಳನ್ನು ಕೊಡುವರು.

## ವಿವಾಹಲಗ್ನ ಗುಣಗಳು

**ಧನತ್ರಿಬಂಧುತನಯಧರ್ಮಜ್ಞಾಯೇಷುಚಂದ್ರಮಾಃ ।**
**ಕರೋತಿಸುತಸೌಭಾಗ್ಯಭೋಗಯುಕ್ತಾನ್ವಿವಾಹಿತಾನ್ ॥**

ವಿವಾಹಲಗ್ನಕ್ಕೆ ೨-೩-೪-೫-೯-೧೦-೧೧ ಈ ಸ್ಥಾನಗಳಲ್ಲಿರುವ ಚಂದ್ರನು ದಂಪತಿಗಳಿಗೆ ಪುತ್ರ, ಭೋಗ, ಭಾಗ್ಯಗಳನ್ನು ಉಂಟುಮಾಡುವನು.

**ಪಾತಾಳಾಂಬರಪಂಚಮೇದ್ವಿನವಮೇ ಲಗ್ನೇಚಸೌಮ್ಯಗ್ರಹಾಃ।**
**ಕ್ರೂರಾಷಷ್ಟಗತಾಶಶೀಧನಗತಸ್ಸರ್ವೇತ್ರಿರೇಕಾದಶಂ ।**
**ಜಾಮಿತ್ರಂಗ್ರಹವರ್ಜಿತಂ ನಚಭೃಗೋಃಷಟ್ಕಂಕುಜಸ್ಯಾಷ್ಟಮಂ ।**
**ದಂಪತ್ಯೋರ್ಜನಿತೋಡುಲಗ್ನಸಮುಯಂಲಗ್ನಾಷ್ಟಮದ್ವಾದಶಂ॥**

ವಿವಾಹಲಗ್ನಕ್ಕೆ ೪-೫-೧೦-೨-೯-೧ ನೇ ಸ್ಥಾನಗಳಲ್ಲಿ ಗುರು ಶುಕ್ರ ಬುಧ ಚಂದ್ರ ಈ ಶುಭಗ್ರಹಗಳಿರಬೇಕು, ಆದರೆ ಚಂದ್ರನು ಮಾತ್ರ ಲಗ್ನದಲ್ಲಿರ ಕೂಡದು, ದ್ವಿತೀಯದರಲ್ಲಿರತಕ್ಕದ್ದು, ರವಿ, ಕುಜ, ಶನಿ, ರಾಹು, ಕೇತು ಗಳು ೩-೬-೧೧ ಈ ಸ್ಥಾನಗಳಲ್ಲಿರತಕ್ಕದ್ದು, ಸಪ್ತಮದಲ್ಲಿ ಯಾವ ಗ್ರಹವೂ ಇರಕೂಡದು, ವಿವಾಹಲಗ್ನಕ್ಕೆ ೬ ರಲ್ಲಿ ಶುಕ್ರನು, ೮ ರಲ್ಲಿ ಕುಜನಿರಕೂಡದು, ಮತ್ತು ದಂಪತಿಗಳ ಜನ್ಮನಕ್ಷತ್ರ ಜನ್ಮರಾಶಿಗಳು, ಜನ್ಮ ಲಗ್ನಕ್ಕೆ ೮, ೧೨ನೇ ರಾಶಿಗಳು ಸಹ ವಿವಾಹದಲ್ಲಿ ಅಪ್ರಶಸ್ತಗಳೆಂದು ತಿಳಿಯಬೇಕು.

**ಕೇಂದ್ರತ್ರಿಕೋಣ ಭವನೇಯದಿಶೋಭನೈಕಸ್ಸ್ವೋಚ್ಚಸ್ವವರ್ಗ ಸಹಿತೋಃಬಲವಾನ್ಪ್ರವಿಷ್ಟಃ । ಪಾಪೈಸ್ತಥಾವಿಧಗುಣೆ ಸ್ತ್ರೀ ಷಡಾಯಗೈಶ್ಚಯೋಗೋಃವಿವಾಹಸಮಯೇಃಬಹುಪುತ್ರದಾತಾ ॥**

ವಿವಾಹಲಗ್ನದ ಕೇಂದ್ರಸ್ಥಾನದಲ್ಲಾದರೂ ತ್ರಿಕೋಣಸ್ಥಾನದಲ್ಲಾದರೂ ಒಂದು ಶುಭಗ್ರಹವು, ಉಚ್ಚ ಮೂಲತ್ರಿಕೋಣ ಸ್ವಕ್ಷೇತ್ರ ಸ್ವಕೀಯ ಷಡ್ವರ್ಗ ಸಹಿತನಾಗಿಯೂ ಬಲಿಷ್ಠನಾಗಿಯೂ ಇರುವಾಗಲೂ ಹಾಗೆಯೇ, ಪಾಪಗ್ರಹ ಗಳು ಸ್ಥಾನಾದಿ ಬಲಯುಕ್ತರಾಗಿ ೩-೬-೧೧ ಈ ಸ್ಥಾನಗಳಲ್ಲಿರುವಾಗಲೂ ಇಂಥಾ ಶುಭಯೋಗದಲ್ಲಿ ವಿವಾಹವು ದಂಪತಿಗಳಿಗೆ ಬಹುಪುತ್ರರನ್ನುಂಟು ಮಾಡುತ್ತದೆ.

**ಲಾಭಸ್ಥೇಃಸೂರ್ಯಪುತ್ರೇಃಚ ಷಷ್ಠೆಸೂರ್ಯೇಃಚತಿಷ್ಠತಿ ।**
**ವಿಲಗ್ನೇತುಸಿತೇಜೀವೆ ತೃತೀಯೆಧರಣೀಸುತೆ ।**
**ಚಂದ್ರೇಃಚದಶಮರ್ಕೇಃತು▒ಶುಕ್ರೆರಂಧ್ರೇಃಚಸಂಸ್ಥಿತೆ ।**
**ಏಕಸ್ತುಸ್ಯಾತ್ಸಮಾಯೋಗೊ ದಂಪತ್ಯೋಃಪುತ್ರಪೌತ್ರದಃ ॥**

ವಿವಾಹಲಗ್ನಕ್ಕೆ ೧೧ ರಲ್ಲಿ ಶನಿಯು, ೬ ರಲ್ಲಿ ರವಿಯೂ, ಲಗ್ನದಲ್ಲಿ ಗುರುವು, ೩ ರಲ್ಲಿ ಕುಜನು, ೧೦ ರಲ್ಲಿ ಚಂದ್ರನು, ೮ ರಲ್ಲಿ ಶುಕ್ರನೂ ಇದ್ದರೆ ಇಂಥಾ ಶುಭಯೋಗವು ದಂಪತಿಗಳಿಗೆ ಮಕ್ಕಳನ್ನುಂಟುಮಾಡುತ್ತದೆ.

**ಲಗ್ನೇಗುರುಃ ಕುಜೋಲಾಭೆ ದಶಮೇಭಾಸ್ಕರೋಭವೇತ್ ।**
**ಉಮಾಶಂಕರಮಿತ್ಯಾಹುರ್ದಂಪತ್ಯೋಃಶ್ಚಸುಖಾವಹಃ ॥**

ವಿವಾಹಲಗ್ನದಲ್ಲಿ ಗುರುವು, ೧೧ ರಲ್ಲಿ ಕುಜನು, ೧೦ ರಲ್ಲಿ ರವಿಯು ಇದ್ದರೆ ಇದು ಉಮಾಶಂಕರ ಯೋಗವೆಂಬುದು, ಈ ಶುಭಯೋಗವು ದಂಪತಿಗಳಿಗೆ ಪುತ್ರರನ್ನೀಯುತ್ತದೆ.

**ಕುಜಾರ್ಕಶುಕ್ರಜೀವಾಸ್ಸ್ಯುರಾಪೋಕ್ಲೀಬಗತಾಯದಿ ।**
**ರಮಾವಿಷ್ಣುರಿತಿಖ್ಯಾತೋ ದಂಪತ್ಯೋಃಶ್ಚಸುಖಾವಹಃ ॥**

ಕುಜ ರವಿ ಶುಕ್ರ ಗುರುಗಳು ವಿವಾಹಲಗ್ನಕ್ಕೆ ೩-೬-೯-೧೨ ನೇ ಸ್ಥಾನಗಳಲ್ಲಿದ್ದರೆ ರಮಾವಿಷ್ಣು ಯೋಗವೆಂಬ ಶುಭಯೋಗವು ದಂಪತಿಗಳಿಗೆ ಸುಖಕರವಾಗಿಹುದು.

## ರಾಹುಕೇತುದೋಷಃ

**ಲಗ್ನಾಸ್ತಸಂಸ್ಥೌಯದಿರಾಹುಕೇತೂ ನದೋಷದೌವೇತಿವದಂತಿ ಕೇಚಿತ್ । ತ್ರಿಸ್ಕಂಧಶಾಸ್ತ್ರಾಗಮವೇದಿನಸ್ತು ಲಗ್ನಾಸ್ತಗೌತಾಚಹಿವರ್ಜಯಂತಿ ॥**

ವಿವಾಹಲಗ್ನಕ್ಕೆ ಲಗ್ನಸಪ್ತಮಗಳಲ್ಲಿ ರಾಹು ಕೇತುಗಳಿದ್ದರೆ ದೋಷವಿಲ್ಲವೆನ್ನುತ್ತಾರೆ, ತ್ರಿಸ್ಕಂಧಶಾಸ್ತ್ರವನ್ನು ತಿಳಿದ ಕೆಲವರು ಲಗ್ನಸಪ್ತಮಗಳಲ್ಲಿ ರಾಹುಕೇತುಗಳಿರಕೂಡದೆನ್ನುತ್ತಾರೆ.

## ಲಗ್ನಾಸ್ತ ರಾಹುದೋಷ ಭಂಗವು

**ವಿವಾಹೇಷುಚದೇವಾನಾಂ ಪ್ರತಿಷ್ಠಾಸೂಪನಾಯನೆ ।**
**ಛಾಯಾಗ್ರಹೌತುವಿಜ್ಞೇಯೌ ರಾಹುಕೇತೂನದೋಷದೌ ॥**

ವಿವಾಹದಲ್ಲಿಯೂ, ದೇವಪ್ರತಿಷ್ಠೆಯಲ್ಲಿಯೂ ಉಪನಯನದಲ್ಲೂ ಛಾಯಾಗ್ರಹಗಳಾದ ರಾಹುಕೇತುಗಳ ದೋಷವಿಲ್ಲ.

## ಚಂದ್ರನ ಅಸ್ತ ವೃದ್ಧ ಬಾಲ್ಯವು

ವೃದ್ಧತ್ವಮಿಂಧೋಸ್ತ್ರಿದಿನಂದಿನಾರ್ಧಂ ಬಾಲತ್ವಮಸ್ತತ್ವಮುಹ ರ್ದ್ವಯಂಚ । ಅಸ್ತೇವಿಧೌಮೃತ್ಯುಮುಪೈತಿಕನ್ಯಾ ಬಾಲೇನ್ನಸಕ್ತಾವಿಧವಾಚವೃದ್ಧೇ ॥

ಚಂದ್ರನಿಗೆ ೩ ದಿನಗಳು ವೃದ್ಧತ್ವವು, ೧|| ದಿನ ಬಾಲತ್ವವು ೨ ದಿನಗಳು ಅಸ್ತತ್ವವು. ಹೀಗೆ ಚಂದ್ರನು ಅಸ್ತಗತನಾಗಿರುವಾಗ ಮದುವೆಯಾದರೆ ಕನ್ಯೆಗೆ ಮರಣವುಂಟಾಗುತ್ತದೆ. ಅವನು ಬಾಲನಾಗಿದ್ದರೆ ಕನ್ಯೆ ವ್ಯಭಿಚಾರಿಯಾಗುತ್ತಾಳೆ ಅವನು ವೃದ್ಧನಾಗಿರುವಾಗ ವಿವಾಹವಾದರೆ ಅವಳು ವಿಧವೆಯಾಗುತ್ತಾಳೆ.

**ಭವತ್ಯಮೃತರಶ್ಮಿತ್ವಾದ್ಬಾಲೋಽಪಿಶುಭದಶ್ಶಶೀ ।**
**ಶಶೀಶಿಶುರ್ದ್ವಿತೀಯಾಯಾಂ ಶುಭಂಕಾರ್ಯಂಸದಾಬುಧೈಃ ॥**

ಚಂದ್ರನು ಅಮೃತಕಿರಣನಾದ್ದರಿಂದ ಅವನು ಬಾಲನಾಗಿದ್ದಾಗ್ಯೂ ಶುಕ್ಲ ದ್ವಿತೀಯೆಯಲ್ಲಿ ಶುಭಕಾರ್ಯಗಳನ್ನು ಮಾಡತಕ್ಕದ್ದು

## ಗ್ರಹಣ ದೋಷವು

**ಗ್ರಸ್ತೆಸ್ತೆತ್ರಿದಿನಂಪೂರ್ವಂ ಪಶ್ಚಾದ್ಗ್ರಸ್ತೋದಯೆತಥಾ ।**
**ಸಂಧ್ಯಾಕಾಲೇತ್ರಿತ್ರಿದಿನಂ ನಿಶ್ಶೇಷೆಸಪ್ತಸಪ್ತಚ ॥**

ಸೂರ್ಯ ಚಂದ್ರರಿಗೆ ಗ್ರಸ್ತಾಸ್ತಮಯ ಗ್ರಹಣವಾದಾಗ ಗ್ರಹಣಕ್ಕೆ ಮುಂದೆ ಮೂರು ದಿನಗಳು ಬಿಡತಕ್ಕದ್ದು, ಗ್ರಸ್ತೋದಯವಾದಾಗ ಗ್ರಹಣ ದಿನಾನಂತರ ಮೂರು ದಿನಗಳನ್ನು ಬಿಡಬೇಕು, ಸಂಧ್ಯಾಕಾಲ ಗ್ರಹಣದಲ್ಲಿ ಮುಂದೆಯೂ ಹಿಂದೆಯೂ ೩ ದಿನಗಳನ್ನು ಬಿಡಬೇಕು, ಸಂಪೂರ್ಣ ಗ್ರಹಣದಲ್ಲಿ ಮುಂದೂ ಹಿಂದೂ ಏಳೇಳು ದಿನಗಳನ್ನು ಬಿಡತಕ್ಕದ್ದು

**ಉತ್ಪಾತಗ್ರಹಣಾದೂರ್ಧ್ವಂ ಸಪ್ತಾಹಮಖಿಲಗ್ರಹೆ ।**
**ನಾಖಿಲೆತ್ರಿದಿನಂನಷ್ಟಂ ನಷ್ಟಂತದ್ಭಂಮೃತುತ್ರಯಂ ॥**

ಕಂಕಣಗ್ರಹಣ ಮೊದಲಾದ ಉತ್ಪಾತಗ್ರಹಣಗಳಲ್ಲೂ, ಪೂರ್ಣಗ್ರಾಸದಲ್ಲೂ, ಪರದಲ್ಲಿ ಏಳುದಿನಗಳೂ ಸಂಪೂರ್ಣವಲ್ಲದ ಗ್ರಹಣದಲ್ಲಿ ೩ ದಿನಗಳೂ, ಅಪ್ರಶಸ್ತಗಳು. ಯಾವ ನಕ್ಷತ್ರದಲ್ಲಿ ಗ್ರಹಣ ಹಿಡಿಯುತ್ತದೋ ಆ ನಕ್ಷತ್ರವು ಆರುತಿಂಗಳವರಿಗೂ ಶುಭಕಾರ್ಯಗಳಲ್ಲಿ ತ್ಯಾಜ್ಯವು.

**ಪಕ್ಷಗ್ರಹಣಮಧ್ಯೇತು ವಿವಾಹಂಚೋಪನಾಯನಂ ।**
**ಯದಿಕುರ್ಯಾತ್ಸಮೂಢಾತ್ಮಾ ನಷ್ಟಾಯುಸ್ತ್ರಿವಿಯೋಗವಾನ್ ॥**

ಪೂರ್ಣಿಮಾ, ಅಮಾವಾಸ್ಯ ಎರಡರಲ್ಲಿಯೂ ಗ್ರಹಣ ಬರುವಾಗ ಇವುಗಳ ಮಧ್ಯಕಾಲದಲ್ಲಿ ಯಾವನಾದರೂ ಅಜ್ಞಾನದಿಂದ ವಿವಾಹೋಪನಯನ

ಗಳನ್ನು ಮಾಡಿದರೆ ಅವನು ಅಲ್ಪಾಯುಸ್ಸಾಗಿಯೂ ಸ್ತ್ರೀಹೀನನಾಗಿಯೂ ಆಗುತ್ತಾನೆ.

## ತ್ರಿಜ್ಯೇಷ್ಠ ನಿಷೇಧಃ

**ಜ್ಯೇಷ್ಠಾಂಗನಾಕರಗ್ರಹಣಂನಕುರ್ಯಾಜ್ಜ್ಯೈಷ್ಠರ್ಕ್ಷಜಸ್ಯಪುರುಷಸ್ಯ ಚಶುಕ್ರಮಾಸೆಚೆದರ್ಥಹಾನಿಕಲಹಪ್ರದಮಾಶುತದ್ವ ಜ್ಯೇಷ್ಠಾಂ ಗನಾಪುರುಷಯೋಕ್ರ ಪರಸ್ಪರಂಚ ॥**

ಜ್ಯೇಷ್ಠಮಾಸದಲ್ಲಿ ಜ್ಯೇಷ್ಠಾನಕ್ಷತ್ರದಲ್ಲಿಯೇ ಹುಟ್ಟಿದ ಸ್ತ್ರೀ ಪುರುಷರಿಗೆ ವಿವಾಹ ಮಾಡಕೂಡದು, ಯಾಕಂದರೆ ಇದು ತ್ರಿಜ್ಯೇಷ್ಠವಾಗುವದರಿಂದ ಇಂಥಾ ವಿವಾಹವನ್ನು ಮಾಡಿದರೆ ದ್ರವ್ಯಹಾನಿ, ಕಲಹಗಳುಂಟಾಗುತ್ತವೆ. ಹಾಗೆಯೇ ಜ್ಯೇಷ್ಠ ಪುತ್ರನಿಗೂ ಜ್ಯೇಷ್ಠ ಕನ್ಯೆಗೂ ಜ್ಯೇಷ್ಠ ಮಾಸದಲ್ಲಿ ವಿವಾಹ ಮಾಡಕೂಡದು.

**ಆದ್ಯಗರ್ಭೇದ್ವಯೋರ್ಯತ್ರ ಜ್ಯೇಷ್ಠಾನಕ್ಷತ್ರಜಾತಯೋಃ ।**
**ಜ್ಯೇಷ್ಠಮಾಸೇನಕುರ್ವೀತ ಜ್ಯೇಷ್ಠಂಪಂಚಕಮೀರಿತಂ ॥**

ಪ್ರಥಮ ಗರ್ಭಗಳಲ್ಲಿಯೂ ಜ್ಯೇಷ್ಠಾ ನಕ್ಷತ್ರಗಳಲ್ಲಿಯೂ ಹುಟ್ಟಿದ ಸ್ತ್ರೀ ಪುರುಷರಿಗೆ ಜ್ಯೇಷ್ಠಮಾಸದಲ್ಲಿ ವಿವಾಹ ಮಾಡಿದರೆ ಪಂಚ ಜ್ಯೇಷ್ಠವಾಗುವದರಿಂದ ಅಶುಭಕರವಹುದು.

## ಏಕೋದರ ವಿವಾಹವು

**ವಿವಾಹಶ್ಚೈಕಜನ್ಯಾನಾಂ ಷಣ್ಮಾಸಾಭ್ಯಂತರೆಯದಿ ।**
**ಅಸಂಶಯಂತ್ರಿಭಿರ್ವರ್ಷೈಸ್ತತ್ರೈಕಾವಿಧವಾಭವೇತ್ ॥**

ಒಂದೇ ಗರ್ಭದಲ್ಲಿ ಹುಟ್ಟಿದ ಇಬ್ಬರೂ ಕನ್ಯೆಯರಿಗಾಗಲೀ ಮೂವರಿಗಾಗಲೀ ಅವರಲ್ಲಿ ಒಬ್ಬಳಿಗೆ ಮದುವೆಯಾದ ೬ ತಿಂಗಳೊಳಗಾಗಿ ಮತ್ತೊಬ್ಬಳಿಗೆ ಮದುವೆಯಾದರೆ ೩ ವರ್ಷಗಳೊಳಗಾಗಿ ಅವರಲ್ಲೊಬ್ಬಳು ವಿಧವೆಯಾಗುವುದಕ್ಕೆ ಸಂದೇಹವಿಲ್ಲ.

**ಕದಾಚಿದೇಕಜನ್ಯಾನಾಂ ನವಿವಾಹವ್ರುತುತ್ರಯೆ ।**
**ಯತ್ರವರ್ಷೇಣತತ್ರೈಕಾ ವಿಧವೈವನಸಂಶಯಃ ॥**

ಒಂದು ಗರ್ಭದಲ್ಲಿ ಹುಟ್ಟಿದ ಇಬ್ಬರು ಕನ್ಯೆಯರಿಗೆ ೬ ತಿಂಗಳೊಳಗಾಗಿ

ಮದುವೆಯಾದರೆ ಒಂದು ವರ್ಷದೊಳಗಾಗಿ ಅವರಲ್ಲೊಬ್ಬಳು ವಿಧವೆಯಾಗು ತ್ತಾಳೆಯಾಗಿ ಅಂತವರಿಗೆ ಮದುವೆಯನ್ನು ಮಾಡಕೂಡದು.

**ಪುತ್ರೀವಿವಾಹಾತ್ಪರತಸ್ತ್ವಥೈವ ಶುಭಪ್ರದಂಪುತ್ರವಿವಾಹಕರ್ಮ।**
**ಪುತ್ರೀದ್ವಯಂನೈನಋತುತ್ರಯೇಽಪಿ ಪುತ್ರದ್ವಯಂವಾಪಿಕದಾ ಚಿದೇವ ||**

ಮೊದಲು ಕನ್ಯೆಗೆ ಮದುವೆಯನ್ನು ಮಾಡಿ ಆಮೇಲೆ ಮಗನಿಗೆ ಮದುವೆ ಯನ್ನು ಮಾಡತಕ್ಕದ್ದು, ಅಷ್ಟೇ ಹೊರ್ತು ಇಬ್ಬರು ಹೆಣ್ಣುಮಕ್ಕಳಿಗೆ ಒಂದೇ ಕಾಲದಲ್ಲೂ ಅಥವಾ ಆರುತಿಂಗಳೊಳಗಾಗಿಯೂ ಮದುವೆಯನ್ನು ಮಾಡ ಕೂಡದು.

**ಮಹಾನದೀಪರ್ವತಮಂತರಾವಾ ಕೃತ್ವಾವಿವಾಹಂಸಹಜಸ್ಯ ತಸ್ಯ । ತಸ್ಯಾನುಜಸ್ಯಾಪಿತದೈವಕಾರ್ಯಂ ಮೌಂಜೀನಿಬಂಧಾಖ್ಯ ಮಿದಂಹಿಶಸ್ತಂ ||**

ಇಬ್ಬರು ಸಹೋದರರಲ್ಲಿ ಜ್ಯೇಷ್ಠ ಕನಿಷ್ಟರಿಗೆ ವಿವಾಹ ಉಪನಯನ ಗಳನ್ನು ಮಾಡಬೇಕಾಗಿ ಬಂದರೆ ಗಂಗಾಮಹಾನದಿಗಳಾಗಲಿ ವಿಂಧ್ಯಾದಿಪರ್ವತ ಗಳಾಗಲಿ ಅಡ್ಡವಾಗಿರುವ ಬೇರೆಬೇರೆ ಸ್ಥಳಗಳಲ್ಲಿ ಮಾಡಿದರೆ ಶುಭಕರವು, ಅದರಲ್ಲಿಯೂ ದೊಡ್ಡವನಿಗೆ ಮುಂದೆ ಮದುವೆಯನ್ನು ಮಾಡಿಸಿ ತಮ್ಮನಿಗೆ ಉಪನಯನವನ್ನು ಮಾಡತಕ್ಕದ್ದು.

**ಶುಭಕೃತ್ಪುತ್ರಿಕೋದ್ವಾಹಾತ್ಪಶ್ಚಾತ್ಪುತ್ರಕರಗ್ರಹಃ ।**
**ಏಕತಿಥ್ಯಾಮಪಿಪ್ರಾಹ ಭಾರ್ಗವೋಽಭಿನ್ನವೇಳಯಾ ||**

ಮಗಳಿಗೂ ಮಗನಿಗೂ ಮದುವೆಗಳನ್ನು ಒಂದೇ ದಿನದಲ್ಲಿ ಮಾಡ ಬೇಕಾಗಿ ಬಂದರೆ ಬೇರೆ ಬೇರೆ ಲಗ್ನಗಳನ್ನು ಇಟ್ಟುಕೊಂಡು ಒಂದೇ ತಿಥಿಯಲ್ಲಿ ಮಾಡಬಹುದೆಂಬದಾಗಿ ಶುಕ್ರಾಚಾರ್ಯರು ಹೇಳಿರುವರು.

**ಪೃಥಙ್ಮಂಟಪಯೋಃಕೆಚಿನ್ನಾರ್ಯೋರೇಕೋದರಸ್ತಯೋಃ ।**
**ಇಚ್ಛಂತಿಭಿನ್ನವೇಳಾಯಾಂ ತಯೋರುದ್ವಾಹಮಂಗಳಂ ||**

ಏಕೋದರರಾದ ಇಬ್ಬರು ಕನ್ಯೆಯರಿಗೆ ಬೇರೆಬೇರೆ ವಿವಾಹಮಂಟಪ ಗಳಲ್ಲೂ ಬೇರೆಬೇರೆ ಲಗ್ನಗಳಲ್ಲೂ ವಿವಾಹ ಮಾಡಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ

**ಏಕಲಗ್ನೇಪಿಭಿನ್ನಾಂಶೆ ವಸಿಷ್ಠಾತ್ರಿಪರಾಶರಾಃ ।**
**ತಯೋರ್ವಿವಾಹಮಿಚ್ಛಂತಿ ಪೃಥಗ್ರಾಮೇಥಮಂಟಪೆ ॥**

ಒಂದೇ ಲಗ್ನದಲ್ಲಾದರೂ ಅಂಶಭೇದಗಳಲ್ಲೂ ಬೇರೆಬೇರೆ ಗ್ರಾಮಗಳಲ್ಲೂ ಬೇರೆ ಬೇರೆ ಮಂಟಪಗಳಲ್ಲೂ ಏಕೋದರರಾದ ಕನ್ಯೆಯರಿಗೆ ವಿವಾಹ ಮಾಡಬಹುದೆಂಬುದಾಗಿ ವಸಿಷ್ಠರು, ಅತ್ರಿಯು, ಪರಾಶರರು, ಈ ಋಷೀಶ್ವರರುಗಳು ಹೇಳಿರುವರು.

**ಫಾಲ್ಗುನೆಚೈತ್ರಮಾಸೇಚ ಪುತ್ರ್ಯೋದ್ವಾಹೋಪನಾಯನೆ ।**
**ಭೇದಾದಬ್ದಸ್ವಕುರ್ವೀತ ನರ್ತುತ್ರಯವಿಳಂಬನಂ ॥**

ಜ್ಯೇಷ್ಠ ಕನಿಷ್ಠ ಪುತ್ರರಿಗೆ ವಿವಾಹೋಪನಯನಗಳನ್ನು ಮಾಡಬೇಕಾದರೆ ಫಾಲ್ಗುನ ಮಾಸದಲ್ಲಿ ವಿವಾಹವನ್ನು ಚೈತ್ರ ಮಾಸದಲ್ಲಿ ಉಪನಯನವನ್ನು ಸಹ ಮಾಡಬಹುದು ಇದರಲ್ಲಿ ವರ್ಷಭೇದ ಉಂಟಾಗಿ ಇರುವದರಿಂದ ಮೂರು ಋತು ಕಳಿಯಬೇಕೆಂಬ ಶಾಸ್ತ್ರಕ್ಕೆ ಒಂದು ವರ್ಷದೊಳಗಿನ ಮೂರು ಋತುಗಳೆಂಬುದೇ ಅರ್ಥವಾದುದರಿಂದ ಈ ದೋಷಕ್ಕೆ ಇಲ್ಲಿ ಪ್ರಸಕ್ತಿ ಇರುವುದಿಲ್ಲ.

**ಕುಮಾರ್ಯೋಸ್ಸುತಯೋಃಪುತ್ರಪುತ್ರ್ಯೋರೇಕೋದರಸ್ಥಯೋಃ।**
**ವಿವಾಹೋಬ್ದಾಂತರ್ಕೈಶಸ್ತಸ್ತ್ವಯೋರ್ನದ್ಯಂತರೆಯಥಾ ॥**

ಒಂದೇ ಗರ್ಭದಲ್ಲಿ ಹುಟ್ಟಿದ ಹೆಣ್ಣುಮಕ್ಕಳಿಗಾದರೂ, ಗಂಡುಮಕ್ಕಳಿಗಾದರೂ, ಹೆಣ್ಣು ಗಂಡುಗಳಿಗಾದರೂ, ಒಂದೇ ಕಾಲದಲ್ಲಿ ಮದುವೆ ಮಾಡಬೇಕಾಗಿ ಬಂದರೆ ಮಹಾನದಿ ಅಡ್ಡವಾಗಿ ಅದರ ಉಭಯ ಪಾರ್ಶ್ವಗಳಲ್ಲಿರುವ ಗ್ರಾಮಗಳಲ್ಲಿ ಮಾಡಿದಂತೆ ಬೇರೆ ಬೇರೆ ವರ್ಷಗಳಲ್ಲಿ ಮಾಡಿದರೆ ಶುಭಕರವಾಗುವುದು.

**ಕಲ್ಪಯೆದ್ವೆದಿಕಾಂರಮ್ಯಾಂ ಮಂಟಪಂಚಪೃಥಕ್ಪೃಥಕ್ ।**
**ಭಿಂನೋದರಪ್ರಸೂತಾನಾಮೆಕತಿಥ್ಯಾಂಕರಗ್ರಹಃ ॥**

ಬೇರೆಬೇರೆ ರಮ್ಯಗಳಾದ ವಿವಾಹಮಂಟಪಗಳನ್ನೂ ಮದುವೆ ವೇದಿಕೆಗಳನ್ನೂ ನಿರ್ಮಾಣಮಾಡಿ ಅವುಗಳಲ್ಲಿ ಮದುವೆ ಮಾಡಿಸಬಹುದು, ಏಕೋದರರಲ್ಲದೆ ಸವತಿಗಳ ಮಕ್ಕಳುಗಳಿಗೆ ಒಂದೇ ತಿಥಿಯಲ್ಲೂ ಮದುವೆಯನ್ನು ಮಾಡಬಹುದು.

**ಮುಂಡನಾನ್ಮಂಡನಂಚೈವ ಮುಂಡನಾನ್ನತುಮುಂಡನಂ ||**

ಮಕ್ಕಳಿಗೆ ವಿವಾಹೋಪನಯನಗಳನ್ನು ಮಾಡಬೇಕಾಗಿ ಬಂದಾಗ ಮೊದಲು ಉಪನಯನವನ್ನು ಮಾಡಿ ತರುವಾಯ ಮದುವೆಯನ್ನು ಮಾಡ ತಕ್ಕದ್ದು.

## ಅಭಿಜಿದ್ಗೋಧೂಳಿ ಲಕ್ಷಣವು

**ಮಧ್ಯಂದಿನಗತೇಭಾನೌ ಮುಹೂರ್ತೋಭಿಜಿದಾಹ್ವಯಃ |**
**ಸರ್ವದೋಷಾನ್ನಿಹಂತ್ಯಾಶು ಪಿನಾಕೀತ್ರಿಪುರಂಯಥಾ ||**

ಸೂರ್ಯನು ಸರಿಯಾಗಿ ಆಕಾಶಮಧ್ಯದಲ್ಲಿ ನಿಂತಾಗ ಒಂದು ಮುಹೂರ್ತ ಕಾಲ ಅಭಿಜಿತ್ತೆಂಬ ಶುಭಕಾಲ, ಅಂಥಾ ಕಾಲವು ಮಹೇಶ್ವರನು ತ್ರಿಪುರ ಗಳನ್ನು ಸುಟ್ಟಂತೆ ಸಕಲ ದೋಷಗಳನ್ನು ನಾಶಮಾಡುತ್ತದೆ.

**ಸೂರ್ಯಾಚ್ಚತುರ್ಥಂಯಲ್ಲಗ್ನಮಭಿಜಿತ್ಸಂಜ್ಞಿಕಂಚತತ್ |**
**ಸರ್ವದೇಶೇಷ್ವಿದಂಮುಖ್ಯಂ ಸರ್ವವರ್ಣೇಷುಸರ್ವದಾ ||**

ಸೂರ್ಯನಿರುವ ಲಗ್ನಕ್ಕೆ ನಾಲ್ಕನೇ ಲಗ್ನವು ಅಭಿಜಿತ್ ಅನ್ನಿಸಿಕೊಳ್ಳು ತ್ತದೆ, ಇದು ಸರ್ವ ದೇಶದಲ್ಲೂ ಸರ್ವ ವರ್ಣಗಳಲ್ಲೂ ಮುಖ್ಯವಾದುದು.

**ಅಶೇಷದೋಷಾಪಹರಂಶುಭಪ್ರದಂ ಜಗುರ್ಮುನೀಂದ್ರಾಅಭಿ ಜಿನ್ಮುಹೂರ್ತಂ| ತಥೈವಗೋಧೂಳಿಕ ನಾಮಧೇಯಂ ವಿವಾಹ ಯಾತ್ರಾದ್ಯಖಿಲೋತ್ಸವೇಷು ||**

ಪೂರ್ವಋಷಿಗಳು ಮದುವೆ ಯಾತ್ರೆ ಮುಂತಾದ ಸರ್ವ ಶುಭಕಾರ್ಯ ಗಳಲ್ಲೂ ಅಭಿಜಿನ್ಮುಹೂರ್ತ ಗೋಧೂಳಿ ಲಗ್ನ ಇವೆರಡುಗಳನ್ನೂ ಸರ್ವದೋಷ ಹರಗಳನ್ನಾಗಿಯೂ ಶುಭಕರಗಳನ್ನಾಗಿಯೂ ಹೇಳುತ್ತಾರೆ.

**ಅಭಿಜಿತ್ಸರ್ವಕಾರ್ಯೇಷು ಶಸ್ತಂನಾತ್ರೋಪನಾಯನಂ |**
**ಸೂರ್ಯಾತ್ಸಪ್ತಮಲಗ್ನಂ ಯದ್ಗೋಧೂಳಿಕಮಿತಿಸ್ಮೃತಂ ||**

ಅಭಿಜಿನ್ಮುಹೂರ್ತವು ಸರ್ವಶುಭಕಾರ್ಯಗಳಲ್ಲೂ ಪ್ರಶಸ್ತವಾದರೂ ಉಪ ನಯನದಲ್ಲಿ ಮಾತ್ರ ಅಪ್ರಶಸ್ತವು ಸೂರ್ಯನಿರುವ ರಾಶಿಗೆ ೭ ನೇ ರಾಶಿ ಗೋಧೂಳಿ ಲಗ್ನವೆನ್ನಿಸಿಕೊಳ್ಳುತ್ತದೆ.

**ಪಾಶ್ಚಾತ್ಯಾನಾಂಕಳಿಂಗಾನಾಂ ಮುಖ್ಯಂಗೋಧೂಳಿಕಂಸ್ಮೃತಂ**
**ಅಭಿಜಿತ್ಸರ್ವದೇಶೇಷು ಮುಖ್ಯಂದೋಷವಿನಾಶಕೃತ್ ||**

ಪಶ್ಚಿಮದೇಶದವರಿಗೂ ಕಳಿಂಗದೇಶದವರಿಗೂ ಗೋಧೂಳಿಲಗ್ನ ಮುಖ್ಯ. ಕಡಿಮೆ ಎಲ್ಲಾ ದೇಶಗಳಲ್ಲೂ ಅಭಿಜಿತ್ತು ಶ್ರೇಷ್ಠವಾಗಿಯೂ ದೋಷಹರವಾಗಿಯೂ ಇರುವುದು.

## ನೂತನ ವಧೂಪ್ರವೇಶವು-ವಾಸಿಷ್ಠದಲ್ಲಿ

**ಷಷ್ಠೇಷ್ಟಮೇವಾ ದಶಮುಂದಿನೇವಾ ವಿವಾಹಮಾರಭ್ಯವಧೂಪ್ರವೇಶಃ ।**
**ಪಂಚಾಂಗಶುದ್ಧಿಂಚದಿನಂವಿನಾಪಿ ತಿಥೌನಸದ್ಗೋಚರಕೇಪಿಕಾರ್ಯಃ ॥**

ಮದುವೆಯಾದ ೬-೮-೧೦ ಈ ದಿನಗಳಲ್ಲಿ ಪಂಚಾಂಗಶುದ್ಧಿ ಇಲ್ಲದಿದ್ದಾಗ್ಯೂ ಗೋಚಾರ ನೆಟ್ಟಗೆ ಇಲ್ಲದಿದಾಗ್ಯೂ ಮದುವೆಯಾದ ಹೆಣ್ಣಿಗೆ ಪತಿಯ ಗೃಹಪ್ರವೇಶ ಮಾಡಿಸಬಹುದು

**ವಿವಾಹಮಾರಭ್ಯವಧೂಪ್ರವೇಶೋ ಯುಗ್ಮೇದಿನೇಷೋಡಶವಾಸರಾಂತೇ । ತದೂರ್ಧ್ವಮಬ್ದೇಯುಜಿಪಂಚಮೇವಾ ಶಸ್ತಸ್ತದೂರ್ಧ್ವಂವಿಷಮೇಸಮೇವಾ ॥**

ವಿವಾಹದಿನ ಮೊದಲು ೧೬ ದಿನಗಳವರಿಗೂ ಯುಗ್ಮಗಳಾದ ೬-೮-೧೦-೧೨-೧೪-೧೬ ಈ ದಿನಗಳಲ್ಲಿ ನೂತನ ವಧುವಿಗೆ ಗೃಹಪ್ರವೇಶ ಮಾಡಿಸತಕ್ಕದ್ದು, ಅದು ಕಳೆದ ತರುವಾಯ ಸಮಗಳಾದ ೨-೪ ಈ ಸಂವತ್ಸರಗಳಲ್ಲಿ ಮಾಡತಕ್ಕದ್ದು, ಅಥವಾ ವಿಷಮವಾದಾಗ್ಯೂ ೫ ನೇ ವರ್ಷದಲ್ಲಾದರೂ ಮಾಡತಕ್ಕದ್ದು, ಅದೂ ಕಳೆದ ಮೇಲೆ ಯಾವ ಸಂವತ್ಸರದಲ್ಲಾದರೂ ಶುಭ ದಿನ ವಾರ ನಕ್ಷತ್ರ ಲಗ್ನಗಳಲ್ಲಿ ನೂತನ ವಧೂಪ್ರವೇಶ ಮಾಡಿಸತಕ್ಕದ್ದು.

**ವಧೂಪ್ರವೇಶಂಪ್ರಥಮೇಚವರ್ಷೇ ತೃತೀಯವರ್ಷೇಪಿಶುಭಂವದಂತಿ । ವರ್ಷೇದ್ವಿತೀಯೇಪ್ಯಥವಾಚತುರ್ಥೇ ವಧೂಪ್ರವೇಶಸ್ತ್ವಥಭರ್ತೃನಾಶಃ ॥**

ಹೊಸದಾಗಿ ಮದುವೆಯಾದ ಕನ್ಯೆಗೆ ಗೃಹಪ್ರವೇಶವು ೧ ನೇ ೩ ನೇ ವರ್ಷಗಳಲ್ಲಿ ಶುಭಕರವು, ೨ ನೇ ೪ ನೇ ವರ್ಷಗಳಲ್ಲಿ ಅಶುಭಕರಗಳು.

## ಮೂರುವಿಧ ಪ್ರವೇಶವು

**ವಧೂಪ್ರವೇಶೇನದಿವಾಪ್ರಶಸ್ತೋ ನೃಪಪ್ರವೇಶೋನಿಶಿಪ್ರಶಸ್ತಃ । ದಿವಾಚರಾತ್ರೌಚಗೃಹಪ್ರವೇಶಃ ಕರೋತಿಕರ್ತುಶ್ಶುಭಕಾರ್ಯಸಿದ್ಧಿಂ ॥**

ಹಗಲಿನಲ್ಲಿ ಸ್ತ್ರೀಗೆ ನೂತನ ಗೃಹಪ್ರವೇಶ ಮಾಡಕೂಡದು, ರಾಜಗೃಹ ಪ್ರವೇಶವು ರಾತ್ರಿಯಲ್ಲಿ ಮಾಡತಕ್ಕದ್ದಲ್ಲ, ನೂತನ ವಧೂಪ್ರವೇಶವು ರಾತ್ರಿ ಯಲ್ಲೂ ರಾಜಗೃಹಪ್ರವೇಶ ಹಗಲಲ್ಲಿಯೂ ಮಾಡತಕ್ಕದ್ದು, ಅದು ಮಂಗಳ ಕರವಾಗುತ್ತದೆ.

## ವಧೂಪ್ರವೇಶ ನಕ್ಷತ್ರವಾರಾದಿಗಳು

**ನೀಹಾರಾಂಶುವಸೂತ್ತರಾದಿಗುರುಸ್ರಷ್ಟ್ಯಾನುರಾಧಾಶ್ವಿನೀ ।**
**ಶಕ್ರಾಹಾಸ್ಕರವಾಯುವರುಣಹರಿತ್ವಾಷ್ಟ್ರೈಷುಶಸ್ತೈತಿಥೌ ।**
**ಕುಂಭಾಜಾಳಿಗತೆತವಾಖರಕರೆ ಪ್ರಾಪ್ತ್ಯೋದಯೆಭಾರ್ಗವೆ ।**
**ಜೀವೆಕ್ಯಾರ್ಸ್ಫುಜಿತಾದಿನೆ ನವವಧೂಸದ್ಮಪ್ರವೇಶಶ್ಶುಭಃ ॥**

ಮೃಗಶೀರ್ಷ, ಧನಿಷ್ಠಾ, ಉತ್ತರಾ, ಉಷಾ, ಉಭಾ, ಪುನರ್ವಸೂ, ಪುಷ್ಯ, ರೋಹಿಣಿ, ಅನೂರಾಧಾ, ಅಶ್ವಿನಿ, ಜ್ಯೇಷ್ಠಾ, ಹಸ್ತ, ಸ್ವಾತಿ, ಶತ ಭಿಷಕ್, ಶ್ರವಣ, ಚಿತ್ರಾ, ಈ ನಕ್ಷತ್ರಗಳಲ್ಲಿ ಪ್ರಶಸ್ತವಾದ ತಿಥಿಯಲ್ಲಿಯೂ ಸೂರ್ಯನು ಕುಂಭ ಮೇಷ ವೃಶ್ಚಿಕಗಳಲ್ಲಿ ಇರುವಾಗಲೂ ಗುರು ಶುಕ್ರರು ಉದಯವಾಗಿರುವಾಗಲೂ ನೂತನವಧೂ ಗೃಹಪ್ರವೇಶವು ಶುಭಕರವಹುದು.

**ಪೌಷಧಿಮಾಸೇಚಹರೌಪ್ರಸುಪ್ತೇ ದ್ವಿತೀಯವರ್ಷೇ ಗುರು ಶುಕ್ರಮೂಢೇ । ನವೋಢಿಕಾಯಾನಕರೋತಿಮಂದಿರಪ್ರವೇಶ ಮೇವಂ ಮುನಯೋವದಂತಿ ॥**

ಪುಷ್ಯಮಾಸದಲ್ಲೂ, ಅಧಿಕ ಮಾಸದಲ್ಲೂ, ಆಷಾಢ, ಶ್ರಾವಣ, ಭಾದ್ರ ಪದ, ಆಶ್ವಯುಜ ಮಾಸದಲ್ಲೂ ವಿವಾಹವಾದ ಎರಡನೇ ವರ್ಷದಲ್ಲೂ ಗುರು ಶುಕ್ರರ ಮೂಢದಲ್ಲೂ ನೂತನ ವಧೂಪ್ರವೇಶವನ್ನು ಮಾಡಕೂಡದೆಂದು ಮುನೀಶ್ವರರು ಹೇಳಿರುತ್ತಾರೆ.

## ಮಲಮಾಸ ಸ್ವರೂಪವು

**ಅಸಂಕ್ರಾಂತಿಮಾಸೋಧಿಮಾಸಸ್ಫುಟಸ್ಸ್ಯಾದ್ದ್ವಿಸಂಕ್ರಾಂತಿ ಮಾಸಃ ಕ್ಷಯಾಖ್ಯಃ ಕದಾಚಿತ್ । ಕ್ಷಯಃಕಾರ್ತಿಕಾದಿತ್ರಯೇ ನಾನ್ಯಥಾಸ್ಯಾತ್ತಥಾವರ್ಷಮಧ್ಯೇಧಿಮಾಸದ್ವಯಂಚ ॥**

ಯಾವ ತಿಂಗಳಲ್ಲಿ ಸೂರ್ಯನ ಸಂಕ್ರಾಂತಿ ಇಲ್ಲವೊ ಅದು ಅಧಿಕ ಮಾಸ ವೆಂದು ವ್ಯಕ್ತವಾಗಿದೆ, ಎರಡು ಸೂರ್ಯಸಂಕ್ರಾಂತಿಯುಳ್ಳ ಮಾಸವು ಕ್ಷಯಮಾಸ ವೆನ್ನಿಸಿಕೊಳ್ಳುತ್ತದೆ, ಅಂಥಾ ಕ್ಷಯಮಾಸವು ಕಾರ್ತಿಕ, ಮಾರ್ಗಶೀರ್ಷ, ಪುಷ್ಯ ಈ ಮೂರು ಮಾಸಗಳಾಗುತ್ತದೆ, ಇತರ ಮಾಸಗಳಲ್ಲಾಗುವದಿಲ್ಲ. ಅಂಥಾ ಕ್ಷಯಮಾಸ ಉಂಟಾದಾಗ ಆ ವರ್ಷದ ಮಧ್ಯದಲ್ಲಿ ಎರಡು ಅಧಿಕ ಮಾಸಗಳುಂಟಾಗುತ್ತವೆಂದು ತಿಳಿಯುವುದು.

**ಕ್ಷಯಮಾಸೆಯದಾ ಜಾತಸ್ಸಂಸರ್ಪಾಖ್ಯದ್ವಯಂಭವೇತ್ ।**
**ಸಂಸರ್ಪಃಪೂರ್ವಮಾಸಸ್ಸ್ಯಾದಧಿಮಾಸಃ ಪರಸ್ಮೃತಃ ॥**

ಯಾವ ವರ್ಷದಲ್ಲಿ ಕ್ಷಯಮಾಸ ಬರುವುದೋ ಆ ವರ್ಷದಲ್ಲಿ ಉಂಟಾ ಗುವ ಎರಡು ಅಧಿಕ ಮಾಸಗಳಲ್ಲಿ ಮೊದಲನೆಯದು ಸಂಸರ್ಪವೆಂಬದಾ ಗಿಯೂ, ೨ನೇಯದು ಅಧಿಕಮಾಸ ಎಂಬುದಾಗಿಯೂ ತಿಳಿಯುವುದು.

**ಗರ್ಭೇವಾರ್ದುಷಿಕೆಭೃತ್ಯೇ ಶ್ರಾದ್ಧಕರ್ಮಣಿಮಾಸಿಕೆ ।**
**ಸಪಿಂಡೀಕರಣೇನಿತ್ಯೇ ನಾಧಿಮಾಸಂವಿವರ್ಜಯೇತ್ ॥**

ಗರ್ಭಾದಾನ ಸೀಮಂತ ಪುಂಸವನಾದಿ ಕರ್ಮಗಳಲ್ಲಿಯೂ, ಚುಂಗಡಿ ಸಹ ಸಾಲಾ ತೀರಿಸಿಕೊಳ್ಳುವದರಲ್ಲಿಯೂ, ಆಳನ್ನಿರಿಸಿಕೊಳ್ಳುವದರಲ್ಲಿಯೂ, ಸಾಂವತ್ಸರೀಕಾದಿ ಶ್ರಾದ್ಧಗಳಲ್ಲಿಯೂ, ಸಪಿಂಡಿಕರಣದಲ್ಲೂ ಸಹ ಅಧಿಕ ಮಾಸವನ್ನು ಬಿಡಕೂಡದು, ಅದರಲ್ಲಿಯೂ ಮಾಡಿಯೇ ತೀರಬೇಕೆಂದು ಭಾವವು.

**ಚಂದ್ರಸೂರ್ಯಗ್ರಹಸ್ನಾನಶ್ರಾದ್ಧದಾನಜಪಾದಿಕಂ ।**
**ಕಾರ್ಯಂಸ್ಯಾನ್ಮಲಮಾಸೇಪಿ ನಿತ್ಯನೈಮಿತ್ತಿಕಂಯಥಾ ॥**

ಚಂದ್ರ ಸೂರ್ಯ ಗ್ರಹಣ ಸ್ನಾನ ಶ್ರಾದ್ಧಜಪಾದಿ ಕರ್ಮಗಳನ್ನು ಮಲ ಮಾಸದಲ್ಲೂ ಮಾಡತಕ್ಕದ್ದೇಯೆಂದು ಹೇಳಿದರು

**ವಾಪೀಕೂಪತಟಾಕಾದಿಪ್ರತಿಷ್ಠಾಯಜ್ಞಕರ್ಮಣಿ ।**
**ಗೃಹಪ್ರವೇಶಹೋಮಾದಿನಾನಾಕ್ರತುಮಹೋತ್ಸವಾಃ ।**
**ತೀರ್ಥಯಾತ್ರೋತ್ಸವಾದೀನಿ ಮಹಾದಾನವ್ರತಾದಿಚ ।**
**ಮಾಸಪ್ರಾಧಾನ್ಯಕಂಕರ್ಮಮುಕ್ತ್ವಾತತ್ಕಾಮ್ಯಕರ್ಮಚ ।**
**ನಕುರ್ಯಾನ್ಮಲಮಾಸೇಪಿ ಗುರೌಶುಕ್ರೇಥವಾಸ್ತಗೆ ॥**

ವಾಪೀಕೂಪತಟಾಕಾದಿ ಪ್ರತಿಷ್ಠೆಗಳು, ಯಜ್ಞಕರ್ಮಗಳು, ಗೃಹ ಪ್ರವೇಶ, ಹೋಮ, ದೇವೋತ್ಸವ, ತೀರ್ಥಯಾತ್ರಾ, ಮಹಾದಾನ, ಮಹಾ ವ್ರತ, ಮಾಸಪ್ರಧಾನಗಳಾದ ಇತರ ಕಾಮ್ಯಕರ್ಮಗಳು ಇಂಥಾವುಗಳನ್ನೆಲ್ಲಾ ಮಲಮಾಸದಲ್ಲೂ ಗುರು ಶುಕ್ರಾಸ್ತಮಯಗಳಲ್ಲಿಯೂ ಮಾಡಕೂಡದು.

## ಸ್ತ್ರೀಯರ ಋತು ವಿಷಯ

**ಅನುಪಚಯಸ್ಥೇಚಂದ್ರೇ ಧರಣೀಸುತವೀಕ್ಷಣಾದ್ವಾಪಿ ।**
**ಪ್ರಥಮರಜೋದರ್ಶನತಶ್ಶುಭಾಶುಭಂಭವತಿವನಿತಾನಾಂ ॥**

ಚಂದ್ರನು ಆರ್ತವ ಲಗ್ನಕ್ಕೆ ೩-೬-೧೧ ಈ ಸ್ಥಾನಗಳಲ್ಲಿ ಇಲ್ಲದೆ ಇರು ವಾಗಲೂ ರಜೋದರ್ಶನ ಲಗ್ನಕ್ಕೆ ಅಂಗಾರಕನ ದೃಷ್ಟಿಯಿಂದಲೂ ಆ ಸ್ತ್ರೀಗೆ ಶುಭಾಶುಭಗಳು ಮಿಶ್ರವಾಗಿರುವುವು

## ದಿಕ್ಕುಗಳ ಫಲ

**ಶೈಲಚಂದ್ರಾಷ್ಟಜಲಧಿ ರಸಾಕ್ಷಿನವದಿಕ್ಕ್ರಮಾತ್ ।**
**ಪ್ರಾಗಾದಿಸ್ಯಾತ್ಪ್ರಜಾಸಂಖ್ಯಾ ಬಾಲಿಕಾಪ್ರಥಮಾರ್ತವೇ ॥**

ಕನ್ಯೆಯು ಮೊದಲನೇ ಋತುವಾದಲ್ಲಿ ಪೂರ್ವದಿಕ್ಕು ಮೊದಲು ಕ್ರಮ ವಾಗಿ ಪುತ್ರಸಂಖ್ಯೆಯು ಹೇಗೆಂದರೆ, ೭-೧-೮-೪-೬-೨-೯-೧೦ ಇಷ್ಟಿಷ್ಟು ಪುತ್ರ ಸಂಖೆಯನ್ನು ತಿಳಿಯುವದು.

## ಆರ್ತವವಸ್ತ್ರ ನಿರ್ಣಯವು

**ಮೇಷಸಿಂಹೋಕ್ಷಚಾಪಾನಾಮುದಯೇಧವಳಾಂಬರಾ ॥**
**ಅಳಿಕರ್ಕಟನಕ್ರಾಣಾಮುದಯೆಮಲಿನಾಂಬರಾ ॥**
**ಘುಟಯುಗ್ಮಾಂಗನಾತೌಳಿ ಲಗ್ನೆರಕ್ತಯುತಾಂಬರಾ ।**
**ವೃಚ್ಛಕಾಲೆಭವತ್ಯೇವಂ ಬಾಲಿಕಾಪ್ರಥಮಾರ್ತವೇ ॥**

ಕನ್ಯೆಯು ಪ್ರಥಮ ಋತುವಾದಾಗ ಎಂಥಾ ವಸ್ತ್ರ ಉಟ್ಟಿದ್ದಳೆಂದು ಪ್ರಶ್ನೆ ಮಾಡುವಲ್ಲಿ ಪ್ರಶ್ನೆಕಾಲ ಮೇಷ, ಸಿಂಹ, ವೃಷಭ, ಧನುರ್ಲಗ್ನಗಳಾಗಿದ್ದರೆ ಬಿಳೀಶೀರೆ ಉಟ್ಟಿದ್ದಳೆಂದೂ, ವೃಶ್ಚಿಕ, ಕಟಕ, ಮಕರ ಲಗ್ನಗಳಾದರೆ ಕೊಳಕು ಶೀರೆ ಉಟ್ಟಿದ್ದಳೆಂದೂ; ಕುಂಭ, ಮಿಥುನ, ಕನ್ಯೆ, ತುಲಾ ಲಗ್ನಗಳಾದರೆ ಕೆಂಪುಶೀರೆ ಉಟ್ಟಿದ್ದಳೆಂದೂ ಹೇಳತಕ್ಕದ್ದು.

## ಋತುಕಾಲದಲ್ಲಿ ಉಟ್ಟಿದ್ದ ವಸ್ತ್ರಫಲ

**ಸುಭಗಾಶ್ವೇತವಸ್ತ್ರಾಸ್ಯಾದ್ದೃಢವಸ್ತ್ರಾಪತಿವ್ರತಾ ।**
**ಕ್ಷೌಮವಸ್ತ್ರಾಕ್ಷಿತೀಶಾಸ್ಯಾನ್ನವವಸ್ತ್ರಾ ಶುಭಾನ್ವಿತಾ ॥**
**ದುರ್ಭಗಾಜೀರ್ಣವಸ್ತ್ರಾಸ್ಯಾದ್ರೋಗಿಣೀರಕ್ತಧಾರಿಣೀ ।**
**ನೀಲಾಂಬರಧರಾನಾರೀ ವಿಧವಾಪುಷ್ಪಿಣೀಭವೇತ್ ॥**
**ಮಲಿನಾಂಬರಸಂವೀತಾ ದರಿದ್ರಾಸ್ಯಾದ್ರಜಸ್ವಲಾ ।**
**ದೃಢವಸ್ತ್ರಫಲಂಸಮ್ಯಗ್ಗದಿತಂಮುನಿಪುಂಗವೈಃ ॥**

ಸ್ತ್ರೀಯು ಪ್ರಥಮ ಋತುವಾದಾಗ ಬಿಳಿಶೀರೆ ಉಟ್ಟಿದ್ದರೆ ಸೌಭಾಗ್ಯ ಉಂಟಾಗುವದು, ಅದರಲ್ಲಿಯೂ ದೃಢವಾದ ಶೀರೆ ಉಟ್ಟಿದ್ದರೆ ಪತಿವ್ರತೆಯಾಗುವಳು, ಬಿಳೀ ರೇಷ್ಮೆ ಶೀರೆಯುಟ್ಟಿದ್ದರೆ ಮಹಾರಾಜನ ಹೆಂಡತಿಯಾಗುವಳು, ಹೊಸ ಶೀರೆಯುಟ್ಟಿದ್ದರೆ ಶುಭವುಂಟಾಗುವದು, ಹರಕಲುಶೀರೆ ಉಟ್ಟಿದ್ದರೆ ನಿರ್ಭಾಗ್ಯೆಯಾಗುವಳು, ಶುದ್ಧ ಕೆಂಪುಶೀರೆಯುಟ್ಟಿದ್ದರೆ ರೋಗವತಿಯಾಗುವಳು, ಕರೀಶೀರೆಯುಟ್ಟಿದ್ದರೆ ಮುಂಡೆಯಾಗುವಳು, ಮಲಿನವಾದ ಕೊಳಕು ಶೀರೆಯುಟ್ಟಿದ್ದರೆ ದರಿದ್ರಯಾಗುವಳು, ಈ ಮೇರೆ ಋತುಕಾಲದಲ್ಲಿ ಉಟ್ಟಿದ್ದ ಶೀರೆಗಳ ಫಲಗಳನ್ನು ತಿಳಿಯುವುದು.

## ರಜೋಬಿಂದು ಫಲಗಳು

**ಇಂದ್ರೆ ಗುಹೋಗ್ನೌಯಮುಪಿನವಾರ್ಧಿರನ್ವೈವೃಷೇವಾಯುದಿಶಿದ್ವಿಸಂಖ್ಯಾ। ಕುಬೇರಈಶೆಶಶಿಬಿಂದುರೇಕೊ ವಸ್ತ್ರೇಷುಸಕ್ತೋನವಪುಷ್ಪವತ್ಯಾಃ ॥**

ಪೂರ್ವದಿಕ್ಕು ಆಗ್ನೇಯುಮೂಲೆ ಇವುಗಳಲ್ಲಿ ೩ ಬಿಂದುಗಳು, ದಕ್ಷಿಣದಿಕ್ಕಿನಲ್ಲೂ ನಿರುಋತಿಯಲ್ಲೂ ೪ ಬಿಂದುಗಳು, ಪಶ್ಚಿಮದಲ್ಲೂ ವಾಯುವ್ಯದಲ್ಲೂ ೪ ಬಿಂದುಗಳು, ಉತ್ತರ ಈಶಾನ್ಯದಿಕ್ಕುಗಳಲ್ಲಿ ೧ ಬಿಂದುವು, ಅಂದರೆ ಕನ್ಯೆಯು ಋತುವಾದಳೆಂಬುದಾಗಿ ಫಲಗಳನ್ನು ಕೇಳುವದಕ್ಕಾಗಿ ಜೋತಿಷ್ಕನ ಬಳಿಗೆ ಬಂದಂತಾವರು ಯಾವ ದಿಕ್ಕಿನಲ್ಲಿ ನಿಂತು ಕೇಳುತ್ತಾರೋ ಆ ದಿಕ್ಕನ್ನು ಹಿಡಿದು ಬಿಂದುಗಳ ಸಂಖ್ಯೆಯನ್ನು ಹೇಳತಕ್ಕದ್ದು.

**ಪ್ರಾಪ್ನೋತಿ ಬಿಂದುನೈಕೇನ ಸೌಭಾಗ್ಯಂಚದ್ವಿಬಿಂದುನಾ ।**
**ಭೋಗಸ್ತ್ರಿಬಿಂದುನಾರೋಗೋ ದಾರಿದ್ರ್ಯಂಬಹುಬಿಂದುನಾ॥**

ಒಂದು ಬಿಂದುವಿನಿಂದ ಸೌಭಾಗ್ಯವು, ೨ ಬಿಂದುಗಳಿಂದ ಭೋಗವು, ಮೂರು ಬಿಂದುಗಳಿಂದ ರೋಗವು, ಬಹುಬಿಂದುಗಳಿಂದ ದಾರಿದ್ರ್ಯವು ಉಂಟಾಗುತ್ತದೆ.

## ಕಾಲಫಲವು

**ಪುಷ್ಪವತ್ಯಾಶ್ಶುಭಂಪ್ರಾತಃ ಪೂರ್ವಾಹ್ಣೆ ತೀರ್ಥಗಾಮಿನಿ ।**
**ಮಧ್ಯಾಹ್ನೆ ಸುತಸೌಭಾಗ್ಯಾ ಚಾಪರಾಹ್ಣೇತುಜಾರಿಣೀ ।**
**ಸಾಯಾಹ್ನೆಬಹುಪತ್ನೀಸ್ಯಾತ್ಸಂಧ್ಯಯೋರ್ಶ್ವೈಶ್ಯತಾಂವ್ರಜೇತ್ ।**
**ಪೂರ್ವರಾತ್ರೇಚಿರಾಯುಸ್ಸ್ಯಾನ್ನಿಶೀಥೆವಿಧವಾಭವೇತ್ ।**
**ನಿಶಾಂತೆಸುಖಹೀನಾಸ್ಯಾದ್ದುರ್ಭಗಾಪರ್ವಸಂಧಿಷು ॥**

ಪ್ರಾತಃಕಾಲದಲ್ಲಿ ಪುಷ್ಪವತಿಯಾದರೆ ಶುಭ ಉಂಟಾಗುವುದು, ಪೂರ್ವಾಹ್ಣದಲ್ಲಿ ತೀರ್ಥಯಾತ್ರೆ ಮಾಡುವಳು, ಮಧ್ಯಾಹ್ನದಲ್ಲಿ ಪುತ್ರಭಾಗ್ಯವತಿಯಾಗುವಳು, ಅವರಾಹ್ಣದಲ್ಲಿ ವ್ಯಭಿಚಾರಿಯಾಗುವಳು, ಸಾಯಾಹ್ಣದಲ್ಲಿ ಬಹುಜನ ಮಿಂಡರುಳ್ಳವಳಾಗುವಳು, ೨ ಸಂಧ್ಯೆಗಳಲ್ಲಿ ಸೂಳೆಯಾಗುವಳು, ಪೂರ್ವರಾತ್ರಿಯಲ್ಲಾದರೆ ದೀರ್ಘಾಯುಷ್ಯವತಿಯಾಗುವಳು, ಅರ್ಧರಾತ್ರಿಯಲ್ಲಿ ವಿಧವೆಯಾಗುವಳು, ಬೆಳಗಿನ ಝಾಮದಲ್ಲಿಯಾದರೆ ಯಾವಾಗಲೂ ದುಃಖಪಟ್ಟುಕೊಂಡಿರುವಳು, ಪರ್ವ ಸಂಧಿಗಳಲ್ಲಿ ನಿರ್ಭಾಗ್ಯೆಯಾಗುವಳು.

## ತಿಥಿಗಳ ಫಲವು

**ಸಂತಾನಹೀನಾಪ್ರತಿಪದ್ದಿನೇಚ ಭವೇದ್ದ್ವಿತೀಯಲ್ಪಸುಖಾ ತೃತೀಯೆ । ಸಮಸ್ತಸೌಭಾಗ್ಯವತೀಚತುರ್ಥ್ಯಾಂ ಪಾಪಾಲಯಾ ಭೋಗವಿವರ್ಜಿತಾಚ ॥**

ಪಾಡ್ಯಮಿಯಲ್ಲಿ ಪ್ರಥಮ ಋತುವಾದ ಕನ್ಯೆಯು ಸಂತಾನಹೀನೆಯಾಗುತ್ತಾಳೆ, ದ್ವಿತೀಯೆಯಲ್ಲಿ ಸ್ವಲ್ಪ ಸುಖಪಡುತ್ತಾಳೆ, ತೃತೀಯೆಯಲ್ಲಿ ಸಮಸ್ತ ಸೌಭಾಗ್ಯವತಿಯೂ, ಚತುರ್ಥಿಯಲ್ಲಿ ಪಾಪಿಷ್ಠೆಯಾಗಿಯೂ ಭೋಗವಿಲ್ಲದವಳಾಗಿಯೂ ಆಗುತ್ತಾಳೆ.

**ಪಂಚಮ್ಯಾಂ ಬಹುಪುತ್ರ ಭೋಗಸಹಿತಾ ಷಷ್ಠ್ಯಾಂತು ದುರ್ಭಾಷಿಣೀ।ಸಪ್ತಮ್ಯಾಂಧನಧಾನ್ಯಭೂಷಣಯುತಾ ಶೌರ್ಯಾ**

**ಸ್ವಿತಾಹ್ಯಷ್ಟಮೆ । ದುಃಖಾರ್ತಾನವಮೇದಿನೇಹ್ನಿದಶಮೇಸೌಭಾಗ್ಯ ಯುಕ್ತಾವರಾ । ಶುದ್ಧಾರುದ್ರದಿನೇತಥಾರ್ಕದಿವಸೇಸ್ಯಾದ್ದ್ವೇಷಿಣೇ ಸರ್ವದಾ ॥**

ಪಂಚಮಿಯಲ್ಲಿ ಬಹುಪುತ್ರ ಭೋಗವತಿಯಾಗಿಯೂ, ಷಷ್ಠಿಯಲ್ಲಿ ಕೆಟ್ಟ ಮಾತಾಡುವಳಾಗಿಯೂ, ಸಪ್ತಮಿಯಲ್ಲಿ ಧನಧಾನ್ಯ ಭೂಷಣವತಿಯಾಗಿಯೂ, ಅಷ್ಟಮಿಯಲ್ಲಿ ಧೈರ್ಯವುಳ್ಳವಳಾಗಿಯೂ, ನವಮಿಯಲ್ಲಿ ದುಃಖಿತೆಯಾಗಿಯೂ, ದಶಮಿಯಲ್ಲಿ ಸೌಭಾಗ್ಯವತಿಯಾಗಿಯೂ, ಏಕಾದಶಿಯಲ್ಲಿ ಹೃದಯ ಶುದ್ಧಿಯುಳ್ಳವಳಾಗಿಯೂ, ದ್ವಾದಶಿಯಲ್ಲಿ ಪರದೂಷಣೆ ಮಾಡುವಳಾಗಿಯೂ ಆಗುತ್ತಾಳೆ.

**ತ್ರಯೋದಶ್ಯಾಂತುಸಂತುಷ್ಟಾ ಭೂತಾಯಾಂಪಾಪಿನೀಭವೇತ್ । ಪೂರ್ಣಿಮಾಯಾಂತುಸಂಪುಷ್ಟಾ ಚಾಮಾಯಾಮಲ್ಪ ಭೋಗಿನೀ ॥**

ತ್ರಯೋದಶಿಯಲ್ಲಿ ಸಂತುಷ್ಟೆಯಾಗುವಳು, ಚತುರ್ದಶಿಯಲ್ಲಿ ಪಾಪಿಷ್ಠೆಯಾಗುವಳು, ಪೂರ್ಣಿಮೆಯಲ್ಲಿ ಧನಪೂರ್ಣೆಯಾಗುವಳು, ಅಮಾವಾಸ್ಯೆಯಲ್ಲಿ ಕಷ್ಟಜೀವಿಯಾಗುವಳು.

## ವಾರಫಲ-ಕಾಶ್ಯಪದಲ್ಲಿ

**ರೋಗಿಣೀರವಿವಾರೇಚ ಸೋಮವಾರೆ ಪತಿವ್ರತಾ ।**
**ದುಃಖಿಕಾಭೌಮವಾರೇತು ಬುಧೆಸೌಭಾಗ್ಯಸಂಯುತಾ ।**
**ಶ್ರೀಸಂಯುತಾಗುರೋರ್ವಾರೆ ಪತಿಭಕ್ತಿರ್ಭೃಗೋರ್ದಿನೆ ।**
**ಮಲಿನಾಮಂದವಾರೇತು ರಾತ್ರಾವಪಿತಥೈವಚ ॥**

ಭಾನುವಾರದಲ್ಲಿ ಋತುವಾದರೆ ಹೆಣ್ಣು ರೋಗಿಷ್ಠಿಯಾಗುವಳು, ಸೋಮವಾರದಲ್ಲಿ ಪತಿವ್ರತೆಯು, ಮಂಗಳವಾರದಲ್ಲಿ ದುಃಖಿತೆಯು, ಬುಧವಾರದಲ್ಲಿ ಧನಧಾನ್ಯಸಂಪನ್ನೆಯು, ಗುರುವಾರದಲ್ಲಿ ಸಂಪತ್ತುಳ್ಳವಳು, ಶುಕ್ರವಾರದಲ್ಲಿ ಪತಿಭಕ್ತಿಯುಳ್ಳವಳು, ಶನಿವಾರದಲ್ಲಿ ಯಾವಾಗ್ಯೂ ಕೊಳಕಾದ ದೇಹಮನಸ್ಸುಳ್ಳವಳಾಗಿಯೂ ಆಗುವಳು ಈ ವಾರ ಫಲಗಳು ರಾತ್ರಿಯಲ್ಲಿ ಹಗಲಲ್ಲಿ ಸಹ ಉಂಟಾಗುವದು.

## ಶುಭನಕ್ಷತ್ರಗಳು

**ಕರಾದಿಪಂಚೋತ್ತರ ಮೂಲ ಪೂಷ ವಿಷ್ಣುತ್ರಯಾಶ್ವಿಜ್ಯ ವಿಧೀಂದುಭೇಷು। ಆದ್ಯಂರಜಸ್ಸೌಖಸುತಾಯುರರ್ಥಂಸೌಭಾಗ್ಯ ವೃದ್ಧಿಂಕುರುತೇಂಗನಾನಾಂ ॥**

ಹಸ್ತ, ಚಿತ್ರಾ, ಸ್ವಾತಿ, ವಿಶಾಖ, ಅನೂರಾಧಾ, ಉತ್ತರಾ, ಉಷಾ, ಉಭಾ, ಮೂಲ, ರೇವತಿ, ಶ್ರವಣ, ಧನಿಷ್ಠಾ, ಶತಭಿಷಕ್, ಅಶ್ವಿನಿ, ಪುಷ್ಯ, ರೋ, ಮೃ, ಈ ನಕ್ಷತ್ರಗಳಲ್ಲಿ ಮೊದಲು ಋತುವಾದ ಹೆಣ್ಣು ಸೌಖ್ಯ, ಪುತ್ರ, ಆಯುಸ್ಸು, ಧನ, ಸೌಭಾಗ್ಯ ವೃದ್ಧಿಯನ್ನು ಹೊಂದುವಳು.

## ದುಷ್ಟನಕ್ಷತ್ರ ಫಲಗಳು

**ಪೂರ್ವತ್ರಯೇಯಾಮ್ಯಭುಜಂಗಧಿಷ್ಣ್ಯೇ ತಾಂಬೂಲತೈಲಂ ಕುಸುಮಂಹರಿದ್ರಾಂ । ತದ್ಭರ್ತೃ ಸಂದರ್ಶನಮೇವವರ್ಜ್ಯಂ ತಾತ್ಕಾಲಿಕಂಶಾಂತಿವಿಧಿಂಪ್ರಕುರ್ಯಾತ್ ॥ ರೌದ್ರೇಮಖೇಶೋಕ ಯುತಾದಿತೇರ್ಭೆ ಸಾಬಂಧಕೀಂದ್ರೈಪ್ಯನಲೇದರಿದ್ರಾ ॥**

ಪೂರ್ವಫಲ್ಗುನೀ, ಪೂಷಾ, ಪೂಭಾ, ಭರಣೀ, ಆಶ್ಲೇಷಾ, ಈ ನಕ್ಷತ್ರ ಗಳಲ್ಲಿ ಋತುವಾದ ಹೆಣ್ಣು ತಾಂಬೂಲ, ಅಭ್ಯಂಗನ, ಪುಷ್ಪ, ಅರಸಿನ, ಇವು ಗಳನ್ನು ಬಿಟ್ಟು ಆ ನಕ್ಷತ್ರಗಳಲ್ಲಿ ಋತುವಾದ ದೋಷಕ್ಕೆ ಶಾಂತಿ ಕರ್ಮವನ್ನು ಮಾಡುವವರಿಗೂ ಗಂಡನ ಮುಖ ನೋಡದೆ ಇರಬೇಕು, ಶಾಂತಿ ಕರ್ಮವಾದ ತರುವಾಯ ಬಿಟ್ಟದ್ದನ್ನೆಲ್ಲಾ ಸ್ವೀಕರಿಸಬಹುದು, ಮತ್ತು ಆದ್ರಾ, ವಿಶಾಖಾ ಈ ನಕ್ಷತ್ರಗಳಲ್ಲಿ ಋತುವಾದವಳು ದುಃಖಿಸುತ್ತಿರುವಳು, ಪುನರ್ವಸು ಜ್ಯೇಷ್ಠಾ ಇವುಗಳಲ್ಲಿ ಋತುವಾದರೆ ವ್ಯಭಿಚಾರಿಯಾಗುವಳು, ಕೃತ್ತಿಕೆಯಲ್ಲಿ ಪುಷ್ಪವತಿ ಯಾದವಳು ದರಿದ್ರೆಯಾಗುವಳು.

**ಕೃತ್ತಿಕಾದಿತ್ಯರೌದ್ರೇಪಿ ಮಖಾಜ್ಯೇಷ್ಠರಜಸ್ವಲಾ ।**
**ಆದಿಪಾದೇಶುಭಂಪ್ರೋಕ್ತಂ ಸಾಕನ್ಯಾಮಂಗಳಪ್ರದಾ ॥**
**ದ್ವಿಪಾದೇಚೇದ್ರಜೋದೃಷ್ಟಂ ಪಂಚವಿಂಶತಿಭೋಜನಂ ।**
**ತ್ರಿಪಾದೇಚ ಚತುಷ್ಪಾದೆ ಶಾಂತಿಂಕುರ್ಯಾದ್ಯಥಾವಿಧಿ ॥**

ಕೃತ್ತಿಕಾ, ಪುನರ್ವಸು, ಆದ್ರಾ, ಜ್ಯೇಷ್ಠಾ, ಮಖಾ, ಈ ನಕ್ಷತ್ರಗಳ

೧ನೇ ಪಾದದಲ್ಲಿ ಋತುವಾದರೆ ಸ್ತ್ರೀಯರಿಗೆ ಮಂಗಳವಹುದು, ೨ನೇ ಪಾದದಲ್ಲಾದರೆ ೨೫ ಬ್ರಾಹ್ಮಣರಿಗೆ ಸಮಾರಾಧನೆ ಮಾಡಿದರೆ ತದ್ದೋಷ ಪರಿಹಾರವಾಗುವದು ೩-೪ನೇ ಪಾದಗಳಲ್ಲಾದರೆ ಆ ದೋಷಕ್ಕೆ ಶಾಸ್ತ್ರೋಕ್ತ ಕ್ರಮದಿಂದ ಶಾಂತಿಕರ್ಮವನ್ನು ಮಾಡಬೇಕು.

## ಶುಭನಕ್ಷತ್ರ ಫಲಗಳು-ಗ್ರಂಥಾಂತರದಲ್ಲಿ

**ಧನಿಷ್ಠಾ ವಿಷ್ಣು ಮೂಲಾಸುವಾರ್ಯಸ್ಸ್ಯಾತ್ಸುತಪಂಚಕಂ ।**
**ಮೃಗೋತ್ತರಕರತ್ವಷ್ಟ್ರ ಶತತಾರಾಸುವೈದಶ ।**
**ದ್ವಿದೈವಸ್ವಾತಿಮೂಲಾಶ್ವಿಮೈತ್ರೇಷ ಚಸುತಾಷ್ಟಕಂ ।**
**ಪ್ರಾಜಾಪತ್ಯೇಸ್ಸುತಾಸಪ್ತ ಚಾಂತ್ಯೆಚನವಕಂಭವೇತ್ ॥**

ಧನಿಷ್ಠಾ, ಶ್ರವಣ, ಮೂಲ ಇವುಗಳಲ್ಲಿ ಋತುವಾದ ಹೆಂಗಸಿಗೆ ಐದು ಮಕ್ಕಳು ಹುಟ್ಟುವರು, ಮೃಗಶೀರ್ಷ, ಉತ್ತರಾ, ಉಷಾ, ಉಭಾ, ಹಸ್ತ, ಚಿತ್ತಾ, ಶತಭಿಷಕ್, ಇವುಗಳಲ್ಲಿಯಾದರೆ ೧೦ ಮಕ್ಕಳುಂಟಾಗುವರು, ವಿಶಾಖಾ, ಸ್ವಾತೀ, ಮೂಲ, ಅಶ್ವಿನೀ, ಅನೂರಾಧಾ ಇವುಗಳಲ್ಲಿ ೮ ಮಕ್ಕಳುಂಟಾಗುವರು, ರೋಹಿಣಿಯಲ್ಲಿಯಾದರೆ ೭ ಮಕ್ಕಳು ರೇವತಿಯಲ್ಲಿಯಾದರೆ ೯ ಮಕ್ಕಳು ಉಂಟಾಗುವರು.

## ದುಷ್ಟನಕ್ಷತ್ರ ಫಲಗಳು

**ಪೂರ್ವತ್ರಯೆದರಿದ್ರಾಸ್ಸ್ಯಾತ್ಕೃತ್ತಿಕಾಯಾಂತುದುರ್ಭಗಾ ।**
**ಆದ್ರಾರ್ಯಾಂ ಪುತ್ರನಾಶಸ್ಸ್ಯಾದ್ಭರಣ್ಯಾಂಸ್ವಮೃತಿರ್ಭವೇತ್ ।**
**ಮಖಾಯಾಂಭರ್ತೃನಾಶಸ್ಸ್ಯಾತ್ಸಾರ್ಪೇಚಂಡಾಲಗಾಮಿನೀ ।**
**ದರಿದ್ರಿಣೀಚಜ್ಯೇಷ್ಠಾಯಾಂ ರತಿಹೀನಾಚಜಾಯತೆ ॥**

ಪೂಫ, ಪೂಷಾ, ಪೂಭಾ ಇವುಗಳಲ್ಲಿ ಋತುವಾದರೆ ದರಿದ್ರೆಯಾಗಿಯೂ ಕೃತ್ತಿಕೆಯಲ್ಲಿ ನಿರ್ಭಾಗ್ಯೆಯಾಗಿಯೂ, ಆದ್ರೆಯಲ್ಲಿ ಪುತ್ರನಾಶವುಳ್ಳವಳಾಗಿಯೂ ಆಗುವಳು; ಭರಣಿಯಲ್ಲಿ ಅವಳಿಗೆ ಮೃತ್ಯುವಹುದು, ಮಖೆಯಲ್ಲಿ ಗಂಡನ ನಾಶವು ಆಶ್ಲೇಷದಲ್ಲಿ ಚಂಡಾಲಸಂಗ ಮಾಡುವಳು, ಜ್ಯೇಷ್ಠೆಯಲ್ಲಿ ದರಿದ್ರೆಯಾಗಿಯೂ ಭೋಗ ಸೌಖ್ಯವಿಲ್ಲದವಳಾಗಿಯೂ ಆಗುತ್ತಾಳೆ.

**ಪೂರ್ವತ್ರಯೇಭುಜಂಗರ್ಕ್ಷೇ ಯಾಮ್ಯರ್ಕ್ಷೇಚರಜಸ್ವಲಾ**
**ಪ್ರಥಮಾಂಶೇಪತಿಘ್ನೀಸ್ಯಾದ್ದ್ವಿತೀಯೇಮೃತಪುತ್ರಕಾ ।**
**ತೃತೀಯೇತುದರಿದ್ರಾಸ್ಯಾಚ್ಚತುರ್ಥೇತ್ವಶುಭಾವಹಾ ॥**

ಪೂಫ, ಪೂಷಾ, ಪೂಭಾ, ಆಶ್ಲೇಷಾ, ಭರಣೀ, ಈ ನಕ್ಷತ್ರಗಳಲ್ಲಿ ೧ನೇ ಪಾದದಲ್ಲಿ ಋತುವಾದರೆ ಗಂಡನಿಗೆ ನಾಶವು, ೨ನೇ ಪಾದದಲ್ಲಿ ಹುಟ್ಟಿದ ಮಕ್ಕಳು ಸಾಯುವವು, ೩ನೇ ಪಾದದಲ್ಲಿ ದಾರಿದ್ರ್ಯವು, ೪ನೇ ಪಾದದಲ್ಲಿ ಅಶುಭವು ಆಗುವುದು.

## ದುಷ್ಟತಿಥಿ ಫಲವು

**ಅಮಾರಿಕ್ತಾಷ್ಟಮೀಷಷ್ಠಿ ದ್ವಾದಶೀಪ್ರತಿಪತ್ಸ್ವಪಿ ।**
**ಪರಿಘಸ್ಯಚಪೂರ್ವಾರ್ಧೇ ವ್ಯತೀಪಾತೇಚವೈಧೃತೌ ।**
**ಸಂಧ್ಯಾಸೂಪಪ್ಲವೇವಿಷ್ಟ್ಯಾಮಶುಭಂಪ್ರಥಮಾರ್ತವಂ ॥**

ಅಮಾವಾಸ್ಯಾ, ರಿಕ್ತಾ, ಅಷ್ಟಮೀ, ಷಷ್ಠೀ, ದ್ವಾದಶೀ, ಪ್ರತಿಪತ್, ಪರಿಘಯೋಗದ ಪೂರ್ವಾರ್ಧ, ವ್ಯತೀಪಾತ, ವೈಧೃತಿ, ಸಂಧ್ಯಾಕಾಲಗಳು, ಸಿಡಿಲುಬೀಳುವದು ಮುಂತಾದ ಉತ್ಪಾತಗಳು, ಭದ್ರಕರಣ, ಇಂಥಾ ಅನಿಷ್ಟ ಕಾಲಗಳಲ್ಲಿ ಪ್ರಥಮಾರ್ತವವು ಅಶುಭಪ್ರದವು.

## ಆರ್ತವ ಲಗ್ನದಲ್ಲಿ ಗ್ರಹಫಲವು

**ಕೇಂದ್ರತ್ರಿಕೋಣಾಯ ಧನಸ್ಥಿತಾಶ್ಚ ಶುಭಾಸ್ತ್ರಿಷಷ್ಠಾಯ ಗತಾಶ್ಚಪಾಪಾಃ । ಶುಭಪ್ರದಾಸ್ಯುಃಪ್ರಥಮರ್ತುಕಾಲೇ ತಥಾವಿತಿ ಜ್ಞಾಜ ಗುರಾರ್ಯವರ್ಯಾಃ ॥**

ಪ್ರಥಮ ಋತುಕಾಲದಲ್ಲಿ ಋತುವಾದ ಲಗ್ನಕ್ಕೆ ೧-೨-೪-೫-೭-೯-೧೦ ೧೧ ಈ ಸ್ಥಾನಗಳಲ್ಲಿ ಶುಭಗ್ರಹಗಳಿದ್ದು ಪಾಪಗ್ರಹಗಳು ೩-೬-೧೧ನೇ ಸ್ಥಾನಗಳಲ್ಲಿ ಇದ್ದರೆ ಶುಭಪ್ರದರಾಗುತ್ತಾರೆ.

**ಅಷ್ಟಮಸ್ಥೇನಿಶಾನಾಥೇ ಭರ್ತುರ್ನೈಧನಕಾರಕಂ ।**
**ಚಂದ್ರತಾರಾಬಲಯುತೇ ರಜಃಪುತ್ರಾರ್ಥಸಂಪದಃ ।**
**ಲಗ್ನಾದ್ವಾಜನ್ಮಲಗ್ನಾದ್ವಾ ಭೂಮಿಜೇವಾಥವಾವಿದೌ ।**
**ಸುತಪ್ತತ್ರಾಪ್ರಥಮಾರ್ತೌಸ್ಯಾತ್ಕನ್ಯಾಚೋಪಚಯಸ್ಥಿತೇ ॥**

ಋತುವಾದ ಲಗ್ನಕ್ಕೆ ೮ ರಲ್ಲಿ ಚಂದ್ರನಿದ್ದರೆ ಗಂಡನಿಗೆ ಅನಿಷ್ಟಕರವು, ಚಂದ್ರತಾರಾಬಲಯುಕ್ತವಾಗಿದ್ದರೆ ಪುತ್ರ ಧನಪ್ರದವು, ಋತುವಾದ ಲಗ್ನಕ್ಕಾದರೂ ಜನ್ಮಲಗ್ನಕ್ಕಾದರೂ ೩-೬-೧೧ ರಲ್ಲಿ ಕುಜನಾದರೂ ಚಂದ್ರನಾದರೂ ಇದ್ದರೆ ಸತ್ಪುತ್ರ ಸಂತಾನ ಉಂಟಾಗುವದು.

## ಆರ್ತವಲಗ್ನ ಶುಭಾಶುಭ ಫಲಗಳು

**ಮೇಷೇತುವ್ಯಭಿಚಾರೀಸ್ಯಾದ್ವೃಷಭೆಸೌಖ್ಯವರ್ಧನಿ ।**
**ಮಿಥುನೆಸ್ಯಾತ್ಪುತ್ರವತೀ ಕರ್ಕಟೆಚಾತಿಜಾರಿಣೀ ।**
**ಸಿಂಹೆಪುತ್ರವತೀನಾರೀ ಕನ್ಯಾಯಾಂಶ್ರೀಮತೀಭವೇತ್ ।**
**ಭಾಗ್ಯಯುಕ್ತಾತುಲಾಯಾಂಚ ವೃಶ್ಚಿಕೆವ್ಯಭಿಚಾರಿಣೀ ।**
**ದುಶ್ಚರೀಧನುಪೂರ್ವೆಸ್ಯಾದಪರೇತುಪತಿವ್ರತಾ ॥**
**ಮಕರೆಮಾನಹೀನಾಸ್ಯಾತ್ಕುಂಭೇಧನವತೀಭವೇತ್ ।**
**ಮೀನೆಪುತ್ರವತೀಚೈವ ಪ್ರಥಮಾರ್ತಾವಿದಂಫಲಂ ॥**

ಮೇಷಲಗ್ನದಲ್ಲಿ ಪ್ರಥಮ ಋತುವಾದರೆ ವ್ಯಭಿಚಾರಿಯಾಗುತ್ತಾಳೆ. ವೃಷಭಲಗ್ನದಲ್ಲಿ ಸೌಖ್ಯವತಿಯು, ಮಿಥುನದಲ್ಲಿ ಪುತ್ರವತಿಯು, ಕಟಕದಲ್ಲಿ ಹಾದರಗಿತ್ತಿಯು, ಸಿಂಹದಲ್ಲಿ ಪುತ್ರವತಿಯು, ಕನ್ಯೆಯಲ್ಲಿ ಐಶ್ವರ್ಯವತಿಯು, ತುಲೆಯಲ್ಲಿ ಭಾಗ್ಯವತಿಯು, ವೃಶ್ಚಿಕದಲ್ಲಿ ವ್ಯಭಿಚಾರಿಯು, ಧನುಸ್ಸಿನ ಪೂರ್ವಾರ್ಧದಲ್ಲಿ ಕೆಟ್ಟಚರ್ಯೆಯುಳ್ಳವಳು, ಅದರ ಉತ್ತರಾರ್ಧದಲ್ಲಿ ಪತಿವ್ರತೆಯು, ಮಕರದಲ್ಲಿ ಮಾನಹೀನೆಯು, ಕುಂಭದಲ್ಲಿ ಧನವಂತೆಯು, ಮೀನದಲ್ಲಿ ಸಂತಾನವುಳ್ಳವಳೂ ಆಗುತ್ತಾಳೆ.

## ಗ್ರಂಥಾಂತರದಲ್ಲಿ

**ಮೇಷೇಪಿಸಿಂಹೇಪಿಚಕನ್ಯಕಾಯಾಂ ಗ್ರಾಮಸ್ಯಬಾಹ್ಯೆಪ್ರಥಮಾರ್ತವಂಸ್ಯಾತ್ । ವೃಷೇಚಗೋಷ್ಠೆಧನುಷಿಸ್ವಗೇಹೆ ಗ್ರಾಮೆಘಟೆನ್ಯಸ್ಯಗೃಹೇಂಗನಾಯಾಃ ॥ ಮೀನೆವ್ಯುಗೆಕರ್ಕಟಕೆಘಟೆಂಬುತೀರೆನ್ಯಯುಗ್ಮೆತು ದಿಗಂಬರಾಸ್ಯಾತ್ । ವನೇಚಮಧ್ಯೆಷ್ವಥವೃಶ್ಚಿಕೆಚಗರ್ತಾದಯೋಪ್ಯೇವಮುದೀರಯಂತಿ ॥**

ಮೇಷ, ಸಿಂಹ, ಕನ್ಯಾ ಈ ೩ ರಾಶಿಗಳಲ್ಲಿ ಕನ್ಯೆಯು ಊರಿನ ಹೊರಗೆ ಋತುವಾಗುತ್ತಾಳೆ ವೃಷಭದಲ್ಲಿ ದನ ಕಟ್ಟುವ ಸ್ಥಳದಲ್ಲಿ, ಧನಸ್ಸಿನಲ್ಲಿ ತನ್ನ ಮನೆಯಲ್ಲಿ, ತುಲೆಯಲ್ಲಿ ಗ್ರಾಮ ಮಧ್ಯದಲ್ಲಿ, ಅಥವಾ ಅನ್ಯರ ಮನೆಯಲ್ಲಿ, ಮೀನ, ಕುಂಭ, ಕರ್ಕಟ ಇವುಗಳಲ್ಲಿ ನೀರಿನ ಸಮೀಪದಲ್ಲಿ, ಮಿಥುನದಲ್ಲಾದರೆ ದಿಗಂಬರವಾಗಿರುತ್ತಾಳೆ, ವೃಶ್ಚಿಕದಲ್ಲಿ ಅರಣ್ಯದಲ್ಲಿ ಪ್ರಥಮರ್ತು ಆಗುತ್ತಾಳೆಂದು ಗರ್ಗಾದಿಗಳು ಹೇಳಿದರು

## ರಜೋದರ್ಶನ ಸ್ಥಾನಫಲವು

**ಗ್ರಾಮಬಾಹ್ಯೇಪರಗ್ರಾಮೆ ಸಾಸ್ತ್ರೀಸ್ಯಾದ್ವ್ಯಭಿಚಾರಿಣೀ ।**
**ಪತಿವ್ರತಾಪಶುಸ್ಥಾನೆ ಸುಖೀಸ್ವಾಗೃಹಮಧ್ಯಮೆ ।**
**ಗ್ರಾಮಮಧ್ಯೆಸುವೃದ್ಧೀಸ್ಸ್ಯಾದ್ವಿಧವಾಸ್ಯಾದ್ದಿಗಂಬರಾ ॥**
**ಅನ್ಯಸ್ಯಗೆಹೆದುಶ್ಶೀಲಾ ದೀರ್ಘಾಯುರ್ಜಲಸನ್ನಿಧೌ ।**
**ವನಮಧ್ಯೇತುಸೌಭಾಗ್ಯ ಧನಧಾನ್ಯಸಮನ್ವಿತಾ ॥**

ಗ್ರಾಮಬಾಹ್ಯದಲ್ಲೂ ಪರಗೃಹದಲ್ಲೂ ಋತುವಾದವಳು ವ್ಯಭಿಚಾರಿಯಾಗುವಳು, ಪಶುಸ್ಥಾನದಲ್ಲಾದವಳು ಪತಿವ್ರತೆಯಾಗುವಳು, ಸ್ವಗೃಹ ಮಧ್ಯದಲ್ಲಿ ಸೌಖ್ಯವುಳ್ಳವಳಾಗುವಳು, ಗ್ರಾಮ ಮಧ್ಯದಲ್ಲಿ ಶುಭಕರವಾಗುವದು, ಬೆತ್ತಲೆಯಾದವಳು ವಿಧವೆಯಾಗುವಳು, ಅನ್ಯರ ಮನೆಯಲ್ಲಿ ಋತುವಾದವಳು ಕೆಟ್ಟ ನಡತೆಯುಳ್ಳವಳಾಗುತ್ತಾಳೆ, ಜಲಸಮೀಪದಲ್ಲಾದವಳು ದೀರ್ಘಾಯುಷ್ಮತಿಯಾಗುತ್ತಾಳೆ, ಅರಣ್ಯದಲ್ಲಾದವಳು ಸೌಭಾಗ್ಯ ಧನಧಾನ್ಯವತಿಯಾಗುತ್ತಾಳೆ.

## ಪ್ರಥಮಾರ್ತವ ನಕ್ಷತ್ರದಲ್ಲಿ ಗ್ರಹಫಲವು

**ಪ್ರಥಮಾರ್ತವನಕ್ಷತ್ರೆ ಸಮಹೀಜೆಮೃತಪ್ರಜಾ ।**
**ಜ್ಞಶುಕ್ರಸಹಿತೆವಂಧ್ಯಾ ಸಗುರೌಸ್ಯಾತ್ತಪಸ್ವಿನೀ ।**
**ಸಾದಿತ್ಯೇತುಪತಿಘ್ನೀಸ್ಯಾದ್ರಾಹುಯುಕ್ತೇತುಜಾರಿಣೀ ।**
**ಶನೌತಿಷ್ಠತಿಚೇದ್ದಾಸೀ ಗ್ರಹಹೀನೇಸುವಾಸಿನೀ ॥**

ಋತುವಾದ ನಕ್ಷತ್ರದಲ್ಲಿ ಕುಜನಿದ್ದರೆ ಹುಟ್ಟಿದ ಮಕ್ಕಳು ಸಾಯುತ್ತವೆ, ಬುಧ ಶುಕ್ರರಿದ್ದರೆ ಬಂಜೆಯು, ಗುರುವಿದ್ದರೆ ತಪಸ್ಸು ಮಾಡುವಳು, ಸೂರ್ಯನಿದ್ದರೆ ಗಂಡನನ್ನು ಕೊಲ್ಲುತ್ತಾಳೆ, ರಾಹುವಿದ್ದರೆ ಜಾರೆಯಾಗುವಳು, ಶನಿ

ಯಿದ್ದರೆ ಚಾಕರಿಮಾಡಿ ಜೀವಿಸುವಳು, ಆದ್ದರಿಂದ ಪ್ರಥಮ ಋತುವಾದ ನಕ್ಷತ್ರದಲ್ಲಿ ಯಾವ ಗ್ರಹವೂ ಇಲ್ಲದಿದ್ದರೆ ದೀರ್ಘಸುಮಂಗಲಿಯಾಗಿ ಇರುವಳು.

## ರಜಸ್ವಲಾ ಚಕ್ರವು

**ರಜಸ್ವಲಾಯಾಂಕನ್ಯಾಯಾಂ ದಿಕ್ಚಕ್ರೇಭಾನಿವಿನ್ಯಸೇತ್ ।**
**ಪ್ರಾಚ್ಯಾದಿದಿಕ್ಷುಚತ್ವಾರಿತ್ರೀಣಿತ್ರೀಣಿವಿದಿಕ್ಷುಚ ॥**

ಕನ್ಯೆ ರಜಸ್ವಲೆಯಾದಾಗ ದಿಕ್ಕುಗಳ ಆಕಾರವಾಗಿ ಒಂದು ಚಕ್ರವನ್ನೇರ್ಪಡಿಸಿ, ಅದರಲ್ಲಿ ಪೂರ್ವದಿಕ್ಕಿನಲ್ಲಿ ಸೂರ್ಯನಿರುವ ನಕ್ಷತ್ರ ಮೊದಲ್ಗೊಂಡು ನಕ್ಷತ್ರಗಳು ೪, ಆಗ್ನೇಯದಲ್ಲಿ ೩, ದಕ್ಷಿಣದಲ್ಲಿ ೪, ನಿರುಋತಿಯಲ್ಲಿ ೩, ಪಶ್ಚಿಮದಲ್ಲಿ ೪, ವಾಯುವ್ಯದಲ್ಲಿ ೩, ಉತ್ತರದಲ್ಲಿ ೪, ಈಶಾನ್ಯದಲ್ಲಿ ೩, ಈ ಮೇರೆ ನಕ್ಷತ್ರಗಳನ್ನು ಬರೆಯತಕ್ಕದ್ದು

ಹ-ಚಿ-ಸ್ವಾ-ವಿ

ಮ-ಪು-ಉ ಅ-ಜ್ಯೇ-ಮೂ

ಆ-ಪು-ಪು-ಆ ಪೂ-ಉ-ಅ-ಶ್ರ

ಕೃ-ರೋ-ಮೃ ಧ-ಶ-ಪೂ

ಉ-ರೇ-ಅ-ಭ

**ಭಾನುಭಾಚ್ಚಂದ್ರನಕ್ಷತ್ರಪರ್ಯಂತಂಗಣಯೇತ್ಕ್ರಮಾತ್ ।**
**ಆಯುಸ್ಸಂಪದವೈಧವ್ಯಪುತ್ರಾನ್ದಿಕ್ಷುವಿನಿರ್ದಿಶೇತ್ ।**
**ವಿದಿಕ್ಷುಕ್ಷತರೋಗಾರ್ತಿಮರಣಾನಿವದೇತ್ಕ್ರಮಾತ್ ॥**

ಸೂರ್ಯನಿರುವ ನಕ್ಷತ್ರ ಮೊದಲು ಚಂದ್ರನಿರುವ ನಕ್ಷತ್ರಪರ್ಯಂತರ ಎಣಿಸಿದರೆ ಮೂಡಲದಿಕ್ಕು ಮೊದಲು ೪ ದಿಕ್ಕುಗಳಲ್ಲಿಯೂ ಕ್ರಮವಾಗಿ ೧ನೇ ನಕ್ಷತ್ರಕ್ಕೆ ಫಲ ಆಯುಸ್ಸು, ೨ನೇ ನಕ್ಷತ್ರಕ್ಕೆ ಸಂಪತ್, ೩ನೇ ನಕ್ಷತ್ರಕ್ಕೆ ವೈಧವ್ಯ, ೪ನೇ ನಕ್ಷತ್ರಕ್ಕೆ ಪುತ್ರರು, ಈ ಮೇರೆ ಫಲವನ್ನು ತಿಳಿಯತಕ್ಕದ್ದು. ವಿದಿಕ್ಕುಗಳಲ್ಲಿ ಇರುವ ಮೂರು ನಕ್ಷತ್ರಗಳಿಗೂ ಕ್ರಮವಾಗಿ ೧ ನೇದಕ್ಕೆ ಘಾಯ, ೨ನೇದಕ್ಕೆ ರೋಗಪೀಡೆ, ೩ ನೇದಕ್ಕೆ ಮರಣವೆಂಬದಾಗಿ ಫಲಗಳನ್ನು ತಿಳಿಯಬೇಕು. ಅಂದರೆ ಋತುವಾದ ನಕ್ಷತ್ರವು ಸೂರ್ಯನಿರುವ ನಕ್ಷತ್ರಕ್ಕೆ ೧-೨-೪-೮-೯-೧೧-೧೫-೧೬-೧೮-೨೨-೨೩-೨೫ನೇದಾಗಿ ಇದ್ದರೆ ಶುಭಫಲವು, ೩-೫-೬-೭-೧೦-೧೨-೧೩-೧೪-೧೭-೧೯-೨೦-೨೧-೨೪-೨೬-೨೭-೨೮ನೇದಾಗಿ ಇದ್ದರೆ ಅಶುಭಫಲವೆಂದು ತಿಳಿಯುವುದು. ಈ ದಿಕ್ಚಕ್ರದಲ್ಲಿ ಅಭಿಜಿತ್ತು ನಕ್ಷತ್ರವನ್ನು ಸೇರಿಸಿಕೊಂಡು ಅಶ್ವಿನಿ ಮೊದಲು ೨೮ ನಕ್ಷತ್ರಗಳನ್ನು ಗಣಿಸಬೇಕೆಂದು ತಾತ್ಪರ್ಯವು.

## ರಜಸ್ವಲಾ ಶುದ್ಧಿ

**ಪ್ರಥಮೇಹನಿಚಂಡಾಲೀ ದ್ವಿತೀಯಪತಿತಾಸ್ಮೃತಾ ।**
**ತೃತೀಯೇರಜಕೀಪ್ರೋಕ್ತಾ ಚತುರ್ಥೆಶೂದ್ರಿಕಾಭವೇತ್ ॥**

ಮುಟ್ಟಾದವಳು ಪ್ರಥಮ ದಿನದಲ್ಲಿ ಚಂಡಾಲಸ್ತ್ರೀಯಂತೆ ಅಶುದ್ಧಳು. ೨ನೇ ದಿನದಲ್ಲಿ ಪತಿತೆಯು, ೩ನೇ ದಿನದಲ್ಲಿ ಅಗಸಗಿತ್ತಿಯಂತೆ, ೪ನೇ ದಿನದಲ್ಲಿ ಶೂದ್ರಿಯಂತೆ ಆಗುತ್ತಾಳೆ.

**ಪಂಚಮೇಹನಿಶುದ್ಧಾಸ್ಯಾದ್ದೈವಕವ್ಯಾದಿಕರ್ಮಸು ।**
**ಚತುರ್ಥೆಹನಿಭರ್ತುಸ್ಸ್ಯಾಚ್ಛುದ್ಧಾಸಂಭೋಗಕರ್ಮಣಿ ॥**

೫ ನೇ ದಿನದಲ್ಲಿ ದೇವಕರ್ಮ ಪಿತೃಕರ್ಮಗಳಿಗೆ ಪರಿಶುದ್ಧೆಯಾಗಿ ಯೋಗ್ಯೆಯಾಗುತ್ತಾಳೆ, ೪ನೇದಿನದಲ್ಲಿ ಗಂಡನ ಸಂಭೋಗಕ್ಕೆ ಮಾತ್ರ ಯೋಗ್ಯಳಾಗುತ್ತಾಳೆ.

## ನಾರದೀಯೆ

**ರಜಸ್ವಲಾಯದಿಸ್ನಾತಾ ಪುನರೇವರಜಸ್ವಲಾ ।**
**ಅಷ್ಟಾದಶದಿನಾದರ್ವಾಗಶುಚಿತ್ವಂನವಿದ್ಯತೆ ॥**

ಋತುವಾದ ಹೆಂಗಸು ಸ್ನಾನವಾದ ತರುವಾಯ ೧೮ ದಿನಗಳೊಳಗೆ ಪುನಃ ಮುಟ್ಟಾದರೆ ಅವಳು ಸ್ನಾನಮಾತ್ರದಿಂದಲೇ ಪರಿಶುದ್ಧೆಯಾಗುತ್ತಾಳೆ.

**ಏಕೋನವಿಂಶತೆರರ್ವಾಗೇಕಾಹಂಸ್ಯಾತ್ತದೂರ್ಧ್ವತಃ ।**
**ವಿಂಶತ್ಯುತ್ತರಕಾಲೇತು ತ್ರೀರಾತ್ರಂತುಶುಚಿರ್ಭವೇತ್ ॥**

೧೯ ದಿನದೊಳಗೆ ಮುಟ್ಟಾದರೆ ಒಂದೇ ದಿನ ಅಶುಚಿತ್ವವು ೨೦ ದಿನದ ಮೇಲೆ ಮುಟ್ಟಾದರೆ ೩ ರಾತ್ರಿ ಅಶುಚಿಯಾಗಿರಬೇಕು.

## ನಿಷೇಕ ಪ್ರಕರಣವು

**ವಿಷ್ಣುಪ್ರಜೇಶ ರವಿ ಮಿತ್ರ ಸಮೀರಪೌಷ್ಣಮೂಲೋತ್ತರಾ ವರುಣಭಾನಿನಿಷೇಕಕಾರ್ಯೆ । ಪೂಜ್ಯಾನಿಪುಷ್ಯವಸುಶೀತಕರಾಶ್ವಿ ಚಿತ್ರಾದಿತ್ಯಾಶ್ಚಮಧ್ಯಮಫಲಾವಿಫಲಾಸ್ಯುರನ್ಯೆ ॥**

ಶ್ರವಣ, ರೋಹಿಣೀ, ಹಸ್ತ, ಅನೂರಾಧ, ಸ್ವಾತೀ, ರೇವತಿ, ಮೂಲ, ಉತ್ತರಾ, ಉಷಾ, ಉಭಾ, ಶತಭಿಷಕ್, ಈ ೧೧ ನಕ್ಷತ್ರಗಳು ನಿಷೇಕದಲ್ಲಿ ಶುಭಪ್ರದಗಳು. ಪುಷ್ಯ, ಧನಿಷ್ಠಾ, ಮೃಗಶಿರ, ಅಶ್ವಿನಿ, ಚಿತ್ರಾ, ಪುನರ್ವಸು ಈ ೭ ನಕ್ಷತ್ರಗಳು ಮಧ್ಯಮಗಳು, ಮಿಕ್ಕ ನಕ್ಷತ್ರಗಳು ನಿಷ್ಫಲಗಳೆಂದು ತಿಳಿಯುವುದು

**ಷಷ್ಠ್ಯಷ್ಟಮೀಪಂಚದಶೀಶ್ಚತುರ್ಥೀ ಚತುರ್ದಶೀಮುಪ್ಯುಭಯತ್ರಹಿತ್ವಾ । ಶೇಷಾಶ್ಶುಭಾಸ್ಸ್ಯುಸ್ತಿಥಯೊನಿಷೇಕೆ ವಾರಾಶ್ಶಶಾಂಕಾಶ್ಯಸಿತೇಂದುಜಾನಾಂ ॥**

ಷಷ್ಟೀ, ಅಷ್ಟಮೀ, ಚತುರ್ಥೀ, ಚತುರ್ದಶೀ, ಶುಕ್ಲ ಕೃಷ್ಣಪಕ್ಷಗಳಲ್ಲಿ ಈ ತಿಥಿಗಳನ್ನು ಪೂರ್ಣಿಮಾ, ಅಮಾವಾಸ್ಯೆಗಳನ್ನು ಸಹ ಬಿಟ್ಟು ಮಿಕ್ಕ ತಿಥಿಗಳು ನಿಷೇಕದಲ್ಲಿ ಶುಭಪ್ರದಗಳು, ಮತ್ತು ಸೋಮ, ಬುಧ, ಗುರು, ಶುಕ್ರವಾರಗಳು ಸಹ ಶುಭಪ್ರದಗಳು.

**ವೃಷ ಮಿಥು ನಕುಳೀರಸಿಂಹಕನ್ಯಾ ತುಲಘಟೀಚಾಪಝುಷಾ ಶುಭಂವದಂತಿ । ಯಾತಿಶುಭಂಫಲಶಾಲಿನೋನುಕೂಲೆ ನಿಧನ ವಿಶುದ್ಧಿ ಯುತೆನಿಷೇಕಕಾರ್ಯೆ ॥**

ನಿಷೇಕ ಶುಭಕಾರ್ಯದಲ್ಲಿ ಅಷ್ಟಮಶುದ್ಧಿ ಮುಂತಾದ ಬಲವುಳ್ಳವಾಗಿಯೂ ಶುಭಗ್ರಹ ಸಂಬಂಧ ದೃಷ್ಟಿಯುಳ್ಳವಾಗಿಯೂ ಅನುಕೂಲಗಳಾಗಿಯೂ ಇದ್ದರೆ ವೃಷಭ, ಕಟಕ, ಮಿಥುನ, ಸಿಂಹ, ಕನ್ಯಾ, ತುಲಾ, ಧನುಸ್ಸು, ಕುಂಭ, ಮೀನರಾಶಿಗಳು, ಶುಭಕರಗಳಾಗುತ್ತವೆ.

## ಪುಂಸವನ

**ಕುರ್ಯಾತ್ಪುಂಸವನಂಪ್ರಸಿದ್ಧ ವಿಷಯೆಮಾಸೆತೃತೀಯೆಥವಾ ।**
**ಪಶ್ಯಂಸೀತತನೌತುಷಾರಕಿರಣೆಪುಷ್ಯೇಥವಾವೈಷ್ಣವೆ ॥**
**ಹಿತ್ವಾಕರ್ಕಟಕನ್ಯಯುಗ್ಮಮಖಿಲೆಷ್ವನ್ಯೆಷ್ವರಿಕ್ತೆತಿಥೌ ।**
**ಶುದ್ಧೆ ನೈಧನಧಾಮ್ನಿ ಶುಕ್ರಶಶಭೃದ್ವಿಣ್ಮಂತ್ರಿಣಾಂವಾಸರೆ ॥**

ಗರ್ಭವು ಸ್ಪಷ್ಟವಾದರೆ ೩ನೇ ತಿಂಗಳಲ್ಲಿ ಚಂದ್ರನು ಪುಷ್ಯನಕ್ಷತ್ರದಲ್ಲಾದರೂ ಶ್ರವಣದಲ್ಲಾದರೂ ಪ್ರಕಾಶವಾದ ಶರೀರವುಳ್ಳವನಾಗಿ ಇರುವಾಗ ಕರ್ಕಾಟಕ, ಕನ್ಯಾ, ಮಿಥುನ ರಾಶಿಗಳನ್ನು ಬಿಟ್ಟು ಇತರ ರಾಶಿಗಳಲ್ಲಿಯೂ ರಿಕ್ತತಿಥಿಗಳನ್ನು ಬಿಟ್ಟು ಅಷ್ಟಮಶುದ್ಧಿ ಇರುವಾಗಲೂ, ಶುಕ್ರ, ಚಂದ್ರ, ಬುಧ ಗುರುಗಳ ವಾರಗಳೂ ಗಂಡನು ತನ್ನ ಭಾರ್ಯೆಗೆ ಪುಂಸವನವನ್ನು ಮಾಡಬೇಕು.

## ಸೀಮಂತ

**ಚತುರ್ಥಷಷ್ಠಾಷ್ಟಮಮಾಸಭೇದೇ ಭರ್ತ್ರಾದ್ಯಗರ್ಭೆಪ್ರಥಮಂ ವಿಧೇಯಂ । ಸೀಮಂತಕರ್ಮದ್ವಿಜಭಾಮಿನೀನಾಂ ಮಾಸೆಷ್ಟಮೆ ವಿಷ್ಣುಬಲಿಂಚಕುರ್ಯಾತ್ ॥**

ಗಂಡನು ಗರ್ಭವತಿಯಾದ ತನ್ನ ಭಾರ್ಯೆಗೆ ಗರ್ಭದಲ್ಲಿ ೪-೬-೮ ಈ ತಿಂಗಳುಗಳಲ್ಲಿ ಬ್ರಾಹ್ಮಣ ಸ್ತ್ರೀಯರಿಗೆ ಸೀಮಂತವನ್ನು ಮಾಡತಕ್ಕದ್ದು. ಮತ್ತು ೮ನೇ ಮಾಸದಲ್ಲಿ ವಿಷ್ಣುಬಲಿಯನ್ನು ಮಾಡತಕ್ಕದ್ದು.

## ಸೀಮಂತದಲ್ಲಿ ನಕ್ಷತ್ರ ವಾರಾದಿಗಳು

**ಸೀಮಂತೇತಿಷ್ಯೆಹಸ್ತಾದಿತಿಹರಿಶಶಭೃತ್ಪೌಷ್ಣವಿಧ್ಯುತ್ತರಾಖ್ಯಾಃ ।**
**ಪಕ್ಷಚ್ಛಿದ್ರಾಂಶ್ಚರಿಕ್ತಾಪಿತೃತಿಥಿಮುಪಹಾಯಾಪರಾಸ್ಯುಃಪ್ರಶಸ್ತಾಃ ॥**
**ಸಿಂಹಾಳಿವರ್ಜಯಿತ್ವಾಶುಭಫಲಬಹುಳಾ ರಾಶಯೋಽಪ್ಯಂಶುಕಾನಿ**
**ಶ್ರೇಷ್ಠಾಸ್ಸ್ಯುಶ್ಶೀತರೋಚಿ ಭೃಗುಬುಧಧಿಷಣಾನಾಂವಿಶುದ್ಧಾಷ್ಟ**
**ಮೇಽಪಿ ॥**

ಸೀಮಂತದಲ್ಲಿ ಪುಷ್ಯ, ಹಸ್ತ, ಪುನರ್ವಸು, ಶ್ರವಣ, ಮೃಗಶಿರ, ರೇವತಿ, ರೋಹಿಣಿ, ಉತ್ತರ, ಉಷಾ, ಉಭಾ, ಈ ನಕ್ಷತ್ರಗಳು ಮತ್ತು ಪಕ್ಷಚ್ಛಿದ್ರಗಳು, ರಿಕ್ತತಿಧಿಗಳು, ಪಿತೃತಿಧಿಗಳು ಅಮಾವಾಸ್ಯಾ, ಅಷ್ಟಮಿ, ವ್ಯತೀಪಾತ, ವೈಧೃತಿ, ಮನ್ವಾದಿ, ಯುಗಾದಿ, ಸಂಕ್ರಮಣ, ಮುಂತಾದ ಪಿತೃದಿನಗಳು ಇವುಗಳನ್ನು ಬಿಟ್ಟು ಮಿಕ್ಕ ತಿಧಿಗಳಲ್ಲೂ ಸಿಂಹ ವೃಶ್ಚಿಕಗಳನ್ನು ಬಿಟ್ಟು ಇತರ ಶುಭರಾಶಿಗಳು ಅವುಗಳ ಅಂಶಗಳು ಸೋಮ, ಬುಧ, ಗುರು, ಶುಕ್ರವಾರಗಳು, ಅಷ್ಟಮಶುದ್ಧಿಯು ಇವುಗಳೆಲ್ಲವು ಶ್ರೇಷ್ಠವು.

**ಶುಭಗ್ರಹೇಷುಧೀಧರ್ಮಕೇಂದ್ರೇಷ್ವರಿಭವತ್ರಿಷು ।**
**ಪಾಪೇಷುಷಟ್ಸುಚಂದ್ರೋಽಂತ್ಯನಿಧನಾತ್ಮಾದಿವರ್ಜಿತಃ ॥**

ಸೀಮಂತ ಲಗ್ನಕ್ಕೆ ೧-೪-೫-೭-೯-೧೦ ಈ ಸ್ಥಾನಗಳಲ್ಲಿ ಶುಭಗ್ರಹಗಳೂ, ೩-೬-೧೧ ಇವುಗಳಲ್ಲಿ ಪಾಪಗ್ರಹಗಳು ಇರುವಾಗಲೂ ಚಂದ್ರನು ೧-೧೨-೮ ಜನ್ಮಗಳಲ್ಲಿಲ್ಲದೇ ಇರುವಾಗಲೂ ಸೀಮಂತವು ಶುಭಕರವು.

**ಸೀಮಂತಲಗ್ನಾದೇಕೋಽಪಿ ಕ್ರೂರಃಪಂಚಾಷ್ಟರಿಷ್ಫಗಃ ।**
**ಯಧಿಸೀಮಂತಿನೀಂಹನ್ಯಾತ್ತದ್ಗರ್ಭಂವಾಪಿನಸಂಶಯಃ ॥**

ಸೀಮಂತಲಗ್ನಕ್ಕೆ ೫-೮-೧೨ನೇ ರಾಶಿಗಳಲ್ಲಿ ಒಬ್ಬ ಪಾಪಗ್ರಹವಾದರೂ ಇದ್ದರೆ ಅವನು ಆ ಗರ್ಭಿಣಿಯನ್ನಾದರೂ ಹೊಟ್ಟೆಯಲ್ಲಿರುವ ಶಿಶುವನ್ನಾದರೂ ಸಂದೇಹವಿಲ್ಲದೆ ಕೊಲ್ಲುವನು.

## ಇಪ್ಪತ್ತೊಂದು ಮಹಾದೋಷ ನಿರ್ಣಯವು

**ಆದ್ಯಃಪಂಚಾಂಗಶುದ್ಧಿಸ್ಸ್ಯಾದ್ದ್ವಿತೀಯಸ್ಸೂರ್ಯಸಂಕ್ರಮಃ ।**
**ತೃತೀಯಃಕರ್ತರೀದೋಷಃ ಚಂದ್ರಷಷ್ಠಾಷ್ಟರಿಷ್ಫಗಃ ।**
**ಉದಯಾಸ್ತಾಂಶಯೋಶ್ಶುದ್ಧಿರಹಿತೋದುರ್ಮುಹೂರ್ತಜಃ ॥**

**ಗಂಡಾಂತಂಪಾಪಷಡ್ವರ್ಗಂ ಭೃಗುಷಟ್ಕಂಕುಜಾಷ್ಟಮಂ ।**
**ದಂಪತ್ಯೋರಷ್ಟಮಂಲಗ್ನಂ ರಾಶೇರ್ವಿಷಘಟೀಭವೇತ್ ।**
**ಕುನವಾಂಶೋವಾರದೋಷಃ ಖಾರ್ಜೂರಿಕಸಮಾಂಘ್ರಿಭಂ ॥**
**ಗ್ರಹಣೋತ್ಪಾತಭಂಕ್ರೂರಂ ವಿದ್ಧರ್ಕ್ಷಕ್ರೂರಸಂಯುತಂ ।**
**ಅಕಾಲಗರ್ಜಿತಂವೃಷ್ಟಿರ್ಮಹಾಪಾತಸ್ಸವೈಧೃತಿಃ ।**
**ಮಹಾದೋಷಾಅಮೀಚೈಷಾಂ ಫಲಂವಕ್ಷ್ಯೇಪೃಥಕ್ಪೃಥಕ್ ॥**

೧ನೆಯದು ಪಂಚಾಂಗಶುದ್ಧಿಯಿಲ್ಲದ್ದು, ೨ನೆಯದು ಸಂಕ್ರಾಂತಿ, ೩ನೇಯದು ಕರ್ತರೀದೋಷವು, ೪ನೆಯದು ೬-೮-೧೨ ಸ್ಥಾನಗಳಲ್ಲಿ ಚಂದ್ರನು ಇರುವಿಕೆಯು, ೫ನೆಯದು ಉದಯಾಸ್ತಾಂಶ ಶುದ್ಧಿ ಇಲ್ಲದ್ದು, ೬ನೆಯದು ದುರ್ಮುಹೂರ್ತವು, ೭ನೆಯದು ಗಂಡಾಂತರವು, ೮ನೆಯದು ಗಂಡಾಂತರವು, ೯ನೆಯದು ಪಾಪಷಡ್ವರ್ಗವು, ೧೦ನೆಯದು ಭೃಗುಷಟ್ಕವು, ೧೧ನೆಯದು ಕುಜಾಷ್ಟಮವು, ೧೨ ನೆಯದು ದಂಪತಿಗಳ ಲಗ್ನಕ್ಕೆ ಅಷ್ಟಮಲಗ್ನವು, ೧೩ ನೆಯದು ಲಗ್ನಕ್ಕೆ ವಿಷಘಟಿಕಾ ಸಂಬಂಧವು, ೧೪ ನೆಯದು ವಾರದೋಷವು, ೧೫ ನೆಯದು ಖಾರ್ಜೂರಚಕ್ರದಲ್ಲಿ ಸಮವಾದ ನಕ್ಷತ್ರವು, ೧೬ ನೆಯದು ಗ್ರಹಣೋತ್ಪಾತ ನಕ್ಷತ್ರವು, ೧೭ ನೆಯದು ಕ್ರೂರಗ್ರಹಯುಕ್ತ ನಕ್ಷತ್ರವು, ೧೮ ನೆಯದು ಅಕಾಲಗರ್ಜಿತ, ೧೯ ನೆಯದು ಅಕಾಲವೃಷ್ಟಿ, ೨೦ ನೆಯದು ಮಹಾಪಾತಕದೋಷವು, ೨೧ ನೆಯದು ವೈಧೃತಿದೋಷವು, ಇಂಥಾ ಇಪ್ಪತ್ತೊಂದು ಮಹಾದೋಷಗಳ ಫಲಗಳನ್ನು ಪ್ರತ್ಯೇಕ ಪ್ರತ್ಯೇಕ ಹೇಳುತ್ತೇನೆಂದು ಗ್ರಂಥಕರ್ತನ ವ್ಯಾಖ್ಯವು.

## ಪಂಚಾಂಗಶುದ್ಧಿ ದೋಷಸ್ವರೂಪವು

**ತಿಥಿವಾರಂಚನಕ್ಷತ್ರಂ ಯೋಗಂಚಕರಣಂತಥಾ ।**
**ಏತತ್ಪಂಚಶುಭಂಚೈವ ಪಂಚಾಂಗಂಶುದ್ಧಿಮುದ್ಭವೇತ್ ।**
**ಯಸ್ಮಿನ್ಪಂಚಾಂಗಜೋದೋಷಸ್ಸಲಗ್ನಂಪರಿವರ್ಜ್ಯತೆ ॥**

ತಿಥಿ, ವಾರ, ನಕ್ಷತ್ರ, ಯೋಗ, ಕರಣ, ಇವುಗಳು ಶುಭವಾಗಿದ್ದರೆ ಪಂಚಾಂಗಶುದ್ಧಿ. ಯಾವ ಲಗ್ನಕ್ಕೆ ಅದು ನೆಟ್ಟಗಿಲ್ಲವೊ ಆ ಲಗ್ನವನ್ನು ಬಿಡತಕ್ಕದ್ದು.

**ಅವಮಾತ್ರಿದ್ಯುಸ್ಪೃಕೆವೇಧೆ ಕಾಂತೆವೈಪ್ರಸ್ತಥೈವಚ ।**
**ಏತೆಪಂಚವಿಧಾದೋಷಾಃ ಪಂಚಾಂಗದಶದೋಶಜಾಃ ॥**

ಆವಮಾ, ತ್ರಿದ್ಯುಸ್ಪೃಕ್, ವೇಧೆಗಳು, ಕ್ರಾಂತಗಳು, ಹಾಗೆ ವೈಪ್ರ ಈ ದೋಷಗಳು ಐದು ಪೂರ್ವ ಶ್ಲೋಕದಲ್ಲಿ ಹೇಳಲ್ಪಟ್ಟ ತಿಥಿವಾರಾದಿ ದೋಷ ಗಳು ೫, ಇವು ಸೇರಿ ಈ ೧೦ ದೋಷಗಳು ಪಂಚಾಂಗದೋಷಗಳೆನ್ನಿಸಿ ಕೊಳ್ಳುತ್ತವೆ.

## ಸೂರ್ಯನ ಸಂಕ್ರಾಂತಿ ದೋಷ

**ತ್ಯಾಜ್ಯಾಸೂರ್ಯಸ್ಯಸಂಕ್ರಾಂತೇ ಪೂರ್ವತಃಪರತಸ್ಸದಾ ।**
**ವಿವಾಹಾದಿಷುಕಾರ್ಯೇಷು ನಾಡ್ಯಷ್ಷೋಡಶಷೋಡಶ ॥**

ವಿವಾಹಾದಿ ಶುಭಕಾರ್ಯಗಳಲ್ಲಿ ಸೂರ್ಯನ ಸಂಕ್ರಾಂತಿಗೆ ಮುಂದು ೧೬ ಘಳಿಗೆಗಳೂ ಹಿಂದೆ ೧೬ ಘಳಿಗೆಗಳೂ ಬಿಡತಕ್ಕವು.

## ಕರ್ತರೀದೋಷ

**ಲಗ್ನಾಂತಮುಖಯೋಃ ಪಾಪವಕ್ರಯೋಶ್ಯುಭಯೋಸ್ಸಯೋಃ**
**ಸಾಕರ್ತರೀತಿವಿಜ್ಞೇಯಾ ದಂಪತ್ಯೋರ್ಗಳಕರ್ತರೀ ॥**

ವಿವಾಹ ಲಗ್ನಕ್ಕೆ ೨-೧೨ ಈ ಸ್ಥಾನಗಳಲ್ಲಿ ವಕ್ರಗಳಾದ ಪಾಪಗ್ರಹ ಗಳಿದ್ದರೆ ಅವರನ್ನು ಶುಭಗ್ರಹಗಳು ನೋಡಿದರೂ ಪ್ರಯೋಜನವಿಲ್ಲ, ಅಂಥಾ ದೋಷವು ವಧೂವರರಿಗೆ ಹಾನಿಕರವು, ಗಂಡಕರ್ತ್ರಿಯಾಗುತ್ತದೆ.

**ಕರ್ತರೀದೋಷದುಷ್ಟಂಯಲ್ಲಗ್ನಂತತ್ಪರಿವರ್ಜಯೇತ್ ।**
**ಯದಿಸೌಮ್ಯಗ್ರಹೈರ್ಯುಕ್ತಂ ಗುಣೈಸ್ಸರ್ವೈಸ್ಸಮನ್ವಿತಂ ॥**

ವಿವಾಹಾದಿ ಲಗ್ನದಲ್ಲಿ ಶುಭಗ್ರಹಗಳಿದ್ದರೂ ಇತರ ಸುಗುಣಗಳಿದ್ದರೂ ಅದು ಕರ್ತರೀದೊಷ ದುಷ್ಟವಾದರೆ ಅದನ್ನು ಸರ್ವದಾ ಬಿಡತಕ್ಕದ್ದು.

## ಷಷ್ಠಾಷ್ಟರಿಷ್ಫಗತಚಂದ್ರದೋಷ

**ಷಡಷ್ಟರಿಪ್ಫಗೇಚಂದ್ರೇ ಲಗ್ನೆದೋಷಸ್ಸ್ವಸಂಜ್ಞಿತಃ ।**
**ತಲ್ಲಗ್ನಂವರ್ಜಯೆದ್ಯತ್ನಾಜ್ಜೀವಶುಕ್ರಸಮನ್ವಿತಂ ॥**

ಯಾವ ಲಗ್ನಕ್ಕೆ ಚಂದ್ರನು ೬-೮-೧೨ ಈ ಸ್ಥಾನಗಳಲ್ಲಿರುತ್ತಾನೋ ಅದು ಲಗ್ನದೋಷವೆನ್ನಿಸಿಕೊಳ್ಳುತ್ತದೆ, ಅಂಥಾ ದೋಷವುಳ್ಳ ಲಗ್ನವು ಗುರು ಶುಕ್ರಯುಕ್ತವಾಗಿ ಇದ್ದರೂ ಅದನ್ನು ಅವಶ್ಯ ಬಿಡತಕ್ಕದ್ದು.

## ಸಗ್ರಹ ಚಂದ್ರದೋಷ

**ಶಶಾಂಕೇಗ್ರಹಸಂಯುಕ್ತೇ ದೋಷಸ್ಸಗ್ರಹಸಂಜ್ಞಿತಃ ।**
**ತಸ್ಮಿಂಸ್ಸಗ್ರಹದೋಷೇತು ವಿವಾಹಂನೈವಕಾರಯೇತ್ ॥**

ಚಂದ್ರನು ಶುಭಗ್ರಹಗಳಾಗಲಿ ಪಾಪಗ್ರಹಗಳಾಗಲಿ ಯಾವ ಗ್ರಹ ದೊಂದಿಗಾದರೂ ಕೂಡಿ ಇದ್ದರೆ ಅದು ಸಗ್ರಹ ಚಂದ್ರದೋಷವೆಂಬುವದು, ಆ ದೋಷದಲ್ಲಿ ವಿವಾಹವನ್ನು ಮಾಡಕೂಡದು.

## ಉದಯಾಸ್ತಶುದ್ಧಿ

**ಲಗ್ನಲಗ್ನಾಂಶಕೌಸ್ವಸ್ವಪತಿನಾವೀಕ್ಷಿತೌಯುತೌ ।**
**ನಚೇದನ್ಯೋನ್ಯಪತಿನಾ ಶುಭಮಿತ್ರೇಣವಾತಥಾ ॥**
**ವ್ಯಸ್ಯಯುಕ್ಷಿತ್ತಥಾಮೃತ್ಯುಸ್ಥಾಭ್ಯಾಂಸಪ್ತೋದಯಾಂಶಕಾ ।**
**ಏವಂಯುತೌಮೃತ್ಯುಕರೌ ಕ್ರೂರಗ್ರಹಯುತೌಯಥಾ ॥**

ಲಗ್ನವು ಲಗ್ನಾಧಿಪತಿಯಿಂದಲೂ, ಅದರ ನವಾಂಶವು ಅದರ ಅಧಿಪತಿ ಯಿಂದಲೂ ಸೇರಲ್ಪಟ್ಟಾದರೂ ನೋಡಲ್ಪಟ್ಟಾದರೂ ಇರಬೇಕು, ಅಥವಾ ನವಾಂಶಾಧಿಪತಿಯಿಂದ ಲಗ್ನವು, ಲಗ್ನಾಧಿಪತಿಯಿಂದ ನವಾಂಶವೂ ಹಾಗೆ ಇರಬೇಕು, ಅಥವಾ ಅವುಗಳು ಮಿತ್ರಗ್ರಹಗಳಿಂದಲಾಗಲಿ ಶುಭಗ್ರಹಗಳಿಂದ ಲಾಗಲಿ ನೋಡಲ್ಪಟ್ಟಿರಬೇಕು, ಹಾಗಿಲ್ಲದಿದ್ದರೆ ಮೃತ್ಯುಕರವು. ಹೀಗೆ ಲಗ್ನಕ್ಕೆ ಸಪ್ತಮರಾಶಿ ಅದರ ನವಾಂಶವು ಸಹ ಕೆಳಗೆ ಹೇಳಿದಂತೆ ಶುಭಮಿತ್ರಗ್ರಹ ಯುಕ್ತಗಳಾಗಿದ್ದರೆ ಕ್ರೂರಗ್ರಹಯುಕ್ತಗಳಂತೆ ಮೃತ್ಯುಕರಗಳಾಗುತ್ತವೆ, ಅಂದರೆ ವಿವಾಹಲಗ್ನಾಧಿಪತಿ ಬಲವಂತನಾಗಿ ಲಗ್ನದಲ್ಲಿ ಇರಬೇಕು, ಹಾಗಿಲ್ಲ ದಿದ್ದರು ಲಗ್ನವನ್ನು ಶುಭಗ್ರಹವಾಗಲಿ ಮಿತ್ರಗ್ರಹವಾಗಲಿ ನೋಡಿಯಾದರೂ ಕೂಡಿಯಾದರೂ ಇರಬೇಕು ಹಾಗೆಯೆ ಸಪ್ತಮಾಧಿಪತಿಯು ಬಲ ವಾದ ಸ್ಥಾನದಲ್ಲಾದರೂ ಉಚ್ಚಮಿತ್ರ ಸ್ವಕ್ಷೇತ್ರಗಳಲ್ಲಾದರೂ ಇರಬೇಕೆಂದು ಭಾವವು.

## ದುರ್ಮುಹೂರ್ತ ವಿಷಯ-ದಿನಾಮುಹೂರ್ತ

**ರುದ್ರಾಹಿ ಮಿತ್ರಪಿತರೋ ವಸುವಾಂವಿಶ್ವೆದೇವೋ ವಿಧಿಶ್ಶತ ಮುಖಃ ಪುರುಹೂತವಹ್ನಿಃ । ನಕ್ತಂಚರಾಖ್ಯವರುಣಾರ್ಯಮ ಯೋನಯಶ್ಚ ಪ್ರೋಕ್ತಂದಿನಸ್ಯದಶಪಂಚದಿವಾಮುಹೂರ್ತಂ ॥**

ರುದ್ರ, ಅಹಿ, ಮಿತ್ರ, ಪಿತೃ, ವಸು, ವಾರ, ವಿಶ್ವೇದೇವ, ವೇದ, ವಿಧಿ, ಶತಮುಖ, ಪುರುಹೂತ, ವಹ್ನಿಃ, ನಕ್ತಂಚರ, ವರುಣ, ಅರ್ಯಮ, ಈ ೧೫ ದಿನದ ಹಗಲಿನಲ್ಲಿ ಮುಹೂರ್ತಗಳು.

## ರಾತ್ರಿ ಮುಹೂರ್ತಗಳು

**ನಿಶಾಮುಹೂರ್ತಾಗಿರಿಶಾಜಪಾದಾಹಿರ್ಬುಧ್ನ್ಯಪೂಷಾಶ್ವಿಯ ಮಾಗ್ನಯಶ್ಚ । ವಿಧಾತೃಚಂದ್ರಾದಿತಿಜೀವವಿಷ್ಣುತಿಗ್ಮದ್ಯುತಿ ತ್ವಷ್ಟ್ರು ಸಮೀರಣಾಶ್ಚ ॥**

ಗಿರಿಶ, ಅಜಪಾದ, ಅಹಿರ್ಬುಧ್ನ್ಯ, ಪೂಷಾ, ಅಶ್ವಿ, ಯಮ, ಅಗ್ನಿ, ವಿಧಾತಾ, ಚಂದ್ರ, ಅದಿತಿ, ಜೀವವಿಷ್ಣು, ತಿಗ್ಮ, ದ್ಯುತಿ, ತ್ವಷ್ಟಾ, ಸಮೀರಣ, ಈ ೧೫ ರಾತ್ರಿ ಮುಹೂರ್ತಗಳು. ಅಂದರೆ ೨ ಘಳಿಗೆಗೆ ಒಂದು ಮುಹೂರ್ತ ದಂತೆ ಲೆಕ್ಕಮಾಡಿ ಹಗಲಲ್ಲಿ ೩೦ ಘಳಿಗೆಗೆ ೧೫ ಮುಹೂರ್ತಗಳು, ರಾತ್ರಿ ಯಲ್ಲಿಯೂ ಹಾಗೆ ಎಣಿಸಿ ಹಗಲಿನ ೧೫ ಮುಹೂರ್ತಗಳು ಭಗ, ಇಂದ್ರಾ, ಅಗ್ನಿ, ಅಹಿ, ದೈತ್ಯ, ರೌದ್ರಪಿತ, ಈ ಮುಹೂರ್ತಗಳು ಅಶುಭಗಳು, ಮಿಕ್ಕವು ಶುಭಗಳು, ರಾತ್ರಿ ಮುಹೂರ್ತಗಳು ೧೫ ರಲ್ಲಿ ರೌದ್ರ, ಅಜಾಂಘ್ರಿ, ಯಮ, ಅಗ್ನಿ, ಈ ೪ ಮುಹೂರ್ತಗಳು ಅಶುಭಗಳು, ಮಿಕ್ಕ ೧೧ ಶುಭಕರಗಳು.

## ವಾರಜನಿತ ದುರ್ಮುಹೂರ್ತಗಳು

**ಅರ್ಯಮ್ಣೋರ್ಕೇತುಹಿಂನಕಿರಣೆ ರಾಕ್ಷಸಬ್ರಹ್ಮಸಂಜ್ಞೌ ।**
**ಪಿತ್ರಾಗ್ನೆಯಾಕ್ಷಿತಿಸುತದಿನೆ ಚಂದ್ರಪುತ್ರೆಭಿಜಿಚ್ಚ ।**
**ಪೈತ್ರಬ್ರಾಹ್ಮೆಭೃಗುಸುತದಿನೆ ರಾಕ್ಷಸಾಪ್ಯಾಚಜೀವೆ ।**
**ಭೌಜಂಗೆಶೌಸವಿತೃಜದಿನೆ ವರ್ಜನೀಯಾಮುಹೂರ್ತಾಃ ॥**

ಭಾನುವಾರದಲ್ಲಿ ಅರ್ಯಮುಯೆಂಬ ಮುಹೂರ್ತವನ್ನೂ, ಸೋಮವಾರ ದಲ್ಲಿ ರಾಕ್ಷಸ ಬ್ರಹ್ಮ ಇವುಗಳನ್ನೂ ಕುಜವಾರದಲ್ಲಿ ಪಿತೃ ಅಗ್ನಿ:ಇವುಗಳನ್ನೂ

ಬುಧವಾರದಲ್ಲಿ ಅಭಿಜಿನ್ಮುಹೂರ್ತವನ್ನೂ ಗುರುವಾರದಲ್ಲಿ ರಾಕ್ಷಸಜಲಮುಹೂರ್ತಗಳನ್ನೂ, ಶುಕ್ರವಾರದಲ್ಲಿ ಪಿತೃ ಬ್ರಹ್ಮಮುಹೂರ್ತಗಳನ್ನೂ, ಶನಿವಾರದಲ್ಲಿ ಸರ್ಪ ಈಶಾನ ಮುಹೂರ್ತಗಳೂ, ಇಂಥಾ ದುರ್ಮುಹೂರ್ತಗಳನ್ನು ಬಿಟ್ಟು ವಿವಾಹಾದಿ ಶುಭಕಾರ್ಯಗಳನ್ನು ಮಾಡತಕ್ಕದ್ದು.

**ಅಹಸ್ಕರಾದಿವಾರೇಷು ಯೆಮುಹೂರ್ತಾಸ್ತುನಿಂದಿತಾಃ ।**
**ವಿವಾಹಾದಿಷುತೆವರ್ಜ್ಯಾಃ ಅಪಿಲಕ್ಷಗುಣೈರ್ಯುತಾಃ ॥**

ಸೂರ್ಯಾದಿ ವಾರಗಳಲ್ಲಿ ಯಾವ ದುರ್ಮುಹೂರ್ತಗಳು ಹೇಳಲ್ಪಟ್ಟಿವೆಯೋ ಅವುಗಳನ್ನು ವಿವಾಹಾದಿ ಶುಭಗಳಲ್ಲಿ ಅವಶ್ಯ ಬಿಡತಕ್ಕದ್ದು. ಅವುಗಳಿಗೆ ಬೇರೆ ಅನೇಕ ಗುಣಗಳಿದ್ದರೂ ಅವುಗಳು ತ್ಯಾಜ್ಯಗಳೆಂದು ಭಾವವು.

## ಗಂಡಾಂತ ದೋಷಗಳು-ತಿಥಿಗಂಡವು

**ಪೂರ್ಣನಂದಾಖ್ಯಯೊಸ್ತಿಥ್ಯೋಸ್ಸಂಧೌನಾಡೀಚತುಷ್ಟಯಂ ।**
**ಗಂಡಾಂತಂಮೃತ್ಯುದಂ ಜನ್ಮಯಾತ್ರೋದ್ವಾಹವ್ರತಾದಿಷು ॥**

ನಂದಾತಿಥಿ, ಪೂರ್ಣಾತಿಥಿ, ಇವುಗಳ ಸಂಧಿಯಲ್ಲಿ ೪ಘಳಿಗೆಗಳು ಗಂಡಾಂತರಗಳು, ಇವುಗಳಲ್ಲಿ ಯಾತ್ರೆ ಮದುವೆ ಮುಂತಾದ ಶುಭಕಾರ್ಯಗಳನ್ನು ಮಾಡಕೂಡದು, ಅಂದರೆ ಪಂಚಮಿಯ ಅಂತ್ಯದಲ್ಲಿ ೨ ಘಳಿಗೆ, ಷಷ್ಠಿಯ ಆದಿಯಲ್ಲಿ ೨ ಘಳಿಗೆಗಳು ಅಂತು ೪ ಘಳಿಗೆ ಬಿಡತಕ್ಕದ್ದು, ಹೀಗೆಯೇ ದಶಮೀ ಏಕಾದಶಿಗಳಿಗೂ ಪೂರ್ಣಿಮಾ, ಪಾಡ್ಯಮಿಗಳಿಗೂ ನೋಡತಕ್ಕದ್ದು.

## ಲಗ್ನಗಂಡವು

**ಕುಳೀರಸಿಂಹಯೊಃಕೀಟಚಾಪಯೋರ್ಮೀನಮೇಷಯೋಃ ।**
**ಗಂಡಾಂತಮಂತರಾಳಂಸ್ಯಾದ್ಘಟಿಕಾರ್ಧಂಮೃತಿಪದಂ ॥**

ಕಟಕ, ಸಿಂಹ, ವೃಶ್ಚಿಕ, ಧನುಸ್ಸು, ಮೀನ, ಮೇಷ ಈ ಎರಡೆರಡು ರಾಶಿಗಳ ಅಂತರಾಳದಲ್ಲಿ ಅರ್ಧ ಘಳಿಗೆ ಗಂಡಾಂತರವು. ಅಂದರೆ ಕಟಕರಾಶಿಯಲ್ಲಿ ಕಾಲುಘಳಿಗೆಯೂ, ಸಿಂಹದ ಆದಿಯಲ್ಲಿ ಕಾಲು ಘಳಿಗೆ, ಅಂತು ಅರ್ಧ ಘಳಿಗೆ ಗಂಡಾಂತವಾದುದರಿಂದ ವಿವಾಹಾದಿ ಶುಭಕಾರ್ಯಗಳಲ್ಲಿ ಅವಶ್ಯ ಬಿಡತಕ್ಕದ್ದು. ಹೀಗೆಯೇ ವೃಶ್ಚಿಕ ಧನುಸ್ಸುಗಳಿಗೂ ಮೀನ ಮೇಷಗಳಿಗೂ ಗಂಡಾಂತವನ್ನು ತಿಳಿಯುತಕ್ಕದ್ದು.

## ನಕ್ಷತ್ರ ಗಂಡಗಳು

**ಸಾರ್ಪೇಂದ್ರಪೌಷ್ಣಭೆಷ್ಟಂತ್ಯೆ ಷೋಡಶಾಂಶಾಭಸಂಧಯಃ ।**
**ತದಗ್ರಭೆಷ್ವಾದ್ಯಪಾದೆ ಪಾದಗಂಡಾಂತಸಂಜ್ಞಿಕಾಃ ॥**

ಆಶ್ಲೇಷಾನಕ್ಷತ್ರದ ೪ನೇ ಪಾದದಲ್ಲಿ ೪ಘಳಿಗೆ, ಮಖಾ ನಕ್ಷತ್ರದ ಮೊದಲ ಪಾದದಲ್ಲಿ ನಾಲ್ಕು ಘಳಿಗೆಗಳು, ಹೀಗೆ ಜ್ಯೇಷ್ಠಾ ನಕ್ಷತ್ರ ಮೂಲನಕ್ಷತ್ರ ಇವುಗಳ ಅಂತ್ಯ ಆದಿಗಳಲ್ಲಿ ನಾಲ್ಕುನಾಲ್ಕು ಘಳಿಗೆಗಳು, ಹಾಗೆ ರೇವತೀ ಅಶ್ವಿನಿ ನಕ್ಷತ್ರಗಳ ಅಂತ್ಯ ಆದಿಗಳಲ್ಲಿಯೂ ಗಂಡಾಂತ ದೋಷಗಳನ್ನು ತಿಳಿಯತಕ್ಕದ್ದು.

## ಭೃಗುಷಟ್ಕವು

**ಷಟ್ಕಂವಿಹಾಯದೋಷಂಚ ಲಗ್ನಾಷ್ಟಷ್ಠಗತೆಸಿತೆ ।**
**ಉಚ್ಚಗೇಶುಭಸಂಯುಕ್ತಂ ತಲ್ಲಗ್ನಂ ಸರ್ವದಾತ್ಯಜೇತ್ ॥**

ಶುಕ್ರನು ವಿವಾಹಲಗ್ನಕ್ಕೆ ೬ ನೇ ರಾಶಿಯಲ್ಲಿದ್ದರೆ ಭೃಗುಷಟ್ಕವೆಂಬ ದೋಷ ಉಂಟಾಗುತ್ತದೆ, ಇದು ಪ್ರಬಲ ದೋಷವು, ಇದನ್ನು ಅವಶ್ಯ ಬಿಡತಕ್ಕದ್ದು. ಒಂದು ವೇಳೆ ಅಂಥಾ ರಾಶಿಯು ಶುಕ್ರನಿಗೆ ಉಚ್ಚಸ್ಥಾನವಾಗಿದ್ದರೂ ಅವನು ಶುಭಗ್ರಹಗಳೊಂದಿಗೆ ಕೂಡಿದ್ದರೂ ಪ್ರಯೋಜನವಿಲ್ಲ, ಆ ದೋಷವು ಯಾವಾಗ್ಯೂ ಬಿಡತಕ್ಕದ್ದೆ.

## ಕುಜಾಷ್ಟಮ ದೋಷ

**ಕುಜಾಷ್ಟಮೊಮಹಾದೋಷೋ ಲಗ್ನಾದಷ್ಟಮಗೆ ಕುಜ ।**
**ಶುಭತ್ರಯಯುತಂ ಲಗ್ನಂ ತ್ಯಜೆದ್ಯತ್ತುಂಗಗಯದಿ ॥**

ಕುಜನು ವಿವಾಹ ಲಗ್ನಕ್ಕೆ ೮ ನೇ ಸ್ಥಾನದಲ್ಲಿದ್ದರೆ ಕುಜಾಷ್ಟಮವೆಂಬುವ ಮಹಾದೋಷ ಉಂಟಾಗುತ್ತದೆಯಾಗಿ ಇದರಲ್ಲಿ ವಿವಾಹವನ್ನು ಮಾಡಬಾರದು. ಒಂದುವೇಳೆ ಆ ಲಗ್ನಕ್ಕೆ ಬಲವಿದ್ದರೂ ಕುಜನುಚ್ಚನಾಗಿದ್ದರೂ ಪ್ರಯೋಜನವಿಲ್ಲ.

**ಕುಜೇಷ್ಟಮೆಷಷ್ಠಗತೆ ಭೃಗೌವಾ ಷಷ್ಠಾಷ್ಟಮದ್ವಾಶದಗೆಚ ಚಂದ್ರೆ । ತದ್ದೋಷನಾಶಂರವಿಆಯಸಂಸ್ಥೋ ಲಗ್ನೆಯದಾ ಕೇಂದ್ರಗತೆಸುರೆಜ್ಯೆ ॥**

ವಿವಾಹಲಗ್ನಕ್ಕೆ ಭೃಗುಷಟ್ಕ ಕುಜಾಷ್ಟಮ ದ್ವಾದಶ ಚಂದ್ರ ಎಂಬ

ಮೂರು ಪ್ರಬಲ ದೋಷಗಳನ್ನು ಲಗ್ನಕ್ಕೆ ೧೧ ನೇ ಸ್ಥಾನದಲ್ಲಿರುವ ಸೂರ್ಯನು ಲಗ್ನ ಚತುರ್ಥ ಸಪ್ತಮ ದಶಮಗಳಲ್ಲಿರುವ ಬೃಹಸ್ಪತಿಯು ಸಹ ನಾಶ ಮಾಡುತ್ತಾರೆ.

## ಅಷ್ಟಮಲಗ್ನ ದೋಷ

**ಉಭಯೋರಷ್ಟಮಂಲಗ್ನಂ ವಿವಾಹಶುಭಕರ್ಮಣಿ ।**
**ಯದಿಲಗ್ನಗತಸ್ಸೋಽಪಿ ದಂಪತ್ಯೋರ್ಮರಣಪ್ರದಃ ॥**

ವಿವಾಹ ವಿಷಯದಲ್ಲಿ ದಂಪತಿಗಳ ಜನ್ಮಲಗ್ನಗಳಿಗೆ ಅಷ್ಟಮಲಗ್ನಗಳು ವಿವಾಹಲಗ್ನವಾಗಿರಕೂಡದು. ಅಂಥಾ ಅಷ್ಟಮಲಗ್ನಾಧಿಪತಿ ಅದರಲ್ಲೇ ಇದ್ದ ಪಕ್ಷದಲ್ಲಿ ದಂಪತಿಗಳಿಗೆ ಮರಣವುಂಟಾಗುತ್ತದೆ.

## ವಿಷನಾಡೀ ದೋಷ

**ಆದ್ಯೈಪರೆಸ್ಸ್ವೈರ್ಘಟಿಕಾಶ್ಚತಸ್ರೋವಿಷನಾಡಿಕಾಃ ।**
**ವಿಷನಾಡೀಸಮಾಯುಕ್ತ ತಲ್ಲಗ್ನಂಸರ್ವಥಾತ್ಯಜೇತ್ ॥**

ವಿಷನಾಡಿಯುಕ್ತವಾದ ಲಗ್ನಕ್ಕೆ ಆದ್ಯಂತಗಳಲ್ಲಿ ನಾಲ್ಕು ವಿಷಘಳಿಗೆಗಳು ಬಿಡತಕ್ಕವು. ಯಾವ ಲಗ್ನವು ವಿಷನಾಡೀ ಸಹಿತವಾಗಿರುತ್ತದೋ ಅದನ್ನು ತ್ಯಜಿಸಬೇಕು.

## ವಿಶೇಷವು

**ಲಗ್ನಸ್ಯಾದೌವಿಷಂತ್ಯಕ್ತ್ವಾ ಪಶ್ಚಾತ್ಕರ್ಮಾಣಿಕಾರಯೇತ್ ।**
**ಲಗ್ನಾಂತ್ಯೈವಿಷಸಂಯುಕ್ತಂತಲ್ಲಗ್ನಂಪರಿವರ್ಜಯೇತ್ ॥**

ಲಗ್ನಕ್ಕೆ ಮೊದಲು ವಿಷನಾಡಿಗಳನ್ನು ಬಿಟ್ಟು ತರುವಾಯ ಶುಭಕಾರ್ಯಗಳನ್ನು ಮಾಡತಕ್ಕದ್ದು, ಲಗ್ನವೆಲ್ಲಾ ವಿಷನಾಡೀ ಸಹಿತವಾದರೆ ಅದನ್ನೇ ಬಿಡಬೇಕು.

## ಖಾರ್ಜೂರ ಸಾಮ್ರಾಂಘ್ರಿ ದೋಷ

**ಏಕಾಮೂರ್ಧ್ವಗತಾಂತ್ರಯೋದಶತಥಾತಿರ್ಯಗ್ಗತಾಸ್ಥಾಪಯೆ ।**
**ದ್ರೇಖಾಚಕ್ರಮಿದಂಬುಧೈರಭಿಹಿತಂಖಾರ್ಜೂರಿಕಂತತ್ರತು ।**
**ವ್ಯಾಘಾತಾದಿಷು ಮೂರ್ಧ್ನಿಭಂತು ಕಥಿತಂ ತತ್ರೈಕರೇಖಾ**

**ಸ್ತ್ರಯೋಃ। ಸೂರ್ಯ್ಯಚಂದ್ರಮಸೋರ್ನಿರ್ಗತೊನಿಗದಿತೋದೃಕ್ಪಾತ ಏಕಾರ್ಗಳಃ ॥ ವ್ಯಾಘಾತ ಶೂಲ ಪರಿಘಾ ವ್ಯತಿಪಾತ ಪೂರ್ವ ಗಂಡಾಂತಿ ಗಂಡಕುಲಿಶೇಷು ಸ ವೈಧೃತೇಷು । ಆದಿತ್ಯಚಂದ್ರ ಪಿತೃ ಸಾರ್ಪಭದಸ್ರಮೂಲಮೈತ್ರಾಖ್ಯ ತಿಷ್ಯಸುರವರ್ಧಕಿಭಾನಿ ಮೂರ್ಧ್ನಿ ॥ ಚತುರ್ಥಕಸ್ತ್ವಾದ್ಯಪಾದಮಾದ್ಯಗಸ್ತು ಚತುರ್ಥಕಂ । ದ್ವಿತೀಯಗಸ್ತೃತೀಯಂಚ ತೃತೀಯಸ್ತುದ್ವಿತೀಯಕಂ । ಸಮಾಂಘ್ರಿವೇಧಸ್ಸರ್ವತ್ರ ವಿಜ್ಞೇಯೋಧಿಷ್ಣ್ಯಮಂಡಲೆ ॥**

ಊರ್ಧ್ವವಾಗಿ ಒಂದು ರೇಖೆಯನ್ನು ಬರೆದು ಅದರಲ್ಲಿ ಅಡ್ಡಗಳಾದ ೧೩ ರೇಖೆಗಳನ್ನು ಬರೆದರೆ ಅದು ಖಾರ್ಜೂರ ಚಕ್ರವೆನಿಸಿಕೊಳ್ಳುತ್ತದೆ. ಇದರಲ್ಲಿ ವ್ಯಾಘಾತ ಮೊದಲಾದ ೯ ಯೋಗಗಳಲ್ಲಿ ಹೇಳಲ್ಪಟ್ಟ ಆಯಾ ನಕ್ಷತ್ರವನ್ನು ಚಕ್ರದ ಶಿರಸ್ಸಿನಲ್ಲಿ ಬರಿಯಬೇಕು ಆ ಚಕ್ರದಲ್ಲಿ ಸೂರ್ಯಚಂದ್ರರು ಒಂದು ರೇಖೆಯ ನಕ್ಷತ್ರದಲ್ಲಿದ್ದರೆ ಆ ನಕ್ಷತ್ರಗಳಿಗೆ ಅನ್ಯೋನ್ಯ ದೃಷ್ಟಿಯುಂಟಾಗುತ್ತದೆ, ಇದೇ ಏಕಾರ್ಗಳವು. ಮತ್ತು ವೈಧೃತಿಯೊಂದಿಗೆ ನೇರಿದ ವ್ಯಾಘಾತ, ಶೂಲ, ಪರಿಘಾ, ವ್ಯತಿಪಾತ, ವಿಷ್ಕಂಭ, ಗಂಡಾತಿಗಂಡ, ವಜ್ರನಾಮಯೋಗಗಳಲ್ಲಿ ಪುನರ್ವಸು, ಮೃಗಶೀರ್ಷ, ಮಖ, ಆಶ್ಲೇಷಾ, ಅಶ್ವಿನೀ, ಮೂಲಾ, ಅನೂರಾಧಾ, ಪುಷ್ಯ, ಚಿತ್ರಾನಕ್ಷತ್ರಗಳು ಚಕ್ರದ ಶಿರಸ್ಸಿನಲ್ಲಿ ಕ್ರಮವಾಗಿ ಆಯಾ ಯೋಗಗಳ ನಕ್ಷತ್ರಗಳನ್ನು ಬರಿಯಬೇಕು. ಹೀಗೆ ಬರಿಯಲ್ಪಟ್ಟ ಚಕ್ರದಲ್ಲಿ ಬರಿಯಲ್ಪಟ್ಟ ನಕ್ಷತ್ರಮಂಡಲದಲ್ಲಿ ಸೂರ್ಯನು ನಾಲ್ಕನೇ ಪಾದದಲ್ಲಿದ್ದರೆ ಚಂದ್ರನಿರುವ ನಕ್ಷತ್ರ ಮೊದಲನೇ ಪಾದವನ್ನು ಕುರಿತು, ಮೊದಲನೇ ಪಾದದಲ್ಲಿದ್ದರೆ ನಾಲ್ಕನೇ ಪಾದವನ್ನು ಕುರಿತು, ೨ ನೇ ಪಾದದಲ್ಲಿದ್ದರೆ ೩ ನೇ ಪಾದವನ್ನು ಕುರಿತು, ೩ನೇ ಪಾದದಲ್ಲಿದ್ದರೆ ೨ನೇ ಪಾದವನ್ನು ಕುರಿತು ಸಮಪಾದ ವೇಧೆಯೆಂದು ತಿಳಿಯಬೇಕು. ಅಂದರೆ ಈ ಖಾರ್ಜೂರಚಕ್ರದಲ್ಲಿ ವ್ಯಾಘಾತಕ್ಕೆ ಪುನರ್ವಸು, ವಿಷ್ಕಂಭಕ್ಕಶ್ವಿನೀ, ಗಂಡಕ್ಕೆ ಮೂಲ, ಅತಿಗಂಡಕ್ಕನೂರಾಧ, ವಜ್ರಕ್ಕೆ ಪುಷ್ಯ, ವ್ಯತೀಪಾತಕ್ಕಾಶ್ಲೇಷಾ, ಶೂಲಕ್ಕೆ ಮೃಗಶಿರ, ಪರಿಘಕ್ಕೆ ಮಖಾ, ವೈಧೃತಿಗೆ ಚಿತ್ರಾ, ಈ ಯೋಗಗಳೊಳು ಯಾವ ಯೋಗದಲ್ಲಿ ಮುಹೂರ್ತವಿಡಬೇಕಾದರೂ ಅದಕ್ಕೆ ಹೇಳಲ್ಪಟ್ಟ ನಕ್ಷತ್ರವನ್ನು ತಲೆಯಲ್ಲಿ

ಬರೆದು ಪ್ರದಕ್ಷಿಣ ಕ್ರಮವಾಗಿ ೨೭ ನಕ್ಷತ್ರವನ್ನು ಬರದು ನೋಡುವಲ್ಲಿ ಮುಹೂರ್ತದ ನಕ್ಷತ್ರವಿದ್ದ ರೇಖೆಯ ಎದುರು ರೇಖೆಯಲ್ಲಿ ಸೂರ್ಯನಿರುವ ನಕ್ಷತ್ರವಿದ್ದರೆ ಖಾರ್ಜೂರಿಕ ದೋಷವುಂಟಾಗುತ್ತದೆ, ಬೇರೆ ರೇಖೆಯಲ್ಲಿದ್ದರೆ ದೋಷವಿಲ್ಲ, ಮತ್ತು ಸೂರ್ಯನು ಪ್ರಥಮ ಪಾದದಲ್ಲಿದ್ದು ಚಂದ್ರನು ೪ ನೇ ಪಾದದಲ್ಲಿದ್ದರೆ ಏಕಾರ್ಗಳ ದೋಷ ಉಂಟಾಗುತ್ತದೆ ಈ ಮೇರೆ ನಾಲ್ಕನೇಪಾದಕ್ಕೂ ೧ನೇ ಪಾದಕ್ಕೂ, ೩ ನೇ ಪಾದಕ್ಕೂ ೨ ನೇ ಪಾದಕ್ಕೂ, ಏಕಾರ್ಗಳ ದೋಷವೆಂಬುದಾಗಿಯೂ, ಹೀಗಿಲ್ಲದೆ ಪಾದಭೇದವಿದ್ದರೆ ದೋಷವಿಲ್ಲವೆಂಬುದಾಗಿಯೂ ತಿಳಿಯತಕ್ಕದ್ದು.

## ಗ್ರಹಣೋತ್ಪಾತ ನಕ್ಷತ್ರದೋಷ

**ಗ್ರಹಣೋತ್ಪಾತಭಂತ್ಯಾಜ್ಯಂ ಮಂಗಳೇತುಋತುತ್ರಯಂ ।**
**ಯಾವಚ್ಛರವಿಣಾಭುಕ್ತಂ ಯುಕ್ತಂದಗ್ಧಮಿವೇಂಧನಂ ॥**

ಯಾವ ನಕ್ಷತ್ರದಲ್ಲಿ ಚಂದ್ರ ಸೂರ್ಯ ಗ್ರಹಣ ಹಿಡಿಯುತ್ತದೋ ಅಂಥಾ ನಕ್ಷತ್ರವನ್ನು ಸರ್ವ ಶುಭಕಾರ್ಯಗಳಲ್ಲೂ ಬಿಡತಕ್ಕದ್ದು, ವಿವಾಹದಲ್ಲಾದರೂ ೬ ತಿಂಗಳವರೆವಿಗೂ ಬಿಡತಕ್ಕದ್ದು, ಸೂರ್ಯನಿಂದ ಬಿಡಲ್ಪಟ್ಟ ನಕ್ಷತ್ರವು ಸುಡಲ್ಪಟ್ಟ ಕಟ್ಟಿಗೆಯಂತೆ ವರ್ಜಿಸತಕ್ಕದ್ದಾಗಿರುತ್ತದೆ

## ಕ್ರೂರವಿರುದ್ಧ ದೋಷ

**ಕ್ರೂರಗ್ರಹೇಣಸಂವಿದ್ಧಂ ಕ್ರೂರಗ್ರಹಸಮನ್ವಿತಂ ।**
**ಅಖಿಲರ್ಕ್ಷಂಪಂಚಗವ್ಯಂ ಸುರಾಬಿಂದುಯುತಂಯಥಾ ॥**

ಕ್ರೂರಗ್ರಹ ವಿರುದ್ಧವಾಗಿಯಾದರೂ ಯುಕ್ತವಾಗಿಯಾದರೂ ಇರುವ ಎಲ್ಲಾ ನಕ್ಷತ್ರಗಳೂ ಬಿಂದುಮಾತ್ರ ಸಾರಾಯಿ ಕಲಿತ ಪಂಚಗವ್ಯದಂತೆ ಅವಶ್ಯ ಬಿಡತಕ್ಕದ್ದು.

**ಕ್ರೂರವಿಮುಕ್ತಂದಗ್ಧಂ ಕ್ರೂರಗತಂಜ್ವಲಿತಧೂಮಿತಂಪುರತಃ ।**
**ತೇಷಾಂಕ್ರೂರಗತಾಂಶಾಂ ಸಮಸ್ತಕಾರ್ಯೇಷುವರ್ಜಯೇದ್ಧೀಮಾನ್ ॥**

ಕ್ರೂರಗ್ರಹದಿಂದ ಬಿಡಲ್ಪಟ್ಟದ್ದು ಸುಡಲ್ಪಟ್ಟದ್ದು ಕ್ರೂರವಿರುವ ನಕ್ಷತ್ರವು ಜ್ವಲಿತವು ಉರಿಯುವದು, ಕ್ರೂರಗ್ರಹ ಬರತಕ್ಕದ್ದು, ಹೊಗೆ ಏಳುತ್ತಿರುವುದು, ಅದರಿಂದ ಸೂರ್ಯನು ಯಾವ ನಕ್ಷತ್ರದಲ್ಲಿರುತ್ತಾನೋ ಅದು ಅದಕ್ಕೆ

ಹಿಂದಿನದು ಮುಂದಿನದು ಈ ಮೂರು ನಕ್ಷತ್ರಗಳನ್ನು ವಿವಾಹಾದಿ ಶುಭಕಾರ್ಯ ಗಳಲ್ಲಿ ಬಿಡತಕ್ಕದ್ದು.

## ಮಹಾಪಾತದೋಷ

**ಯಸ್ಮಿನ್ದಿನೆಮಹಾಪಾತಸ್ತದ್ದಿನಂಪರಿವರ್ಜಯೇತ್ ।**
**ಅಪಿಸರ್ವಗುಣೋಪೇತಂ ದಂಪತ್ಯೋರ್ಮೃತ್ಯುದಂಭವೇತ್ ॥**

ಯಾವ ದಿನವಲ್ಲಿ ಮಹಾಪಾತ ಉಂಟಾಗುತ್ತದೋ ಆ ದಿನಕ್ಕೆ ಮಿಕ್ಕ ಎಲ್ಲಾ ಗುಣಗಳೂ ಇದ್ದರೂ ಅದು ಮೃತ್ಯುಕರವಾದುದರಿಂದ ಅವನ್ನು ಬಿಡ ತಕ್ಕದ್ದು.

**ಪರಿತ್ಯಜ್ಯಮಹಾದೋಷಾಂಚ್ಛೇಷಯೋರ್ಗುಣದೋಷಯೋಃ ।**
**ಗುಣಾಧಿಕಸ್ವಲ್ಪದೋಷಂ ಸಕಲಂಮಂಗಳಪ್ರದಂ ॥**

ಮಹಾದೋಷಗಳನ್ನು ಶುದ್ಧವಾಗಿ ಬಿಟ್ಟು ಸಾಮಾನ್ಯ ದೋಷಗಳನ್ನು ಗುಣಗಳು ಅಧಿಕಗಳಾಗಿದ್ದರೆ ಪರಿಗ್ರಹಿಸಬಹುದು, ಶುಭಪ್ರದಗಳಾಗುತ್ತವೆ.

## ಗುಳಿಕ ಯಮಕಂಟಕ ಅರ್ಧಪ್ರಹಾರ ಕಾಲನಿರ್ಣಯ

**ಅಹಃಪ್ರಮಾಣಂವಸುಭಾಗಿತಂಚ ತದ್ವಾರನಾಥೇಪ್ರಥಮಾದ್ಯ ಭಾಗೌ । ಶೇಷಂಷಡಂಶಂಕ್ರಮವೀಕ್ಷಣೇಯಂ ಶನೇಸ್ತುಭಾಗಂ ಗುಳಿಕಾಂವದಂತಿ । ಶಸ್ಯಂಶೊಗುಳಿಕಾಗ್ನೆಯಾ ಗುರ್ವಂಶೊ ಯಮಕಂಟಕಃ । ಅರ್ಧಪ್ರಹಾರ ಸೌಮ್ಯಾಂಶಶ್ಚಾರ್ಕಾಂಶಃ ಕಾಲಸಂಜ್ಞಿಕಃ ॥**

ದಿನಪ್ರಮಾಣ ಘಳಿಗೆಗಳು ೮ರಲ್ಲಿ ಭಾಗಿಸಿ ಆ ಭಾಗಗಳಲ್ಲಿ ಮೊದಲು ೨ ಭಾಗಗಳು ವಾರಾಧಿಪತಿಗೆ, ತರುವಾಯ ಆರು ಅಂಶಗಳಿಗೆ ಮಿಕ್ಕ ಆರು ಗ್ರಹಗಳು ಭಾಗಸ್ಥರಾದುದರಿಂದ ಮುಹೂರ್ತವು ಗುರುವಿನ ಅಂಶಕಾಲವಾದರೆ ಯಮಕಂಟಕನ ಕಾಲವೆಂಬದಾಗಿಯೂ, ಶನಿಯು ಅಂಶವಾಗಿದ್ದರೆ ಗುಳಿಕಕಾಲ ವೆಂಬದಾಗಿಯೂ, ಬುಧನ ಅಂಶವಾಗಿದ್ದರೆ ಅರ್ಧಪ್ರಹಾರ ಕಾಲವೆಂಬದಾ ಗಿಯೂ ರವಿಯು ಅಂಶವಾಗಿದ್ದರೆ ಕಾಲ ಎಂಬದಾಗಿಯೂ ತಿಳಿಯತಕ್ಕದ್ದು.

# ಯಾತ್ರಾ ಪ್ರಕರಣ

**ನಂದಾಭಿದಾನಾ ಸ್ತಿಥಯಸ್ತು ಪೂರ್ವೆ ಭದ್ರಾಯ ಭದ್ರಾಃ ಕಥಿತಾಯಮೇಚ । ಜಯಾ ಜಯಾರ್ಥಂ ಯದಿಪಶ್ಚಿಮೇಚ ಪೂರ್ಣಾ ಉಧೀಚ್ಯಾಂಸಗತಂತುರಿಕ್ತೆ ॥**

ಪೂರ್ವ ದಿಕ್ಕಿಗೆ ಪ್ರಯಾಣಕ್ಕೆ ನಂದಾ ತಿಥಿಗಳು ಶುಭಗಳು, ದಕ್ಷಿಣಕ್ಕೆ ಭದ್ರಾ ತಿಥಿಗಳು, ಪಡುವಲ ದಿಕ್ಕಿಗೆ ಜಯಾ ತಿಥಿಗಳು, ಬಡಗಲ ದಿಕ್ಕಿಗೆ ಪೂರ್ಣಾ ತಿಥಿಗಳಲ್ಲಿ ರಿಕ್ತ ತಿಥಿಗಳಲ್ಲಿ ಯಾವ ದಿಕ್ಕಿಗೂ ಪ್ರಯಾಣವಾಗ ಕೂಡದು.

## ತಿಥಿಶೂಲೆಗಳು

**ಪ್ರತಿಪನ್ನವಮಿಾಪೂರ್ವೆ ದ್ವಿತೀಯಾ ದಶಮೋತ್ತರೆ ।**
**ತೃತೀಯೈಕಾದಶೀಚಾಗ್ನೌ ಚತುರ್ದ್ವಾದಶನೈರುತೆ ।**
**ಪಂಚತ್ರಯೋದಶೀಯಾಮ್ಯೆ ಜಲೆಷಷ್ಠಿತ್ರಯೋದಶೀ ।**
**ಸಪ್ತಮಿಾಪೂರ್ಣಿಮಾವಾಯೌ ಅಮಾವಾಸ್ಯಾಷ್ಟಮಿಾಶಿವೆ ॥**

ಮೂಡಲದಿಕ್ಕಿನಲ್ಲಿ ಪಾಡ್ಯಮಿ ನವಮಿಗಳೂ, ಬಡಗಲ ದಿಕ್ಕಿನಲ್ಲಿ ಬಿದಿಗೆ ದಶಮಿಗಳೂ, ಆಗ್ನೇಯದಿಕ್ಕಿನಲ್ಲಿ ತದಿಗೆ ಏಕಾದಶಿಗಳು, ನೈಋತ್ಯ ದಿಕ್ಕಿನಲ್ಲಿ ಚೌತಿ ದ್ವಾದಶಿಗಳೂ, ಟೆಂಕಣದಿಕ್ಕಿನಲ್ಲಿ ಪಂಚಮಿ ತ್ರಯೋದಶಿಗಳೂ, ಪಡವಲದಿಕ್ಕಿನಲ್ಲಿ ಷಷ್ಠೀ ತ್ರಯೋದಶಿಗಳೂ, ವಾಯುವ್ಯದಿಕ್ಕಿನಲ್ಲಿ ಸಪ್ತಮಿ ಪೌರ್ಣಮಿಗಳೂ ಈಶಾನ್ಯದಿಕ್ಕಿನಲ್ಲಿ ಅಮಾವಾಸ್ಯೆ ಅಷ್ಟಮಿಗಳೂ ತಿಥಿಶೂಲಗಳೆಂದು ತಿಳಿಯತಕ್ಕದ್ದು.

## ವಾರಶೂಲಗಳು

**ನಪೂರ್ವೆಶನಿಸೋಮೌಚ ನಗುರುರ್ದಕ್ಷಿಣೆತಥಾ ।**
**ನಪಶ್ಚಾದ್ಭಾನು ಶುಕ್ರೌಚ ನೋತ್ತರೆಬುಧಮಂಗಳೌ ॥**

ಶನಿ ಸೋಮವಾರಗಳಲ್ಲಿ ಮೂಡಲದಿಕ್ಕಿಗೂ, ಗುರುವಾರದಲ್ಲಿ ದಕ್ಷಿಣ ದಿಕ್ಕಿಗೂ, ರವಿ ಶುಕ್ರವಾರಗಳಲ್ಲಿ ಪಡವಲದಿಕ್ಕಿಗೂ, ಬುಧ ಮಂಗಳವಾರಗಳಲ್ಲಿ ಉತ್ತರದಿಕ್ಕಿಗೂ ಪ್ರಯಾಣ ಹೊರಡಕೂಡದು.

**ಶನಿಗುರುಶ್ಚಾಪ್ಯಾಗ್ನೆಯಿ ಸೋಮಶುಕ್ರೌಚನೈಋತೆ ।**
**ಕುಜಾಧಿತ್ಯಾಚವಾಯುವ್ಯೆ ಬುಧೆ ಈಶಾನ್ಯಯೋವಜ ॥**

ಶನಿ ಗುರುವಾರಗಳಲ್ಲಿ ಆಗ್ನೇಯ ದಿಕ್ಕಿಗೂ, ಸೋಮ ಶುಕ್ರವಾರಗಳು ನಿರುಋತಿ ದಿಕ್ಕಿಗೂ, ಕುಜ ರವಿವಾರಗಳಲ್ಲಿ ವಾಯುವ್ಯಕ್ಕೂ, ಬುಧವಾರದಲ್ಲಿ ಈಶಾನ್ಯ ದಿಕ್ಕಿಗೂ ಪ್ರಯಾಣ ಮಾಡಕೂಡದು.

## ವಾರಶೂಲಭಂಗ

**ದ್ವಾವಿಂಶತಿರ್ಗುರೌಚೈವ ದ್ವಾದಶೆಂದುಜಭೌಮಯೋಃ ।**
**ಪಂಚಾದಶೆಭೃಗೌಭಾನೌ ಮಂದೆಂದ್ವೋಶ್ಚಾಷ್ಟನಾಡಿಕಾಃ ।**
**ವಾರಶೂಲಾಇಮಾಸ್ತ್ಯಾಜ್ಯಾಶ್ಶೇಷಂಗಮನ ಶೋಭನಂ ॥**

ಗುರುವಾರದಲ್ಲಿ ೨೨ ಘಳಿಗೆಗಳು, ಅಂಗಾರಕ ಬುಧವಾರಗಳಲ್ಲಿ ೧೨ ಘಳಿಗೆಗಳು, ಶುಕ್ರ ಶನಿವಾರಗಳಲ್ಲಿ ೧೫ ಘಳಿಗೆಗಳು, ಸೋಮ ಶನಿವಾರಗಳಲ್ಲಿ ೮ ಘಳಿಗೆಗಳು ತ್ಯಾಜ್ಯಗಳು, ಮಿಕ್ಕ ಘಳಿಗೆಗಳೆಲ್ಲಾ ಪ್ರಯಾಣದಲ್ಲಿ ಶುಭ ಕರಗಳು.

## ದಿಗ್ದ್ವಾರ ಫಲ

**ಅಂಗಾರಕೆಪ್ರಾಗ್ಗಮನಂಚಲಾಭಸ್ಸೌಮ್ಯೆಶನೌ ದಕ್ಷಿಣಮರ್ಥ ಲಾಭಃ । ಗುರೌಬುಧೆರ್ವಾಗ್ದಿಶಿಕಾರ್ಯಸಿದ್ಧಿಃ ರವೌಭೃಗೌಚೋ ತ್ತರಧಾನ್ಯಲಾಭಃ ॥**

ಮಂಗಳವಾರದಲ್ಲಿ ಮೂಡಲಕಡೆಗೆ ಪ್ರಯಾಣ ಲಾಭಕರವು, ಸೋಮ ಶನಿವಾರಗಳಲ್ಲಿ ದಕ್ಷಿಣದಿಕ್ಕಿಗೆ ಪ್ರಯಾಣ ಅರ್ಥಲಾಭವು, ಬುಧ ಗುರುವಾರ ಗಳಲ್ಲಿ ಪಶ್ಚಿಮದಲ್ಲಿ ಪ್ರಯಾಣದಿಂದ ಕಾರ್ಯಸಿದ್ಧಿಯು, ರವಿ ಶುಕ್ರವಾರಗಳಲ್ಲಿ ಉತ್ತರ ಪ್ರಯಾಣದಿಂದ ಲಾಭವಹುದು.

## ಪ್ರತ್ಯೇಕ ವಾರಫಲ

**ಅರ್ಕೇಕ್ಲೇಶಮನರ್ಥಕಂಚ ಗಮನಂ ಸೋಮೇಚಬಂಧುಪ್ರಿಯಂ।**
**ಭೂಜಾತೇನಲತಸ್ಕರಜ್ವರಭಯಂ ಪ್ರಾಪ್ತವ್ಯಮರ್ಥಂಬುಧೆ ।**
**ಕ್ಷೇಮಾರೋಗ್ಯಮಿದಂಕರೋತಿಧಿಷಣೆಶುಕ್ರೆಚಲಾಭಂಸ್ಥಿರಂ ।**
**ವ್ಯಾಧಿಂಭಂಗಮಿದಂಕರೋತಿಸತತಂ ಮಂದೆದಿನೆಗಮ್ಯತಾ ॥**

ಭಾನುವಾರದಲ್ಲಿ ಬಂಧುಜನ ಸಂತೋಷ, ಕುಜವಾರದಲ್ಲಿ ಅಗ್ನಿ ಚೋರ ಜ್ವರ ಭಯವು, ಬುಧವಾರದಲ್ಲಿ ಧನಲಾಭವು, ಗುರುವಾರದಲ್ಲಿ ಕ್ಷೇಮಾರೋಗ್ಯ ಗಳುಂಟಾಗುತ್ತವೆ. ಶುಕ್ರವಾರದಲ್ಲಿ ಸ್ಥಿರಲಾಭ ಉಂಟಾಗುತ್ತದೆ, ಶನಿವಾರ ದಲ್ಲಿ ಪ್ರಯಾಣದಿಂದ ವ್ಯಾಧಿ ಭಂಗಗಳುಂಟಾಗುತ್ತವೆ.

## ವಾರದೋಷ ಭಂಗ

**ಕ್ಷೀರಂಚ ಭಾನೌದಧಿಶೀತರಸ್ಮೌ ಕುಜೇಚ ಮಾಷಾಕ್ಷ್ಯ ಬುಧೆ**
**ಚಲಾ । ಜೀವೇಪಿಚಾಜ್ಯಂಭೃಗುಪಾಯಸಂಚ ಮಂದೇಚವಾರೆ**
**ತಿಲಪಿಷ್ಟಮಾಹುಃ ॥**

ಭಾನುವಾರದಲ್ಲಿ ಹಾಲನ್ನೂ, ಸೋಮವಾರದಲ್ಲಿ ಮೊಸರನ್ನೂ, ಮಂಗಳ ವಾರದಲ್ಲಿ ಉದ್ದನ್ನೂ, ಬುಧವಾರದಲ್ಲಿ ಭತ್ತದ ಅರಳನ್ನೂ, ಗುರುವಾರದಲ್ಲಿ ತುಪ್ಪವನ್ನೂ, ಶುಕ್ರವಾರದಲ್ಲಿ ಪಾಯಸವನ್ನೂ, ಶನಿವಾರದಲ್ಲಿ ಎಳ್ಳನ್ನೂ ದಾನಮಾಡಿ ಹೊರಡುವಂಥಾವನಿಗೆ ವಾರದೋಷಗಳಿಲ್ಲವೆಂದು ಭಾವವು.

## ತಿಥಿವಿಷಯದಲ್ಲಿ ವಿಶೇಷ

**ದ್ವಿತೀಯಾಚತೃತೀಯಾಚ ಪಂಚಮೀಸಪ್ತಮೀತಥಾ ।**
**ದಶಮ್ಯೇಕಾದಶೀಚೈವ ಯಾತ್ರಾಸಿದ್ಧಿಂತ್ರಯೋದಶೀ ।**
**ಕೃಷ್ಣೇವಾಯದಿವಾಶುಕ್ಲೇ ವರ್ಜನೀಯಾಚತುರ್ದಶೀ ।**
**ಪೌರ್ಣಿಮಾಸ್ಯಾಮಮಾಯಾಂಚ ನಗಂತವ್ಯಂಕದಾಚನ ॥**

ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ದಶಮೀ, ಏಕಾ ದಶಿ, ತ್ರಯೋದಶೀ ಈ ೭ತಿಥಿಗಳು ಯಾತ್ರಾಸಿದ್ಧಿಯನ್ನು ಕೊಡುತ್ತವೆ. ಕೃಷ್ಣ ಪಕ್ಷದಲ್ಲಾದರೂ, ಶುಕ್ಲಪಕ್ಷದಲ್ಲಾದರೂ ಚತುರ್ದಶಿಯು ತ್ಯಾಜ್ಯವು, ಮತ್ತು ಪೂರ್ಣಿಮಾ ಅಮಾವಾಸ್ಯಾ ಈ ತಿಥಿಗಳಲ್ಲಿ ಯಾವಾಗ್ಯೂ ಪ್ರಯಾಣಮಾಡ ಕೂಡದು.

**ಇಂದ್ರೇದಧಿಯಮೇತೈಲಂ ವಾರುಣೆಗುಡಮೇವಚ ।**
**ಉತ್ತರೆಕ್ಷೀರಮಾಜ್ಯಂಚ ವಾರದೋಷೋನವಿದ್ಯತೆ ॥**

ಪೂರ್ವದಿಕ್ಕಿಗೆ ಪ್ರಯಾಣ ಹೊರಡುವಾಗ ಮೊಸರನ್ನು, ದಕ್ಷಿಣದಿಕ್ಕಿಗೆ ಪ್ರಯಾಣವಾದಾಗ ಎಣ್ಣೆಯನ್ನೂ, ಪಶ್ಚಿಮದಿಕ್ಕಿಗೆ ಪ್ರಯಾಣವಾದಾಗ ಬೆಲ್ಲ

ವನ್ನೂ, ಉತ್ತರದಿಕ್ಕಿಗೆ ಪ್ರಯಾಣವಾದಾಗ ಹಾಲನ್ನೂ ತುಪ್ಪವನ್ನೂ ಸಹ ದಾನಮಾಡಿ ಹೊರಟರೆ ಆ ವಾರದೋಷ ಉಂಟಾಗುವದಿಲ್ಲ.

## ಪ್ರಯಾಣಯೋಗ್ಯ ನಕ್ಷತ್ರಗಳು

**ಮೃಗಾಶ್ವಿನೀಪುಷ್ಯಪುನರ್ವಸೂಚ ಹಸ್ತಾನುರಾಧಾಶ್ರವಣಾನಿ ಮೂಲಾ । ಧನಿಷ್ಠರೇವತ್ಯಖಿಲೆಪ್ರಯಾಣೆ ಫಲಂಲಭೇಚ್ಛೀಘ್ರ ನಿವರ್ತನಂಚ ॥**

ಮೃಗಶಿರ, ಅಶ್ವಿನೀ, ಪುಷ್ಯ, ಪುನರ್ವಸು, ಹಸ್ತಾ, ಅನೂರಾಧ, ಶ್ರವಣ, ಮೂಲ, ಧನಿಷ್ಠಾ, ರೇವತೀ ಈ ನಕ್ಷತ್ರಗಳಲ್ಲಿ ಹೊರಡುವವನಿಗೆ ಶೀಘ್ರವಾಗಿ ನಿವೃತ್ತಿಯೂ ಶುಭಫಲವೂ ಸಹ ಉಂಟಾಗುತ್ತವೆ.

**ಕೃತ್ತಿಕಾಭರಣೀ ಸಾರ್ಪದ್ವಿದೈವತ್ಯತ್ರಿಪೂರ್ವಕಾಃ ।**
**ರುದ್ರಭಂಡೂಷಿತಾಶ್ಚೈವ ಶೇಷಾಸ್ಯುರ್ಮಧ್ಯತಾರಕಾಃ ॥**

ಕೃತ್ತಿಕಾ, ಭರಣೀ, ಆಶ್ಲೇಷಾ, ವಿಶಾಖಾ, ಪೂಫ, ಪೂಷಾ, ಪೂಭಾ, ಆದ್ರ್ರಾ, ಈ ೮ ನಕ್ಷತ್ರಗಳು ದೂಷ್ಯಗಳಾದವುಗಳು, ಅಂದರೆ ಅಧಮಗಳು, ಮಿಕ್ಕ ನಕ್ಷತ್ರಗಳು ಮಧ್ಯಮಗಳು.

**ಉತ್ತಮಂಚಾಂತ್ಯಭಂಚೈವ ಮಧ್ಯಮೆಮಧ್ಯಮೆತಥಾ ।**
**ಆದ್ಯಹೀನಂಯಥಾಪಾದಂ ತದಂಶ ಘಟಿಕಾಸ್ತ್ಯಜೇತ್ ॥**

ಇಲ್ಲಿ ಪ್ರಯಾಣಕ್ಕೆ ಯೋಗ್ಯಗಳಾಗಿ ಹೇಳಲ್ಪಟ್ಟ ನಕ್ಷತ್ರಗಳಲ್ಲಿ ೪ ನೇ ಪಾದಗಳು ಶ್ರೇಷ್ಠಗಳು, ೨-೩ ನೇ ಪಾದಗಳು ಮಧ್ಯಮಗಳು, ೧ ನೇ ಪಾದ ಗಳು ಅಧಮಗಳು, ಆದ್ದರಿಂದ ಆ ನಕ್ಷತ್ರಗಳಲ್ಲಿ ಒಂದೊಂದು ಪಾದಕ್ಕೆ ಇಷ್ಟಿಷ್ಟು ಘಳಿಗೆಗಳೆಂದು ಏರ್ಪಡಿಸಿ ಆಯಾ ಪಾದಗಳಲ್ಲಿ ಪ್ರಯಾಣ ಮಾಡತಕ್ಕದ್ದು.

## ನಕ್ಷತ್ರ ಶೂಲಗಳು

**ಪೂರ್ವೆಜ್ಯೇಷ್ಠೆಧನಿಷ್ಠೇಚ ಶ್ರವಣಾಶ್ವಿನಿದಕ್ಷಿಣೆ ।**
**ಪಶ್ಚಿಮೆಪುಷ್ಯರೋಹಿಣ್ಯಾ ಹಸ್ತಾಫಲ್ಗುನಿಚೋತ್ತರೆ ।**
**ಯೆತನ್ನಕ್ಷತ್ರಶೂಲಾಯಾಂ ನಯಾತ್ರಾಪುನರಾಗಮಃ ॥**

'ಪೂರ್ವದಿಕ್ಕಿಗೆ ಜ್ಯೇಷ್ಠಾ, ಧನಿಷ್ಠಾ, ದಕ್ಷಿಣಕ್ಕೆ ಶ್ರವಣ, ಅಶ್ವಿನಿ, ಪಶ್ಚಿಮಕ್ಕೆ ಪುಷ್ಯ, ರೋಹಿಣೀ, ಉತ್ತರಕ್ಕೆ ಹಸ್ತ, ಫಲ್ಗುನೀ, ಈ ಮೇರೆ ಈ

ನಕ್ಷತ್ರಗಳು ಶೂಲಗಳಾದುದರಿಂದ ಇವುಗಳಲ್ಲಿ ಈ ದಿಕ್ಕುಗಳಿಗೆ ಪ್ರಯಾಣ ಮಾಡಕೂಡದು, ಅಂದರೆ ಈ ಪ್ರಯಾಣಗಳು ನಡಿಯಲಾರವು.

## ಲಗ್ನಗಳು

**ಚರೆಲಗ್ನೇಚಗಂತವ್ಯಂ ದ್ವಿಸ್ವಭಾವೇಸದಾನೃಪೈಃ ।**
**ಲಗ್ನೆಸ್ಥಿರೆನಗಂತವ್ಯಂಯಾತ್ರಾಯಾಂ ಕ್ಷೇಮಮಿಚ್ಛತಾ ॥**

ಪ್ರಯಾಣದಲ್ಲಿ ಕ್ಷೇಮವಾಗಿ ಪುನಃ ಸ್ವಸ್ಥಾನವನ್ನು ಸೇರಬೇಕೆಂದು ಅಪೇಕ್ಷಿಸುವವನು ಚರಲಗ್ನದಲ್ಲಿ ಪ್ರಯಾಣ ಮಾಡತಕ್ಕದ್ದು, ದ್ವಿಸ್ವಭಾವ ಲಗ್ನ ದಲ್ಲಿ ಅರಸುಗಳು ಪ್ರಯಾಣ ಮಾಡತಕ್ಕದ್ದು, ಸ್ಥಿರಲಗ್ನದಲ್ಲಿ ಯಾರೂ ಪ್ರಯಾಣ ಮಾಡಕೂಡದು.

**ದಿಗೀಶಾಸ್ಸೂರ್ಯಶುಕ್ರಾರರಾಹ್ವರ್ಕೀಂದುಜ್ಞ ಸೂರಯಃ ।**
**ದಿಗೀಶ್ವರೆಲಲಾಟಸ್ಥೆ ಯಾತುರ್ನಪುನರಾಗಮಃ ॥**

ರವಿ, ಶುಕ್ರ, ಕುಜ, ರಾಹು, ಶನಿ, ಸೋಮ, ಬುಧ, ಗುರುಗಳು ಪ್ರಾಗ್ದಿಕ್ಕು ಮೊದಲು ೮ ದಿಕ್ಕುಗಳಿಗೆ ಅಧಿಪತಿಗಳು, ಯಾವ ದಿಕ್ಕಿನ ಅಧಿ ಪತಿಯು ಆ ದಿಕ್ಕಿನಲ್ಲಿ ಇದ್ದುಕೊಂಡು ಎದುರು ನೋಡುತ್ತಲಿರುತ್ತಾನೋ ಆ ದಿಕ್ಕಿಗೆ ಪ್ರಯಾಣ ಹೋಗುವವನು ಪುನಃ ಸ್ವಸ್ಥಾನವನ್ನು ಸೇರುವುದಿಲ್ಲ.

## ಲಲಾಟ ಯೋಗ

**ಲಗ್ನಸ್ಥೊಭಾಸ್ಕರಃ ಪ್ರಾಚ್ಯಾಂ ದಿಶಿಯಾತುರ್ಲಲಾಟಕಃ ।**
**ದ್ವಾದಶೈಕಾದಶೆಶುಕ್ರೆ ಆಗ್ನೇಯಾಂತುಲಲಾಟಕಃ ।**
**ದಶಮಸ್ಥೆಕುಜೊಲಗ್ನಾದ್ಯಾಮ್ಯಾಯಾಂತುಲಲಾಟಕಃ ।**
**ನವಮಾಷ್ಟಮಗೊರಾಹುರ್ನೈರುತ್ಯಾಂತುಲಲಾಟಕಃ ॥**
**ಲಗ್ನಾತ್ಸಪ್ತಮಗಸ್ಸೌರಿಃ ಪ್ರತೀಚ್ಯಾಂತುಲಲಾಟಕಃ ।**
**ಷಟ್ಪಂಚಮಗತಶ್ಚಂದ್ರೋ ವಾಯುವ್ಯಾಂತುಲಲಾಟಕಃ ।**
**ಚತುರ್ಥಸ್ಥಾನಗಸ್ಸೌಮ್ಯಃ ಉತ್ತರಿಸ್ಯಾಂಲಲಾಟಕಃ ।**
**ದ್ವಿತ್ರಿಸ್ಥಾನಗತೊಜೀವಃ ಐಶಾನ್ಯಾಂತುಲಲಾಟಕಃ ॥**

ಪ್ರಯಾಣಲಗ್ನದಲ್ಲಿರುವ ಸೂರ್ಯನು ಪೂರ್ವದಿಕ್ಕಿಗೆ ಪ್ರಯಾಣಮಾಡು ವವನಿಗೆ ಲಲಾಟದಲ್ಲಿರುತ್ತಾನೆ, ಲಗ್ನಕ್ಕೆ ೧೨-೧೧ಈ ಸ್ಥಾನಗಳಲ್ಲಿರುವ ಶುಕ್ರನು

ಆಗ್ನೇಯದಿಕ್ಕಿಗೆ ಪ್ರಯಾಣಮಾಡುವನಿಗೆ ಲಲಾಟಸ್ಥನು, ಲಗ್ನಕ್ಕೆ ೧೦ನೇ ಸ್ಥಾನದಲ್ಲಿರುವ ಕುಜನು ದಕ್ಷಿಣಕ್ಕೆ ಪ್ರಯಾಣ ಮಾಡುವನಿಗೆ ಲಲಾಟಸ್ಥನು, ಲಗ್ನಕ್ಕೆ ೯-೮ ಈ ಸ್ಥಾನದಲ್ಲಿರುವ ರಾಹುವು ನೈಋತ್ಯದಲ್ಲಿ ಲಲಾಟಗನು, ಲಗ್ನಕ್ಕೆ ೭ ನೇ ಸ್ಥಾನದಲ್ಲಿರುವ ಶನಿಯು ಪಶ್ಚಿಮದಲ್ಲಿ ಲಲಾಟಗನು, ಲಗ್ನಕ್ಕೆ ೫-೬ ಈ ಸ್ಥಾನದಲ್ಲಿರುವ ಚಂದ್ರನು ವಾಯವ್ಯದಲ್ಲಿ ಲಲಾಟಗನು ಲಗ್ನಕ್ಕೆ ೪ ರಲ್ಲಿರುವ ಬುಧನು ಉತ್ತರದಿಕ್ಕಿನಲ್ಲಿ ಲಲಾಟಗನು, ಲಗ್ನಕ್ಕೆ ೨-೩ ನೇ ಸ್ಥಾನಗಳಲ್ಲಿರುವ ಗುರುವು ಈಶಾನ್ಯದಿಕ್ಕಿನಲ್ಲಿ ಲಲಾಟಗನು ಅಂದರೆ ಪ್ರಯಾಣ ಮಾಡುವಾಗ ಪ್ರಯಾಣಲಗ್ನಕ್ಕೆ ಆಯಾ ಸ್ಥಾನಗಳಲ್ಲಿ ಆಯಾ ಗ್ರಹಗಳಿರುವಾಗ ಆಯಾ ದಿಕ್ಕುಗಳಿಗೆ ಹೋಗುವವನಿಗೆ ಪ್ರಯಾಣ ಶುಭಕರವಾಗಲಾರದೆಂದು ತಿಳಿಯಬೇಕು.

## ಶುಕ್ರಮೌಢ್ಯಾದಿ ದೋಷ

**ಮೂಢೇಶುಕ್ರೇಕಾರ್ಯಹಾನಿಃ ಪ್ರತಿಶುಕ್ರೇಪರಾಜಯಃ ।**
**ಪ್ರತೀಂದುಜಕೃತೋದೋಷಾ ಹಂತಿಪ್ರತ್ಯಾರವಿವಚ ॥**

ಶುಕ್ರ ಮೌಢ್ಯನಾದರೆ ಕಾರ್ಯಹಾನಿಯು, ಎದುರು ಶುಕ್ರನಾದರೆ ಪರಾಜಯವು, ಪ್ರತಿ ಕುಜ, ಪ್ರತಿಬಂಧ, ದೋಷವು ಸಹಾ ಪ್ರಯಾಣಕರ್ತನಿಗೆ ನಾಶಕರವು.

## ಪ್ರತಿಶುಕ್ರ ದೋಷಭಂಗ

**ಏಕಗ್ರಾಮೇಚತುಶ್ಶಾಲೆ ವಿವಾಹೆಯಜ್ಞಕರ್ಮಣಿ ।**
**ದುರ್ಭಿಕ್ಷರಾಜಕಲಹೆ ಪ್ರತಿಶುಕ್ರಂನವಿದ್ಯತೆ ॥**

ಒಂದೇ ಊರಲ್ಲಿ ಒಂದು ಮನೆಯಿಂದ ಮತ್ತೊಂದು ಗೃಹಕ್ಕೆ ಪ್ರವೇಶ ಮಾಡುವಾಗಲೂ, ವಿವಾಹದಲ್ಲೂ, ಚತುಶ್ಶಾಲೆಯಲ್ಲೂ, ಯಜ್ಞದಲ್ಲಿಯೂ, ದುರ್ಭಿಕ್ಷದಲ್ಲೂ ರಾಜಕಲಹದಲ್ಲಿಯೂ ಪ್ರತಿಶುಕ್ರದೋಷವಿಲ್ಲ.

**ತ್ರಿಕೋಣಕೇಂದ್ರಗಾಸ್ಸೌಮ್ಯಾಃ ಕ್ರೂರಾಸ್ತ್ರ್ಯಾಯಾರಿಗಾಯದಿ।**
**ಯಾತ್ರಾಸಿದ್ಧಿರ್ಭವೇದ್ದೃಷ್ಟೈಶವೇರೋದನವರ್ಜಿತೆ ॥**

ಪ್ರಯಾಣಲಗ್ನಕ್ಕೆ ಶುಭಗ್ರಹಗಳು ಕೇಂದ್ರತ್ರಿಕೋಣದಲ್ಲಿಯೂ ಪಾಪ ಗ್ರಹಗಳು ೩-೬-೧೧ನೇ ಸ್ಥಾನಗಳಲ್ಲೂ ಇರುವಾಗ ಪ್ರಯಾಣವು ಸಫಲವಾಗು

ತ್ತದೆ, ಮತ್ತು ಅಳುವ ಶಬ್ದವನ್ನು ಕೇಳದೆ ಹೆಣವನ್ನು ಮಾತ್ರ ನೋಡಿದರೆ ಪ್ರಯಾಣ ಸಿದ್ಧಿಯುಂಟಾಗುತ್ತೆ.

## ತಾರಾಬಲವು

**ಜನ್ಮನಕ್ಷತ್ರಮಾರಭ್ಯ ನಿತ್ಯಭಾಂತಂಚಗಣ್ಯತೆ ।**
**ನವಸಂಖ್ಯಾಹರೆದ್ಭಾಗಂ ನವತಾರಾಃ ಪ್ರಕೀರ್ತಿತಾಃ ॥**

ಜನ್ಮನಕ್ಷತ್ರ ಮೊದಲು ನಿತ್ಯನಕ್ಷತ್ರದವರಿಗೂ ಎಣಿಸಿ ೯ ರಿಂದ ಭಾಗಿಸು ವಲ್ಲಿ ಮಿಕ್ಕ ನಕ್ಷತ್ರಗಳಿಗೆ ೯ ರ ವರಿಗೂ ಫಲಗಳು ಹೇಗೆಂದರೆ .—

**ಜನ್ಮಸಂಪದ್ವಿಪತ್ಕ್ಷೇಮ ಪ್ರತ್ಯಕ್ಸಾಧನನೈಧನಂ ।**
**ಮಿತ್ರಂಪರಮಮೈತ್ರಂಚ ನವತಾರಾಃಪ್ರಕೀರ್ತಿತಾಃ ॥**

೧ನೇದು ಜನ್ಮತಾರೆ, ೨ನೇದು ಸಂಪತ್ತಾರೆ, ೩ನೇದು ವಿಪತ್ತಾರೆ, ೪ನೇದು ಕ್ಷೇಮತಾರೆ, ೫ನೇದು ಪ್ರತ್ಯಕ್ತಾರೆ ೬ನೇದು ಸಾಧನತಾರೆ, ೭ನೇದು ನೈಧನತಾರೆ, ೮ನೇದು ಮಿತ್ರತಾರೆ, ೯ನೇದು ಪರಮಮೈತ್ರತಾರೆ ಈ ಮೇರೆ ೯ ನಕ್ಷತ್ರಗಳಿಗೂ ಫಲಗಳನ್ನು ತಿಳಿಯಬೇಕು.

**ಜನ್ಮಭಂದೇಹನಾಶಾಯ ಸಂಪತ್ಸಂಪದಯೇವಚ ।**
**ವಿಪಚ್ಚಕಾರ್ಯನಾಶಾಯ ಕ್ಷೇಮಂಕ್ಷೇಮಕೃತೆಭವೇತ್ ।**
**ಪ್ರತ್ಯಕ್ಷಕಾರ್ಯನಾಶಾಯ ಸಾಧನಂಕಾರ್ಯಸಾಧನೆ ।**
**ನೈಧನಂನಿಧನೆಪಿಸ್ಯಾದ್ಮಿತ್ರಂಚ ಸುಖಸಂಪದಿ ।**
**ಪರಮೈತ್ರಂಸುಖಿನಿಂದ್ಯಾತ್ತಾರಾಬಲಮಿತಿಕ್ರಮಾತ್ ॥**

ಜನ್ಮನಕ್ಷತ್ರವು ದೇಹನಾಶವನ್ನು ಮಾಡುತ್ತದೆ, ಸಂಪತ್ತಾರೆಯು ಸಂಪ ತ್ತನ್ನು ಮಾಡಿಸುತ್ತದೆ, ವಿಪತ್ತಾರೆಯು ಕಾರ್ಯ ನಾಶವನ್ನು ಮಾಡುತ್ತದೆ, ಕ್ಷೇಮತಾರೆಯು ಕ್ಷೇಮವನ್ನು ಮಾಡುತ್ತದೆ, ಪ್ರತ್ಯಕ್ತಾರೆಯು ಕಾರ್ಯ ನಾಶ ಕರವು, ಸಾಧನತಾರೆಯು ಕಾರ್ಯಸಾಧಕವಾಗುತ್ತದೆ, ನೈಧನತಾರೆಯು ನಿಧನ ಕರವಾಗುತ್ತದೆ, ಮಿತ್ರತಾರೆಯು ಸುಖಸಂಪತ್ಪ್ರದವು, ಪರಮಮೈತ್ರದಲ್ಲಿ ಸುಖ ಪ್ರದವು, ಈ ಮೇರೆ ಕ್ರಮವಾಗಿ ಫಲಗಳನ್ನು ತಿಳಿಯಬೇಕು.

## ತಾರಾಧಿಪತ್ಯವು

**ಜನ್ಮಸ್ಯರ್ಕೊಹಿಮಕರಸುತಸ್ಸ್ಯೆಂಹಿಕೇಯಸ್ಸುರೇಜ್ಯಃ ।**
**ಕೇತುಶ್ಚಂದ್ರೋದಿನಕರಸುತೊಭಾರ್ಗವೊಭೂಮಿಪುತ್ರಃ ।**

**ತಾಪಂಲಾಭಂಕ್ಷತಿಧೃತಿಲಯಾನ್ಕೀರ್ತಿಹಾನಿಪ್ರಮೋದಾ।**
**ನ್ಮೃತ್ಯುಂತಾರಾಬಲಮನುದಿನಂತೆದಿಶಂತಿಕ್ರಮೇಣ॥**

ಜನ್ಮ ಮೊದಲಾದ ೯ ತಾರೆಗಳಿಗೂ ಅಧಿಪತಿಗಳು ಕ್ರಮವಾಗಿ ಜನ್ಮತಾರೆಗೆ ಸೂರ್ಯನು ಅಧಿಪತಿಯು, ಅವನು ಸಂತಾಪವನ್ನು ಕೊಡುತ್ತಾನೆ, ಸಂಪತ್ತಾರೆಗೆ ಬುಧನಧಿಪತಿಯು, ಅವನು ಲಾಭವನ್ನೀಯುತ್ತಾನೆ, ವಿಪತ್ತಾರೆಗೆ ರಾಹುವು, ಅವನು ನಾಶವನ್ನು ಕೊಡುತ್ತಾನೆ, ಕ್ಷೇಮತಾರೆಗೆ ಬೃಹಸ್ಪತಿಯಧಿಪನು, ಅವನು ಧೈರ್ಯವನ್ನು ಮಾಡಿಸುತ್ತಾನೆ, ಪ್ರತ್ಯಕ್ತಾರೆಗೆ ಕೇತುವಧಿಪನು, ಅವನು ಮರಣವನ್ನು ಕೊಡುತ್ತಾನೆ; ಸಾಧನತಾರೆಗೆ ಚಂದ್ರನಧಿಪನು, ಅವನು ಕೀರ್ತಿಯನ್ನು ಕೊಡುತ್ತಾನೆ, ನೈಧನತಾರೆಗೆ ಶನಿಯಧಿಪನು, ಅವನು ಪ್ರಾಣಹಾನಿಯನ್ನು ಕೊಡುತ್ತಾನೆ; ಮೈತ್ರತಾರೆಗೆ ಶುಕ್ರನಧಿಪತಿಯು, ಅವನು ಸಂತೋಷವನ್ನು ಕೊಡುತ್ತಾನೆ, ಪರಮಮೈತ್ರತಾರೆಗೆ ಕುಜನಧಿಪನು, ಅವನು ಮರಣವನ್ನು ಕೊಡುತ್ತಾನೆ, ಈ ಪ್ರೀರಿ ತಾರಾಧಿಪತಿಗಳಿಂದ ಫಲವನ್ನು ತಿಳಿಯತಕ್ಕದ್ದು. ಈ ಶ್ಲೋಕದಿಂದ ೯ ನೇ ತಾರೆಯು ಪರಮ ಮೈತ್ರವಾದ್ದರಿಂದ ಅದು ಅತ್ಯಂತ ಮೈತ್ರವಾದುದ್ದು. ವಿಶೇಷ ಶುಭಪ್ರದವೆಂದು ಕೆಲವರು ನುಡಿಯುತ್ತಾರೆ, ಅದಕ್ಕಧಿಪತಿಯಾದ ಅಂಗಾರಕನು ಮರಣಫಲಪ್ರದವೆಂದು ತಿಳಿಯಬರುವದರಿಂದ ಅದು ನೈತ್ರತಾರೆಗೆ ವಿರೋಧವಾಗಿ ಪರಮಮೈತ್ರವಾಗಿ ನಾಶಕರವಾದುದೆಂದು ತಿಳಿಯಬೇಕು.

## ತಾರಾವಾಹನಗಳು

**ಮಯೂರಹಯಮೇಷಾಶ್ಚ ಗಜವಾಯಸಜಂಬುಕಾಃ।**
**ಮೃಗೇಂದ್ರೋವೈನತೇಯಶ್ಚ ಹಂಸಾಸ್ಸ್ಯುರ್ಜನ್ಮಭಾದಿಷು॥**

ನವಿಲು, ಕುದುರೆ, ಕುರಿ, ಆನೆ, ಕಾಗೆ, ನರಿ, ಸಿಂಹ, ಗರುಡ, ಹಂಸ, ಇವುಗಳು ಜನ್ಮಾದಿ ೯ ತಾರೆಗಳಿಗೆ ವಾಹನಗಳೆಂದರಿವುದು.

## ವಾಹನ ಫಲಗಳು

**ಮಯೂರಶ್ಚಮನಸ್ತಾಪಂ ಹಯೋಲಾಭಾರ್ಥಸಂಪದಾ।**
**ಮೇಷಸ್ತು ಕಲಹಂಚೈವ ರಾಜ್ಯಪ್ರಾಪ್ತಿಂಗಜಸ್ತಥಾ।**
**ವಾಯಸಃಕಾರ್ಯನಾಶಂಚ ಜಂಬುಕಸ್ಸುಖಮೇವಚ॥**

**ಸಿಂಹೋರಣಭಯಂಚೈವ ವೈನತೇಯಸ್ಸುಖಂಬಹು ।**
**ಹಂಸಶ್ಚಕಾರ್ಯವಿಭ್ರಂಶಂ ವಾಹನಾದಿಫಲಂಲಭೇತ್ ॥**

ನವಿಲು ಮನಸ್ತಾಪವನ್ನೂ, ಕುದುರೆ ಲಾಭಾರ್ಥಸಂಪತ್ತುಗಳನ್ನೂ, ಕುರಿಯು ಕಲಹವನ್ನೂ, ಗಜವು ರಾಜ್ಯಪ್ರಾಪ್ತಿಯನ್ನೂ, ಕಾಗೆಯು ಕಾರ್ಯ ನಾಶವನ್ನೂ, ನರಿಯು ಸುಖವನ್ನೂ, ಸಿಂಹವು ಯುದ್ಧಭಯವನ್ನೂ, ಗರುತ್ಮಂತ ಬಹು ಸುಖವನ್ನೂ, ಹಂಸವು ಕಾರ್ಯಹಾನಿಯನ್ನೂ ಈ ಮೇರೆ ಫಲಗಳನ್ನು ಕೊಡುತ್ತವೆ, ಇವು ವಾಹನ ಫಲಗಳೆಂದು ತಿಳಿಯುವದು.

## ಗ್ರಂಥಾಂತರದಲ್ಲಿ

**ಜನ್ಮರ್ಕ್ಷೆಸಪ್ತನಾಡ್ಯಸ್ಸ್ಯುಸ್ತಿಸ್ರಸ್ತುವಿಪದಿಸ್ಮೃತಾಃ ।**
**ಪ್ರತ್ಯಗೇನೈಧನೆಚಾಷ್ಟೌ ನಿಂದ್ಯಾಶ್ಯೇಷಾಶ್ಶುಭಾವಹಾಃ ॥**

ಜನ್ಮತಾರೆಗಳಲ್ಲಿ ೭ ಘಳಿಗೆಗಳು ತ್ಯಾಜ್ಯಗಳು, ವಿಪತ್ತಾರೆಯಲ್ಲಿ ೩ ಘಳಿಗೆಗಳು ತ್ಯಾಜ್ಯಗಳು, ಪ್ರತ್ಯಕ್ತಾರೆಯಲ್ಲಿಯೂ, ನೈಧನತಾರೆಯಲ್ಲೂ ೮ ಘಳಿಗೆಗಳು ಬಿಡತಕ್ಕವು, ಮಿಕ್ಕ ಘಳಿಗೆಗಳು ಶುಭಗಳೆಂದು ತಿಳಿಯುವದು.

**ಜನ್ಮತ್ರಿಪಂಚಸಪ್ತಾಖ್ಯಾಸ್ತಾರಾಇಷ್ಟಫಲಪ್ರದಾಃ ।**
**ತದ್ದೋಷಪರಿಹಾರಾಯ ದದ್ಯಾದೇತದ್ವಿಜಾಯತೆ ।**
**ಶಾಕಂಗುಡಂಚಲವಣಂ ಸತಿಲಂಕಾಂಚನಂಕ್ರಮಾತ್ ।**
**ವಿಪದಿಪ್ರತ್ಯಗೆಚೈವ ಚರಮಂಚಾದ್ಯಕಂವಿನಾ ।**
**ಸ್ವೋಚ್ಚಸ್ವರ್ಕ್ಷಗತಶ್ಚಂದ್ರಶ್ಶುಭದಸ್ಸರ್ವಕರ್ಮಸು ॥**

ಜನ್ಮ, ವಿಪತ್, ಪ್ರತ್ಯಕ್, ನೈಧನತಾರೆಗಳು ಅನಿಷ್ಟ ಫಲಗಳಾಗಿವೆ. ಆದುದರಿಂದ ತದ್ದೋಷಪರಿಹಾರಕ್ಕಾಗಿ ಕ್ರಮವಾಗಿ ಶಾಕ, ಬೆಲ್ಲ, ಉಪ್ಪು, ಬಂಗಾರ ಸಹಿತ ಎಳ್ಳು ಇವುಗಳನ್ನು ಬ್ರಾಹ್ಮಣರಿಗೆ ದಾನಮಾಡಬೇಕು, ಮತ್ತು ಜನ್ಮತಾರೆಯನ್ನು ಪರಮಮೈತ್ರತಾರೆಯನ್ನು ಬಿಟ್ಟು ಕಡಮೆ ವಿಪತ್ತಾರೆಯಲ್ಲೂ ಪ್ರತ್ಯಕ್ತಾರೆಯಲ್ಲಿಯೂ ಚಂದ್ರನು ಸ್ವೋಚ್ಚ ಸ್ವಕ್ಷೇತ್ರಗತನಾಗಿ ಇದ್ದರೆ ಸರ್ವಕರ್ಮಗಳಲ್ಲೂ ಶುಭಕರನು.

## ಚಂದ್ರಬಲ

**ಜನ್ಮಾನಲಋತೌಸಪ್ತ ದಶಮೇಕಾದಶೇಶುಭಃ ।**
**ಚತುಷ್ಟದ್ವಾದಶೇಕೃಷ್ಣೇ ಶುಕ್ಲೇ ದ್ವಿನವಪಂಚಮೇ ।**
**ಯಥಾಮಾತಾಸುತಾಂರಕ್ಷೇತ್ತಥಾರಕ್ಷತಿಚಂದ್ರಮಾಃ ॥**

ಚಂದ್ರನು ಜನ್ಮ ೩-೬-೭-೧೧ ಈ ಸ್ಥಾನಗಳಲ್ಲಿದ್ದರೆ ಶುಭಪ್ರದನು. ಅವನು ಕೃಷ್ಣಪಕ್ಷದಲ್ಲಿ ೪-೮-೧೨ ಸ್ಥಾನಗಳಲ್ಲಿ ಇದ್ದರೂ ಶುಕ್ಲಪಕ್ಷದಲ್ಲಿ ೨-೯-೫ ಈ ಸ್ಥಾನಗಳಲ್ಲಿ ಇದ್ದರೂ ತಾಯಿ ಮಕ್ಕಳನ್ನು ರಕ್ಷಿಸುವಂತೆ ರಕ್ಷಿಸುವನು.

**ಯಾತ್ರಾವಿವಾಹಸೀಮಂತಮೌಂಜೀಬಂಧನಭುಕ್ತಿಷು ।**
**ವಿದ್ಯಾರಂಭೇಚತಾರಾಯಾಃ ಪ್ರಧಾನಂಬಲಮಿಂದುವತ್ ॥**

ಯಾತ್ರಾ, ವಿವಾಹ, ಸೀಮಂತ, ಉಪನಯನ, ಅನ್ನಪ್ರಾಶನ, ವಿದ್ಯಾರಂಭ, ಇವುಗಳಲ್ಲಿ ಚಂದ್ರಬಲದಂತೆ ತಾರಾಬಲವು ಪ್ರಧಾನವಾಗಿರ್ಪುದು.

## ವಾಸ್ತು ಪ್ರಕರಣ

**ವಕ್ಷ್ಯೇತೆ ತದನುವಾಸ್ತುಲಕ್ಷಣಂ ಪೂರ್ವಶಾಸ್ತ್ರ ಮನುಸೃತ್ಯ ಯತ್ನತಃ । ಮೂಢದೋಷರಹಿತೇಥಮಾಸಿತತ್ಪ್ರಾರಭೇತುಸುದಿನೇಶುಭೋದಯೇ ॥**

ಪೂರ್ವಶಾಸ್ತ್ರಗಳನ್ನು ಅನುಸರಿಸಿ ವಾಸ್ತುಲಕ್ಷಣವು ಹೇಳಲ್ಪಡುತ್ತದೆ, ಗುರು ಶುಕ್ರರ ಮೂಢ ದೋಷವಿಲ್ಲದ ತಿಂಗಳಲ್ಲಿ ಶುಭದಿನದಲ್ಲಿ ಶುಭಲಗ್ನದಲ್ಲಿಯೂ ಅದು ಆರಂಭಿಸತಕ್ಕದ್ದು.

**ಗೃಹಸಂಸ್ಥಾಪನಂಚೈತ್ರೆ ಧನಲಾಭಶುಭಪ್ರದಂ ।**
**ವೈಶಾಖೇತುಶುಭಂವಿಂದ್ಯಾಜ್ಜ್ಯೇಷ್ಠೇತುಮರಣಂಧ್ರುವಂ ।**
**ಆಷಾಢೇಗೋಕುಲಂಹಂತಿ ಶ್ರಾವಣೇಭೃತ್ಯವರ್ಧನಂ ।**
**ಭಾದ್ರಪದೇರೋಗಪೀಡಾಪಿಚಾಶ್ವಿಜೆ ಕಲಂಹಂತಥಾ ।**
**ಕಾರ್ತಿಕ್ಯಾಂಧನಲಾಭೆಸ್ಯಾನ್ಮಾರ್ಗಶೀರ್ಷೆಧನಕ್ಷಯಃ ।**
**ಪುಷ್ಯೆಚಾಗ್ನಿಭಯಂನಿತ್ಯಂ ಮಾಘೇತುಬಹುಪುತ್ರದಂ ।**
**ಫಾಲ್ಗುನೆತನುನಾಶಸ್ಯಾನ್ಮಾಸಾಂಚಫಲಾಫಲಂ ॥**

ಚೈತ್ರಮಾಸದಲ್ಲಿ ಗೃಹಾರಂಭವು ಧನಲಾಭಕರವು, ವೈಶಾಖದಲ್ಲಿ ಶುಭ ಕರವು, ಜ್ಯೇಷ್ಠದಲ್ಲಿ ಮರಣಪ್ರದವು, ಆಷಾಢದಲ್ಲಿ ಪಶುನಾಶ, ಶ್ರಾವಣದಲ್ಲಿ ಭೃತ್ಯವೃದ್ಧಿ, ಭಾದ್ರಪದದಲ್ಲಿ ರೋಗಪೀಡಾ, ಆಶ್ವಯುಜದಲ್ಲಿ ಕಲಹ, ಕಾರ್ತೀಕದಲ್ಲಿ ಧನಲಾಭ, ಮಾರ್ಗಶಿರದಲ್ಲಿ ಧನಕ್ಷಯ, ಪುಷ್ಯದಲ್ಲಿ ಅಗ್ನಿಭಯ, ಮಾಘದಲ್ಲಿ ಬಹುಪುತ್ರಪ್ರದ, ಫಾಲ್ಗುನದಲ್ಲಿ ಶರೀರ ನಾಶವು, ಈ ಮೇರೆ ಮಾಸಗಳ ಫಲಾಫಲಗಳನ್ನು ತಿಳಿಯತಕ್ಕದ್ದು.

**ಗೋಕರ್ಕಿಹರಿಕುಂಭಾಜತೌಳಿಕೀಟವೃಗಸ್ಥಿತೆ ।**
**ದಿವಾಕರೆಗ್ರಹಾರಂಭಃ ಪುತ್ರಪೌತ್ರಾಭಿವೃದ್ಧಿದಃ ॥**

ಸೂರ್ಯನು ವೃಷಭ, ಕಟಕ, ಸಿಂಹ, ಕುಂಭ, ಮೇಷ, ತುಲಾ, ವೃಶ್ಚಿಕ, ಮಕರರಾಶಿಗಳಲ್ಲಿ ಇರುವಾಗ ಹೊಸದಾಗಿ ಗೃಹಾರಂಭ ಮಾಡಿದರೆ ಪುತ್ರಪೌತ್ರಾಭಿವೃದ್ಧಿಯನ್ನುಂಟುಮಾಡುತ್ತದೆ.

**ಸ್ಥಿರರಾಶಿಗತೆಸೂರ್ಯೆ ಗೃಹಕರ್ಮಸುಶೋಭನಂ ।**
**ಚರೇತುಮಧ್ಯಮಂವಿಂದ್ಯಾದ್ವಿಸ್ವಭಾವೇತುನಿಂದಿತಂ ॥**

ಸೂರ್ಯನು ಸ್ಥಿರರಾಶಿಯಲ್ಲಿರುವಾಗ ನೂತನ ಗೃಹಾರಂಭವು ಮಂಗಳ ಕರವು, ಚರರಾಶಿಯಲ್ಲಿರುವಾಗ ಮಧ್ಯಮ ದ್ವಿಸ್ವಭಾವ ರಾಶಿಗಳಲ್ಲಿರುವಾಗ ಅಧಮವು.

**ಗುರುಭಾರ್ಗವಯೊರ್ಮೌಢ್ಯೆ ಬಾಲ್ಯವಾರ್ಧಿಕಯೋರಪಿ ।**
**ಚಾತುರ್ಮಾಸ್ಯಾಂಶೂನ್ಯಮಾಸೆ ಗೃಹಕರ್ಮನಕಾರಯೆತ್ ॥**

ಗುರು ಶುಕ್ರರ ಮೌಢ್ಯದಲ್ಲಿಯೂ, ಬಾಲ್ಯ ವಾರ್ಧಿಕಾವಸ್ಥೆಗಳಲ್ಲಿಯೂ ಚಾತುರ್ಮಾಸ್ಯದಲ್ಲಿಯೂ, ಶೂನ್ಯಮಾಸದಲ್ಲಿಯೂ ಗೃಹನಿರ್ಮಾಣ ಕಾರ್ಯ ವನ್ನು ಮಾಡಕೂಡದು.

## ಗೃಹದ್ವಾರ ನಿರ್ಣಯ

**ಸಿಂಹೆರ್ಕೆಪಶ್ಚಿಮದ್ವಾರಂ ವೃಷಭೆಚೋತ್ತರೆತಥಾ ।**
**ಕುಂಭೆಪೂರ್ವದಿಶಿದ್ವಾರಂ ವೃಶ್ಚಿಕೆಚೈವದಕ್ಷಿಣೆ ।**
**ಏವಂಕೃತಂಚೆತ್ತದ್ವೇಶ್ಮ ಶೋಭನಂಸೌಖ್ಯವರ್ಧನಂ ॥**

ಸೂರ್ಯನು ಸಿಂಹದಲ್ಲಿರುವಾಗ ಮನೆಗೆ ಪಶ್ಚಿಮದ ಕಡೆ ಬಾಗಿಲನ್ನೂ, ವೃಷಭರಾಶಿಯಲ್ಲಿರುವಾಗ ಉತ್ತರಭಾಗದಲ್ಲಿಯೂ, ಕುಂಭರಾಶಿಗತನಾಗಿ ಇರುವಾಗ ಪೂರ್ವಭಾಗದಲ್ಲೂ, ವೃಶ್ಚಿಕದಲ್ಲಿ ಇರುವಾಗ ದಕ್ಷಿಣ ಭಾಗದಲ್ಲಿಯೂ ಮನೆಯ ಬಾಗಿಲನ್ನು ಇರಿಸತಕ್ಕದ್ದು. ಈ ಮೇರೆ ಬಾಗಿಲು ಇರಿಸಲ್ಪಟ್ಟರೆ ಆ ಮನೆಯು ಶುಭಸೌಖ್ಯ ವೃದ್ಧಿಕರವಾಗುವದು.

**ಮೃಗೇರ್ಕೆಪಶ್ಚಿಮದ್ವಾರಂ ತುಲಾಯಾಂಚೋತ್ತರಂಕೃತಂ ।**
**ಕರ್ಕಟಸ್ಥೆಪುರೊದ್ವಾರಂ ಮೇಷಸ್ಥೆದಕ್ಷಿಣಂಸ್ಮೃತಂ ।**
**ಏವಂಕೃತೇತುತದ್ವೇಶ್ಮ ಮಧ್ಯಮಂಪರಿಕೀರ್ತಿತಂ ॥**

ಸೂರ್ಯನು ಮಕರದಲ್ಲಿರುವಾಗ ಪಶ್ಚಿಮದ್ವಾರವನ್ನೂ, ತುಲೆಯಲ್ಲಿರುವಾಗ ಉತ್ತರಬಾಗಿಲನ್ನೂ, ಕಟಕದಲ್ಲಿರುವಾಗ ಪೂರ್ವದ್ವಾರವನ್ನೂ, ಮೇಷದಲ್ಲಿರುವಾಗ ದಕ್ಷಿಣದ ಬಾಗಿಲನ್ನೂ ಮಾಡಿದರೆ ಆ ಮನೆಯು ಮಧ್ಯಮ ಫಲಪ್ರದವಾಗಿ ಇರುವುವು.

## ನಕ್ಷತ್ರಗಳು

**ಉತ್ತರಾತ್ರಿತಯಂಚಿತ್ರಾ ರೋಹಿಣೀಸ್ವಾತಿರೇವಚ ।**
**ಜ್ಯೇಷ್ಠಾಮೃಗಶಿರೊಮೂಲಾ ಚಾಶ್ವಿನೀಹಸ್ತತಿಷ್ಯಕಾಃ ।**
**ಮೈತ್ರಂಚೈತೆಪ್ರಶಸ್ತಾಹಿ ಸರ್ವದಾವಾಸ್ತುಕರ್ಮಣಿ ॥**

ಉತ್ತರಫಲ್ಗುನೀ, ಉಷಾ, ಉಭಾ, ಚಿತ್ರಾ, ರೋಹಿಣೀ, ಸ್ವಾತೀ, ಜ್ಯೇಷ್ಠಾ, ಮೃಗಶಿರ, ಮೂಲ, ಅಶ್ವಿನೀ, ಹಸ್ತ, ಪುಷ್ಯ, ಅನುರಾಧಾ ಈ ನಕ್ಷತ್ರಗಳು ವಾಸ್ತುಕರ್ಮದಲ್ಲಿ ಯಾವಾಗ್ಯೂ ಯೋಗ್ಯಗಳಾಗಿರುತ್ತವೆ.

## ವಾಸಿಷ್ಠದಲ್ಲಿ

**ರೋಹಿಣೀಮೃಗಚಿತ್ರಾರ್ಕವಾಸವೋತ್ತರವೈಶ್ವಭಂ ।**
**ಶ್ರವಣಂಚೈವಭಾನ್ಯಷ್ಟ ಶಸ್ತಾನಿಗೃಹಕರ್ಮಣಿ ॥**

ರೋಹಿಣೀ, ಮೃಗಶಿರ, ಚಿತ್ತಾ, ಹಸ್ತಾ, ಜೇಷ್ಠಾ, ಉತ್ತರಾ, ಉತ್ತರಾಷಾಢಾ, ಶ್ರವಣ ಈ ೮ ನಕ್ಷತ್ರಗಳು ಗೃಹಕರ್ಮದಲ್ಲಿ ಪ್ರಶಸ್ತಗಳು.

**ಸ್ವಾತೀಪುಷ್ಯಾನುರಾಧಾಶ್ವಿ ಶತಾಹಿರ್ಬುಧ್ನ್ಯಪೌಷ್ಣಭಂ ।**
**ಸಪ್ತಮಧ್ಯಫಲಾನ್ಯತ್ರ ಶೇಷಾಣಿಪರಿವರ್ಜಯೇತ್ ॥**

ಸ್ವಾತೀ, ಪುಷ್ಯ, ಅನುರಾಧಾ, ಅಶ್ವಿನೀ, ಶತಭಿಷಕ್, ಉಭಾ, ರೇವತೀ, ಈ ನಕ್ಷತ್ರಗಳು ಮಧ್ಯಮ ಫಲಪ್ರದಗಳು, ಮಿಕ್ಕವನ್ನು ಬಿಡ ತಕ್ಕದ್ದು.

## ಯೋಗಗಳು

**ಪರಿಘಸ್ಯಚಪೂರ್ವಾರ್ಧಂ ಕೃತ್ಸ್ನಂವೈಧೃತಿಪಾತಯೋಃ ।**
**ಗಂಡಾತಿಗಂಡಯೋಷ್ಷಟ್ಚ ನಾಡಿಕಾಃ ಪಂಚಶೂಲಕೆ ॥**

ಪರಿಘಯೋಗಕ್ಕೆ ಪೂರ್ವಾರ್ಧವನ್ನೂ, ವೈಧೃತಿ ವ್ಯತೀಪಾತಗಳ ೬೦ ಘಳಿಗೆಗಳನ್ನೂ, ಗಂಡದಲ್ಲೂ ಅತಿಗಂಡದಲ್ಲೂ ೬ ಘಳಿಗೆಗಳನ್ನೂ, ಶೂಲದಲ್ಲಿ ೫ ಘಳಿಗೆಗಳನ್ನೂ ನಹ ಬಿಡತಕ್ಕದ್ದು.

**ವ್ಯಾಘಾತೆನವನಾಡಿಶ್ಚ ವಾಸ್ತುಕರ್ಮಣಿವರ್ಜಯೇತ್ ।**
**ನಿಂದ್ಯಯೋಗೇಷುಸರ್ವೇಷು ವಿಷ್ಟ್ಯಾಂಸರ್ವಂವಿವರ್ಜಯೇತ್ ॥**

ವ್ಯಾಘಾತದಲ್ಲಿ ೯ ಘಳಿಗೆಗಳನ್ನು ಬಿಡತಕ್ಕದ್ದು, ಎಲ್ಲಾ ದುಷ್ಟಯೋಗ ಗಳಲ್ಲಿಯೂ ಭದ್ರಕರಣದಲ್ಲೂ ಎಲ್ಲಾ ಘಳಿಗೆಗಳನ್ನೂ ಬಿಡತಕ್ಕದ್ದು.

## ಲಗ್ನಗಳು

**ದ್ವ್ಯಂಶ್ಚೇ ಸ್ಥಿರೆವಾಭವನೇವಿಲಗ್ನೆ ಸೌಮ್ಯಗ್ರಹೈರ್ಯುಕ್ತ ನಿರೀಕ್ಷಿ ತೇನ । ಕರ್ಮಸ್ಥಿತೈರ್ವೀರ್ಯಯುತೈಶ್ಚ ಸೌಮ್ಯೈರ್ನಿರ್ಮಾಣಮಾಹು ರ್ಭವನಸ್ಯಸಂಪದಃ ॥**

ಶುಭಗ್ರಹಗಳಿಂದ ಕೂಡಲ್ಪಟ್ಟೊ ನೋಡಲ್ಪಟ್ಟೊ ಇರುವಲ್ಲಿ ಲಗ್ನ ದಲ್ಲಿಯೂ, ಅಥವಾ ಷಡ್ಬಲಯುಕ್ತವಾದ ಶುಭಗ್ರಹಗಳು ಕರ್ಮಸ್ಥಾನವೆಂದರೆ ೧೦ ನೇ ರಾಶಿಗಳಲ್ಲಿರುವಾಗಲೂ ಇಂಥಾ ಲಗ್ನದಲ್ಲಿ ಗೃಹನಿರ್ಮಾಣ ಶುಭಕರ ವೆಂಬುದಾಗಿ ಸತ್ಪುರುಷರು ಹೇಳುತ್ತಾರೆ.

**ಪಾಪೈಸ್ತ್ರಿಷಷ್ಠಾಯ ಗತೈಸ್ತ್ರಿಕೋಣಗೈಃ ಕೇಂದ್ರಾಶ್ರಿತೈಸ್ಸಾಧು ಭಿರಾಲಯಸ್ಯ । ವದಂತಿ ನಿರ್ಮಾಣಮಿಹೆಷ್ಟಮಸ್ಥಃ ಕ್ರೂ ರಸ್ತು ಕರ್ತುರ್ಮರಣಂ ಕರೋತಿ ॥**

ಗೃಹನಿರ್ಮಾಣದ ಲಗ್ನಕ್ಕೆ ೩-೬-೧೧ ಸ್ಥಾನಗಳಲ್ಲಿ ಪಾಪಗ್ರಹಗಳಿರು ವಾಗಲೂ, ೧-೪-೫-೭-೯-೧೧ ಈ ಸ್ಥಾನಗಳಲ್ಲಿ ಶುಭಗ್ರಹಗಳಿರುವಾಗಲೂ

ಗೃಹನಿರ್ಮಾಣವು ಶುಭಕರವು, ಲಗ್ನಕ್ಕೆ ೮ ನೇ ಸ್ಥಾನದಲ್ಲಿ ಪಾಪಗ್ರಹವಿದ್ದರೆ ಗೃಹಕರ್ತನಿಗೆ ಮರಣವುಂಟಾಗುತ್ತದೆ.

**ಋಕ್ಷಂಪ್ರಜಾಪತಿಶ್ಚಾದ್ಯಂ ತಲ್ಲಗ್ನೆ ವೇಶ್ಮಕಂಶುಭಂ ।**
**ತನ್ನಕ್ಷತ್ರೆವಿಶೇದ್ಗೇಹಂ ಶುಭಂಶಂಸಂತಿಸೂರಯಃ ॥**

ಬ್ರಹ್ಮನಕ್ಷತ್ರವಾದ ರೋಹಿಣಿಯಲ್ಲಿ ಮನೆಯಮೇಲೆ ಮುಚ್ಚತಕ್ಕದ್ದು, ಅದರ ಲಗ್ನ ಅಂದರೆ ವೃಷಭಲಗ್ನದಲ್ಲೂ ಮುಚ್ಚುವದು ಶುಭಕರವು, ಅಂಥಾ ರೋಹಿಣೀ ನಕ್ಷತ್ರದಲ್ಲಿ ಗೃಹಪ್ರವೇಶ ಶುಭಕರವೆಂದು ಹಿರಿಯರು ನುಡಿಯುತ್ತಾರೆ.

**ಸ್ತಂಭಂಚಂದ್ರೋದಯೆಸ್ಥಾಪ್ಯಂ ವೇಶ್ಮಾರೊಹಂಬುಧೊದಯೆ ।**
**ಶುಕ್ರೋದಯೇತುಸಂಛಾದ್ಯಂ ನಚಾಗ್ನಿಭಯಮಾಪ್ನುಯಾತ್ ॥**

ಚಂದ್ರನ ಲಗ್ನದಲ್ಲಿ ಶಂಕುಸ್ಥಾಪನ ಮಾಡತಕದ್ದು, ಬುಧನ ಲಗ್ನದಲ್ಲಿ ಮನೇಮೇಲೆ ಹತ್ತಿ ಕಟ್ಟತಕ್ಕದ್ದು, ಶುಕ್ರನ ಲಗ್ನದಲ್ಲಿ ಮನೆಯನ್ನು ಮುಚ್ಚತಕ್ಕದ್ದು, ಹೀಗೆ ಮಾಡಿದರೆ ಯಾವಾಗ್ಯೂ ಅಗ್ನಿಭಯ ಉಂಟಾಗುವದಿಲ್ಲ.

**ತ್ರಿಕೋಣಕೇಂದ್ರಗಾಸ್ಸೌಮ್ಯಾಃ ಪಾಪಾಸ್ತ್ರಯಾರಿಗಾಸ್ತಥಾ ।**
**ಗೃಹಪ್ರಾರಂಭಲಗ್ನೋತ್ಥದೋಷಾನ್ಘ್ನಂತಿನಸಂಶಯಃ ॥**

ಗೃಹಪ್ರಾರಂಭ ಲಗ್ನಕ್ಕೆ ೧-೪-೫-೭-೯-೧೦ ಈ ಸ್ಥಾನಗಳಲ್ಲಿ ಶುಭಗ್ರಹಗಳೂ, ೩-೬-೧೧ ಈ ಸ್ಥಾನಗಳಲ್ಲಿ ಪಾಪಗ್ರಹಗಳೂ ಇದ್ದರೆ ಲಗ್ನಗತಗಳಾದ ಸರ್ವದೋಷಗಳನ್ನೂ ನಿಸ್ಸಂದೇಹವಾಗಿ ಹರಿಸುತ್ತಾರೆ.

**ಗುರೌವಾಭಾರ್ಗವೇವಾಪಿ ಚನ್ದ್ರೇಣಸಹಲಗ್ನಗೆ ।**
**ತತ್ರಸಂಸ್ಥಾಪಿತಂವೇಶ್ಮ ವಹ್ನಿನಾಚನಬಾಧ್ಯತೇ ॥**

ಗುರುವಾದರೂ ಶುಕ್ರನಾದರೂ ಚಂದ್ರನೊಂದಿಗೆ ಸೇರಿ ಲಗ್ನದಲ್ಲಿದ್ದರೆ ಆ ಮನೆಯು ಯಾವಾಗ್ಯೂ ಅಗ್ನಿಯಿಂದ ಬಾಧಿಸಲ್ಪಡುವದಿಲ್ಲ.

**ಭೃಗೌಲಗ್ನಗತೆಜೀವೆ ಮಧ್ಯಾಹ್ನಾಸ್ತಮಯೆಸತಿ ।**
**ಗೃಹಸಂಸ್ಥಾಪನಂಯೋಗ್ಯಮಾಯುಷ್ಯಂಚಶತಾಬ್ದಕಂ ॥**

ಶುಕ್ರನಾದರೂ, ಗುರುವಾದರೂ, ಲಗ್ನಗತನಾಗಿ ಮಧ್ಯಾಹ್ನದಲ್ಲಿ ಅಭಿಜಿನ್ನಕ್ಷತ್ರದಲ್ಲಾದರೂ ಗೋಧೂಳಿ ಲಗ್ನದಲ್ಲಾದರೂ ಗೃಹಾರಂಭವು ಯೋಗ್ಯ

ವಾದದ್ದು, ಮತ್ತು ಹಾಗೆ ಕಟ್ಟಲ್ಪಟ್ಟದ್ದ ಮನೆಗೆ ನೂರು ಸಂವತ್ಸರ ದೀರ್ಘಾಯುಷ್ಯವೆಂದು ಹೇಳಬೇಕಾಗಿರುತ್ತದೆ.

## ಗೃಹಪ್ರವೇಶ ವಿಷಯವು

**ಅಥಪ್ರವೇಶೊ ನವಮಂದಿರಸ್ಯ ಸೌಮ್ಯಾಯನೆ ಜೀವಸಿತೌ ಬಲಾಢ್ಯೌ । ಸಿತೇಚಪಕ್ಷೆಶುಭವಾಸರೇಚ ವಾಸ್ತ್ವರ್ಚನಂಭೂತ ಬಲಿಂಚಕುರ್ಯಾತ್ ॥**

ಉತ್ತರಾಯಣದಲ್ಲಿ ಗುರು ಶುಕ್ರರು ಬಲಿಷ್ಠರಾಗಿ ಇರುವಾಗಲೂ ಶುಕ್ಲ ಪಕ್ಷದಲ್ಲೂ ಶುಭವಾರದಲ್ಲೂ ವಾಸ್ತುಪೂಜಾ ಭೂತಬಲಿ ಮುಂತಾದ ಶಾಂತಿಗಳನ್ನು ಮಾಡಿ ನೂತನ ಗೃಹಪ್ರವೇಶವನ್ನು ಮಾಡತಕ್ಕದ್ದು.

**ಮಾಘಫಾಲ್ಗುನವೈಶಾಖ ಜ್ಯೇಷ್ಠಮಾಸಾಶ್ಶುಭಪ್ರದಾಃ ।**
**ಸಹಪೂರ್ಜಾಚವಿಜ್ಞೇಯೌ ಮಧ್ಯಮೌತುಪ್ರವೇಶನೆ ॥**

ಮಾಘ ಫಾಲ್ಗುನ ವೈಶಾಖ ಜ್ಯೇಷ್ಠ ಮಾಸಗಳು ನೂತನ ಗೃಹಪ್ರವೇಶದಲ್ಲಿ ಶುಭಪ್ರದಗಳು ಕಾರ್ತೀಕ ಮಾರ್ಗಶಿರ ಮಾಸಗಳು ಮಧ್ಯಮಗಳು.

**ವ್ಯರ್ಕ್ಯಾರ್ಕವಾರೆತಿಥಿಷು ರಿಕ್ತಾಮಾವರ್ಜಿತಾಸುಚ ।**
**ದಿವಾವಾಅಥವಾರಾತ್ರೌ ಪ್ರವೇಶೊಮಂಗಳಪ್ರದಃ ॥**

ಭಾನು ಮಂಗಳವಾರಗಳನ್ನು ಬಿಟ್ಟು ಕಡಿಮೆ ವಾರಗಳಲ್ಲಿಯೂ ರಿಕ್ತ ತಿಥಿಗಳು, ಅಮಾವಾಸ್ಯ ಇವುಗಳನ್ನು ಬಿಟ್ಟು ಕಡಿಮೆ ತಿಥಿಗಳಲ್ಲಿಯೂ, ಹಗಲಲ್ಲಾದರೂ ರಾತ್ರಿಯಲ್ಲಾದರೂ ನೂತನ ಗೃಹಪ್ರವೇಶವು ಮಂಗಳಪ್ರದವು.

**ಚಂದ್ರ ಜೀವ ಬುಧ ಶುಕ್ರವಾಸರೆ ಶ್ರೀಕರಸ್ಸುತಮುಹಾರ್ಥ ಲಾಭದಃ । ಸೂರ್ಯಸೂನುದಿವಸೆಸ್ಥಿರಪ್ರದಃ ಕಿಂತುಚೋರಭಯ ಮತ್ರವಿದ್ಯತೆ ॥**

ಚಂದ್ರ ಗುರು ಬುಧ ಶುಕ್ರವಾರಗಳಲ್ಲಿ ನೂತನ ಗೃಹಪ್ರವೇಶವು ಸಂಪತ್ಕರವು, ಮತ್ತು ಪುತ್ರ ಧನಲಾಭಕರವು, ಶನಿವಾರದಲ್ಲಿ ಸ್ಥಿರತ್ವವನ್ನುಂಟು ಮಾಡುತ್ತದೆ, ಆದರೆ ಶನಿವಾರದಲ್ಲಿ ಗೃಹಪ್ರವೇಶವು ಚೋರಭಯವನ್ನುಂಟು ಮಾಡುತ್ತದೆ.

**ರಿಕ್ತಾವಮಾವಗ್ಧತಿಥಿರ್ದಿನೇಶಭೂಸೂನು ಷಡ್ವರ್ಗ ಮಿನೇಂದು ದೃಷ್ಟಿಂ । ಕ್ರೂರಗ್ರಹಾಧಿಷ್ಠಿತವಿದ್ಧಭಂಚ ವಿಂವರ್ಜನೀಯಂತ್ರಿವಿಧಂಪ್ರವೇಶನೇ ॥**

ನೂತನ ಗೃಹಪ್ರವೇಶದಲ್ಲಿ ರಿಕ್ತಾ, ಅವಮಾ, ಮಂದತಿಥಿಃ, ಚತುರ್ಥೀ, ನವಮಿ, ಚತುರ್ದಶಿ, ದಗ್ಧತಿಥಿಗಳನ್ನೂ, ಸೂರ್ಯ ಕುಜ ಷಡ್ವರ್ಗಗಳನ್ನೂ, ಸೂರ್ಯ ಚಂದ್ರ ದೃಷ್ಟಿಯುಳ್ಳದ್ದಾಗಿಯೂ ಕ್ರೂರಗ್ರಹಗಳಿರುವಂತಾದ್ದಾಗಿಯೂ ಅಂಶದೃಷ್ಟಿ ಬಿದ್ದಂತಾದ್ದಾಗಿಯೂ ಇರುವ ನಕ್ಷತ್ರವನ್ನೂ ಹೀಗೆ ತಿಥಿಷಡ್ವರ್ಗ ನಕ್ಷತ್ರಗಳನ್ನು ನೂತನ ಗೃಹಪ್ರವೇಶದಲ್ಲಿ ಬಿಡತಕ್ಕದ್ದು.

**ರೋಹಿಣ್ಯಾಂತ್ರಿಷುಚೋತ್ತರಾಸುಶುಭದೋಗೇಹಪ್ರವೇಶೋನವಃ**
**ಪೌಷ್ಣೇವಾಸವಮಿತ್ರಯೋಶ್ಚವಿಹಿತಸ್ಸ್ವಸ್ಮಿನ್ಪುರಾಣೆಗ್ರಹೆ ।**
**ಆದ್ಯೇಹಸ್ತಹರೀಜ್ಯಭೆನವಗೃಹೇಶಸ್ತಃಪುರಾಣೆತಥಾ ।**
**ಕುಂಭೆಕರ್ಕಿಣಿಭಾಸ್ಕರೇಚಯುವತೌ ನಿಂದ್ಯಃಪ್ರವೇಶೋಗೃಹೆ ॥**

ರೋಹಿಣಿಯಲ್ಲೂ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರೆಗಳಲ್ಲೂ, ನೂತನ ಗೃಹಪ್ರವೇಶವು ಶುಭಪ್ರದವು, ರೇವತಿ ಜ್ಯೇಷ್ಠ, ಅನೂರಾಧೆ, ಈ ನಕ್ಷತ್ರಗಳಲ್ಲಿ ತನ್ನ ಹಳೆಮನೆಯಲ್ಲಿ ಪ್ರವೇಶವು ಶುಭಕರವು ಅಶ್ವಿನೀ, ಹಸ್ತ, ಶ್ರವಣ, ಪುಷ್ಯ ಇವುಗಳಲ್ಲಿ ನೂತನ ಗೃಹಪ್ರವೇಶವು ಒಳ್ಳೆಯದಲ್ಲ. ಹಾಗೆಯೇ ಹಳೇಮನೆಯಲ್ಲಿಯೂ ಪ್ರವೇಶವು ಶುಭಕರವಲ್ಲ, ಮತ್ತು ಸೂರ್ಯನು ಕುಂಭ, ಕಟಕ, ಕನ್ಯಾರಾಶಿಗಳಲ್ಲಿ ಇರುವಾಗ ಗೃಹಪ್ರವೇಶ ಕಾರ್ಯವನ್ನು ಮಾಡಲೇಕೂಡದು.

**ಅರ್ಕಾನಿಲಾರ್ಕ್ಯಾದಿತಿದಸ್ರವಿಷ್ಣು ಕುಕ್ಷಿಪ್ರವಿಷ್ಟಂನವಮಂದಿರಂಯುತ್ । ಅಬ್ದತ್ರಯಾತ್ತತ್ಪರಹಸ್ತಯಾತಂ ಶೇಷೇಷುಧಿಷ್ಣ್ಯೇಷುಚಮೃತ್ಯುದಂಸ್ಯಾತ್ ॥**

ಹಸ್ತ, ಸ್ವಾತಿ, ಪುಷ್ಯ, ಪುನರ್ವಸು, ಅಶ್ವಿನೀ, ಶ್ರವಣ, ಈ ೬ ನಕ್ಷತ್ರಗಳಲ್ಲಿ ಪ್ರವೇಶಿಸಲ್ಪಟ್ಟ ಮನೆಯು ಮೂರು ವರ್ಷಗಳೊಳಗಾಗಿ ಅನ್ಯಕ್ರಾಂತವಾಗುತ್ತದೆ ಮಿಕ್ಕ ನಕ್ಷತ್ರಗಳಲ್ಲಿ ಮೃತ್ಯುಪ್ರದವಾಗುತ್ತದೆ

**ಸ್ಥಿರವಾರುಣಮೈತ್ರೇಂದು ತ್ವಷ್ಟೃಪೌಷ್ಣವಸೂಡುಷು ।**
**ಪ್ರವೇಶಃ ಶ್ರೀಕರೋಜ್ಯೇಷ್ಠಪುಷ್ಯಭೆಮಧ್ಯಮಸ್ಮೃತಃ ॥**

ರೋಹಿಣೀ, ಉತ್ತರಾ, ಉಷಾ, ಉಭಾ, ಶತಭಿಷಕ್, ಅನೂರಾಧಾ, ಮೃಗಶೀರ್ಷ, ಚಿತ್ರಾ, ರೇವತಿ ಧನಿಷ್ಠಾ, ಈ ನಕ್ಷತ್ರಗಳಲ್ಲಿ ಗೃಹಪ್ರವೇಶವು ಸಂಪತ್ಪ್ರದವಾಗುತ್ತದೆ, ಜ್ಯೇಷ್ಠಾ, ಪುಷ್ಯ ನಕ್ಷತ್ರ ಗೃಹಪ್ರವೇಶ ಮಧ್ಯಮವು.

**ಕೇಂದ್ರೇಷು ಸೌಮ್ಯೇ ಗುರುಶುಕ್ರ ಲಗ್ನೇ ಪಾಪೇಷುಕೇಂದ್ರಾಷ್ಟಮವರ್ಜಿತೇಷು । ಗ್ರಾಮಸ್ಥಿರೇವಾಥವನೇವಿಲಗ್ನೇಗೃಹಂವಿಶನ್ಶೀತಕರೋನುಕೂಲೇ ॥**

ಲಗ್ನ, ಚತುರ್ಥ, ಸಪ್ತಮ, ದಶಮಸ್ಥಾನಗಳಲ್ಲಿ ಶುಭಗ್ರಹವಿರುವಾಗಲೂ, ಪಾಪಗ್ರಹಗಳು ಕೇಂದ್ರಗಳಲ್ಲೂ ಅಷ್ಟಮದಲ್ಲೂ ಇಲ್ಲದೆ ಇರುವಾಗಲೂ ಲಗ್ನವು ಧನುಸ್ಸು, ಮೀನ, ವೃಷಭ, ತುಲಾ ಈ ನಾಲ್ಕು ರಾಶಿಗಳಲ್ಲೊಂದಾಗಿರುವಾಗಲೂ, ಅಥವಾ ಸ್ಥಿರಲಗ್ನದಲ್ಲೂ ಗ್ರಾಮಪ್ರವೇಶವನ್ನಾದರು ಮಾಡಿದರೆ ಶುಭಕರವಾಗುತ್ತದೆ, ಅಂದರೆ ಇಂಥಾ ಗ್ರಹಬಲದಲ್ಲಿ ಅರಣ್ಯವನ್ನು ಪ್ರವೇಶಿಸಿದರೂ ಸೌಖ್ಯವಹುದು.

**ಜನ್ಮರ್ಕ್ಷೇ ಜನ್ಮಲಗ್ನೇವಾ ತಾಭ್ಯಾಮುಪಚಯೇಪಿವಾ ।**
**ಪ್ರವೇಶಃಪುತ್ರಧನದಸ್ತ್ವನ್ಯಥಾಶೋಕಹಾನಿದಃ ॥**

ಜನ್ಮನಕ್ಷತ್ರದಲ್ಲಾಗಲಿ ಜನ್ಮಲಗ್ನದಲ್ಲಾಗಲಿ ಅವುಗಳಿಗೆ ೩-೬-೧೦-೧೧ ನೇ ಸ್ಥಾನಗಳಲ್ಲಾದರೂ ಗೃಹಪ್ರವೇಶವು ಸಂತಾನ ಧನಗಳನ್ನು ಕೊಡುತ್ತದೆ, ಹಾಗಿಲ್ಲದೆ ಬೇರೆ ನಕ್ಷತ್ರ ಲಗ್ನಗಳಲ್ಲಿ ಗೃಹಪ್ರವೇಶ ಮಾಡಿದರೆ ಶೋಕ ಹಾನಿಗಳನ್ನುಂಟುಮಾಡುತ್ತದೆ.

**ವ್ಯಾಧಿಸಾಧನದಶ್ಚೈವಾವಿತ್ತದೊಬಂಧುನಾಶಕಃ ।**
**ಸುತಹಾಶತ್ರುಹಾಸ್ತ್ರೀಘ್ನಃ ಪ್ರಾಣಹಾಪೀಡನಪ್ರದಃ ॥**

ರೋಗವೃದ್ಧಿಕರವು, ದಾರಿದ್ರ್ಯಪ್ರದವು, ಬಂಧುನಾಶಕರವು, ಸಂತಾನ ಹಾನಿಪ್ರದವು, ಮಿತ್ರನಾಶಕರವು, ಸ್ತ್ರೀನಾಶಕರವು, ಪ್ರಾಣಹರವು, ಕೇಡು ಮಾಡುವದೂ ಆಗುತ್ತದೆ.

**ಸಿದ್ಧಿಕೃದ್ಧನಕೃಚ್ಚೈವಾಭಯಕೃಜ್ಜನ್ಮರಾಶಿತಃ ॥**

ಜನ್ಮರಾಶಿಯಲ್ಲಿ ಮಾಡಲ್ಪಟ್ಟ ಗೃಹಪ್ರವೇಶವು ಕಾರ್ಯಸಿದ್ಧಿಕರವು, ಧನಪ್ರದವು. ಅಭಯುವನ್ನುಂಟುಮಾಡುವದು.

**ಅಕವಾಟಮವಾಚ್ಛನ್ನಮದತ್ತಬಲಿಭೋಜನಂ ।**
**ಗೃಹಾನ್ನಪ್ರವಿಶೆದೇವಂ ವಿಪದಾಮಾಕರಂಹಿತತ್ ॥**

ಬಾಗಿಲನ್ನು ಇಡದೆಯೂ, ಮೇಲೆ ಹೊದ್ದಿಕೆ ಇಲ್ಲದೆಯೂ, ದಿಗ್ದೇವತಾ ಬಲಿ, ಬ್ರಾಹ್ಮಣಭೋಜನ ಇವುಗಳನ್ನು ಮಾಡದೆಯೂ ಇರುವ ಮನೆಯನ್ನು ಪ್ರವೇಶಿಸಬಾರದು, ಯಾತಕ್ಕೆಂದರೆ ಆ ಮನೆಯು ಸರ್ವ ಆಪತ್ತುಗಳಿಗೂ ಸ್ಥಾನವಾಗಿರುತ್ತದೆ.

## ಕೂಪಾರಂಭವು

**ರೇವತ್ಯುತ್ತರಭಾದ್ರಾಚ ಹಸ್ತಮೈತ್ರಪಿತೃಸ್ತಥಾ ।**
**ಶ್ರವಣಂಬ್ರಹ್ಮತಿಷ್ಯಂಚ ಕೂಪಾರಂಭೆಪ್ರಶಸ್ಯತೆ ॥**

ರೇವತಿ, ಉತ್ತರಾಭಾದ್ರಾ, ಹಸ್ತ, ಅನೂರಾಧಾ, ಮಘಾ, ಶ್ರವಣ, ರೋಹಿಣೀ, ಪುಷ್ಯ ಈ ನಕ್ಷತ್ರಗಳು ಕೂಪಾರಂಭದಲ್ಲಿ ಪ್ರಶಸ್ತಗಳು.

**ಮತ್ಸ್ಯೆಕುಳೀರೆಮಕರೇಬಹೂವಕಂ ಕುಂಭೆವೃಷೆಚಾರ್ಧಜಲ ಪ್ರಮಾಣಂ । ಅಳ್ಯಾಂಚತೌಳ್ಯಾಂಮಿಥುನೇಚಪಾದಂ ಶೇಷೇತು ರಾಶೌಜಲನಾಶನಂಚ ॥**

ಮೀನ, ಕರ್ಕಾಟಕ, ಮಕರ, ಈ ರಾಶಿಗಳಲ್ಲಿ ಕೂಪಾರಂಭ ಮಾಡಿದರೆ ಬಹು ಜಲ ಉಂಟಾಗುತ್ತದೆ, ಅಂದರೆ ಇವು ಸಂಪೂರ್ಣ ಜಲರಾಶಿಗಳಾದುದ ರಿಂದ ಸಂಪೂರ್ಣ ಜಲವೆಂದು ಭಾವವು. ಕುಂಭ ವೃಷಭರಾಶಿಗಳ, ಅರ್ಧ ಜಲರಾಶಿಗಳಾದುದರಿಂದ ಅವುಗಳಲ್ಲಿ ಕೂಪಾರಂಭ ಮಾಡಿದರೆ ಅರ್ಧ ಜಲ ವುಂಟು. ವೃಶ್ಚಿಕ ತುಲಾ ಮಿಥುನಗಳು ಪಾದಜಲ ರಾಶಿಗಳಾದುದರಿಂದ ಅವುಗಳಲ್ಲಿ ಪಾದಜಲವು, ಮಿಕ್ಕರಾಶಿಗಳು ನಿರ್ಜಲ ರಾಶಿಗಳಾದುದರಿಂದ ಶುದ್ಧ ವಾಗಿ ನಿರ್ಜಲಗಳಾಗಿರುತ್ತವೆ.

**ಕೇಂದ್ರೇಷುಪಾಪಯುಕ್ತೇಷು ಕೃಚ್ಛ್ರೇಣಾಪಿನಸಿಧ್ಯತಿ ।**
**ಚಂದ್ರಶುಕ್ರಯುತೆಕೇಂದ್ರೆ ಪರ್ವತೇಚಜಲಂಭವೇತ್ ॥**

ಕೂಪಾರಂಭ ಲಗ್ನದ ಕೇಂದ್ರಗಳಲ್ಲಿ ಪಾಪಗ್ರಹಗಳಿದ್ದರೆ ಎಷ್ಟು ಆಳ ತೋಡಿದರೂ ನೀರು ಬೀಳುವದಿಲ್ಲ, ಕೇಂದ್ರದಲ್ಲಿ ಚಂದ್ರ ಶುಕ್ರರಿದ್ದರೆ ಬೆಟ್ಟದ ಮೇಲೂ ನೀರು ಬೀಳುವುದು.

**ಅರ್ಕರಾಶೌಜಲಂಶೂನ್ಯಂ ಪಾಷಾಣಾಶ್ಚಾಪಿದೃಶ್ಯತೇ ।**
**ಜಲರಾಶಿಗತೇಚಂದ್ರೇ ಶುಕ್ರೇವಾಪಿವಿಶೇಷತಃ ॥**

ಸೂರ್ಯನಿರುವ ರಾಶಿಯಲ್ಲಿ ಕೂಪಾರಂಭ ಮಾಡಿದರೆ ನಿರ್ಜಲವಾಗುವುದು, ಮತ್ತು ಬಂಡೆಕಲ್ಲು ಕಾಣಬರುವುದು, ಚಂದ್ರ ಶುಕ್ರರು ಜಲರಾಶಿಯಲ್ಲಿದ್ದರೆ ಬಹುಜಲ ಕಾಣಬರುವುದು.

## ಬೀಜಾವಾಪ ಪ್ರಕರಣವು

**ಪಂಚಮೀಸಪ್ತಮೀಚೈವ ಪೌರ್ಣಮಾಸೀತ್ರಯೋದಶೀ ।**
**ತೃತೀಯೈಕಾದಶೀಚೈವ ಪ್ರಶಸ್ತಾಬೀಜಕರ್ಮಣಿ ॥**

ಬೀಜ ಬಿತ್ತುವ ಕೆಲಸದಲ್ಲಿ ಪಂಚಮೀ, ಸಪ್ತಮೀ, ಪೂರ್ಣಿಮಾ, ತ್ರಯೋದಶೀ, ಈ ತಿಥಿಗಳು ಪ್ರಶಸ್ತಗಳು.

**ಅರ್ಕೋದಯೇ ಸೂರ್ಯವಾರೇ ಸರ್ವಬೀಜಾನಿವಾಪಯೇತ್ ।**
**ಸೋಮವಾರೇಮಿಥೋಲಗ್ನೇ ಜಲಪುಷ್ಪಾಂಕುರಾನ್ಯಸೇತ್ ॥**

ಭಾನುವಾರದಲ್ಲಿ ಸಿಂಹಲಗ್ನದಲ್ಲಿ ಸಕಲ ಬೀಜಗಳನ್ನು ಬಿತ್ತಬಹುದು, ಸೋಮವಾರದಲ್ಲಿ ಮಿಥುನಲಗ್ನದಲ್ಲಿ ನೀರಲ್ಲಿ ನೆನಸಿ ಮೊಳಕೆ ಹೊರಟ ಬೀಜಗಳನ್ನು ಬಿತ್ತಬೇಕು.

**ಕುಜಸ್ಯವಾರೇತಲ್ಲಗ್ನೇ ಕೊದ್ರವಾನ್ಸ್ಥಾಪಯೆದ್ಬುಧಃ ।**
**ಬುಧವಾರೇಸೌಮ್ಯಲಗ್ನೇಕ್ರಮುಕಸ್ಥಾಪನಂವನಂ ॥**

ಕುಜನ ವಾರದಲ್ಲೂ ಮೇಷ ವೃಶ್ಚಿಕ ಲಗ್ನಗಳಲ್ಲೂ ಹಾರಕಗಳನ್ನೂ ಬಿತ್ತಬೇಕು, ಬುಧವಾರದಲ್ಲೂ ಅವನ ಲಗ್ನದಲ್ಲೂ ಅಡಿಕೆ ಸಸಿಗಳನ್ನು ನಾಟಬಹುದು.

**ಸ್ಥಾಪಯೇತ್ಫಲವೃಕ್ಷಾಂಶ್ಚ ತಲ್ಲಗ್ನೇದಿವಸೇಗುರೋಃ ।**
**ಶುಕ್ರವಾರೇತದುದಯೇ ಸ್ಥಾಪಯೇತ್ಕುಸುಮಾಂತರಂ ॥**

ಗುರುವಾರದಲ್ಲೂ ಅವನ ಲಗ್ನದಲ್ಲೂ ಫಲವೃಕ್ಷಗಳ ತೋಪನ್ನು ಹಾಕಬೇಕು, ಶುಕ್ರವಾರದಲ್ಲೂ ಅವನ ಲಗ್ನದಲ್ಲೂ ಹೂವುಗಳ ತೋಟವನ್ನೂ ಹಾಕಬೇಕು.

**ಮಂದಸ್ಯಲಗ್ನೇಮನ್ಹಾಹೇ ಕೃಷ್ಣಧಾನ್ಯಂನಿವಾಪಯೇತ್ ॥**

ಶನಿವಾರದಲ್ಲೂ ಅವನ ಲಗ್ನದಲ್ಲೂ ಎಳ್ಳು, ರಾಗಿ, ಮುಂತಾದ ಕರೀ ಧಾನ್ಯಗಳನ್ನು ಬಿತ್ತಬೇಕು

**ಸ್ವಾತೀಪುಷ್ಯಮಘಾಪ್ರಜೇಶವರುಣಾಸ್ಸಾರ್ಪಾಂತ್ಯಮಿತ್ರೋತ್ತರಾ |**
**ಮೂಲಾಧೋಕ್ಷಜಹಸ್ತಭಾನಿಸತತಂಬೀಜಸ್ಯವಾಪೇಶುಭಾಃ |**
**ಆದಿತ್ಯೇಂದವವಾಸವಾಸ್ಸತುರುಗಾವಾಪೇಸದಾಮಧ್ಯಮಾಃ |**
**ಶುಕ್ರೇಂದ್ವೋಬುಧಜೀವಯೋಶ್ಚದಿವಸಾಶ್ಯಸ್ತಾಶ್ಚನಾನ್ಯೇಪರಾಃ ||**

ಸ್ವಾತೀ, ಪುಷ್ಯ, ಮಘಾ, ರೋಹಿಣಿ, ಶತಭಿಷಕ್, ಆಶ್ಲೇಷಾ, ರೇವತೀ, ಅನೂರಾಧಾ, ಉತ್ತರಾ, ಉಷಾ, ಉಭಾ, ಮೂಲ, ಶ್ರವಣ, ಹಸ್ತ ಈ ನಕ್ಷತ್ರಗಳು ಯಾವಾಗ್ಯೂ ಬಿತ್ತುವ ಕೆಲಸದಲ್ಲಿ ಶುಭಪ್ರದಗಳು, ಅಶ್ವಿನೀ, ಪುನರ್ವಸು, ಮೃಗಶಿರ, ಜ್ಯೇಷ್ಠಾ ಈ ನಕ್ಷತ್ರಗಳು ಯಾವಾಗ್ಯೂ ಮಧ್ಯಮಗಳು, ಮಿಕ್ಕ ನಕ್ಷತ್ರಗಳು ನಿಷ್ಫಲಗಳು, ಶುಕ್ರ, ಸೋಮ, ಗುರು, ಬುಧವಾರಗಳು ಪ್ರಶಸ್ತಗಳು, ಮಿಕ್ಕವು ನಿಷ್ಪ್ರಯೋಜನಗಳೆಂದು ತಿಳಿಯ ತಕ್ಕದ್ದು.

## ಗೌಳಿ ವಾಕ್ಪತನ ಫಲಗಳು

**ಭಾಗ್ಯಶ್ರೀಜಯಯುದ್ಧ ಲಾಭಗಮನಕ್ಷೇಮಾರ್ತಿಪೀಡಾರ್ಥ ಕೃತ್ಪ್ರಾಗಾದಿಷ್ವಧರೋರ್ಧ್ವಯೋರಪಿಸದಾಶ್ರೋತುಃ ಕ್ರಮಾ ದ್ಗೌಳಿವಾಕ್ | ಲಕ್ಷ್ಮೀರ್ಮೂರ್ಧ್ನಿಗಳೆಚಮಿತ್ರಮುದರೆ ಪುತ್ರಂಚ ಪಾರ್ಶ್ವೇಮುದಂ ಕಟ್ಯಾಂ ವಾಹನಮರ್ಥಮೇಷ್ಯತಿ ಪದೆ ಗೌಳಿ ಪ್ರಪಾತೆಫಲಮ್ ||**

ವ್ಯಾ || ಅ || ಗೌಳಿವಾಕ್ಪತನಯೋಃಫಲಮಾಹ || ಭಾಗ್ಯೇತಿ || ಗೌಳೀ ವಾಕ್‌ಗೌಳೀಗೃಹಗೋಧಿಕಾತಸ್ಯಾಃ ವಾಕ್‌ಪ್ರಾಗಾದಿಷು ಪ್ರಾಗಾದ್ಯೆಷ್ಟದಿಕ್ಷು ಅಧರೋರ್ಧ್ವಯೋಃ ಶ್ರೋತುಃ ಕ್ರಮಾದ್ಭಾಗ್ಯಾದಿ ಫಲಕೃದ್ಭವದಿತಿಯೋಜನಾ ಅಯಮರ್ಥಃ ಗೌಳಿವಾಕ್ ಪ್ರಾಚ್ಯಾಂಚೆತಿಶ್ರೋತುಃ ಭಾಗ್ಯಕೃತ್ ಆಗ್ನೇಯಾಂ ಶ್ರೀಕೃತ್ ದಕ್ಷಿಣಾಸ್ಯಾಂ ಜಯಕೃತ್ ನೈಋತ್ಯಾಂ ಯುದ್ಧಕೃತ್ ಪ್ರತೀಚ್ಯಾಂ ಭಕೃತ್ ವಾಯುವ್ಯಾಂ ಗಮನಕೃತ್ ಉದೀಚ್ಯಾಂ ಕ್ಷೇಮಕೃತ್ ಈಶಾನ್ಯಾ ಮಾರ್ತಿಕೃತ್ ಭೂಮೌ ಪೀಡಾಕೃತ್ ಸ್ವಸ್ಯೋರ್ಧ್ವಭಾಗೇಚೇತ್ ಅರ್ಥಕೃತ್

ಶ್ರೋತುರಿತಿ ಸರ್ವತ್ರಾನ್ವಯಃ ॥ ಅಥ ಪತನಫಲಮಾಹ ॥ ಗೌಳಿ ಪ್ರಪಾತೆ ಮೂರ್ಧ್ನಿ ಶಿರಸಿಚೇತ್‌ಲಕ್ಷ್ಮೀ ಗಳಕಂಠೆ ಮಿತ್ರಂಬಂಧುಲಾಭಂ ಉದರೆ ಪುತ್ರಂ ಪುತ್ರಲಾಭಂ ಪಾರ್ಶ್ವೇಮುದಂ ಸಂತೋಷಂ ಕಟ್ಯಾಂ ವಾಹನಂಪ್ರದೇ ಪಾದೆ ಅರ್ಥಂಚೈಷ್ಯತೀತಿಫಲಮವಗಂತವ್ಯಂ ॥

ಗೌಳಿ ವಾಕ್ಕು ಬೀಳುವಿಕೆ ಇವುಗಳ ಫಲಗಳನ್ನು ಹೇಳುತ್ತಾನೆ:— ಪೂರ್ವದಿಕ್ಕು ಮೊದಲು ಈಶಾನ್ಯದವರೆವಿಗು ೮ದಿಕ್ಕುಗಳಲ್ಲಿಯೂ ಊರ್ಧ್ವಾಧಃ ಪ್ರದೇಶಗಳು ೨, ಅಂತು ಹತ್ತು ದಿಕ್ಕುಗಳಲ್ಲಿ ನುಡಿಯುತ್ತಿದ್ದರೆ ಆ ಸಮಯ ದಲ್ಲಿ ಪ್ರಯಾಣ ಮಾಡಿದವರಿಗೆ ಕ್ರಮವಾಗಿ ಭಾಗ್ಯ, ಸಂಪತ್ತು, ಜಯ, ಯುದ್ಧ, ಲಾಭ, ಗಮನ, ಕ್ಷೇಮ, ದುಃಖ, ಪೀಡೆ, ಧನ, ಈ ದಶವಿಧ ಲಾಭಗಳು ಕ್ರಮವಾಗಿ ಒಂದೊಂದು ದಿಕ್ಕಿಗೆ ಒಂದೊಂದು ಫಲವಾಗುವದು, ಪತನ ಅಂದರೆ ಮೇಲಿನಿಂದ ಬೀಳುವದು, ಇದರ ಫಲವೆಂತೆಂದರೆ, ಶಿರಸ್ಸು ಕಂಠ ಹೊಟ್ಟೆ ಪಾರ್ಶ್ವವು ಕಟಿ ಅಂದರೆ ಹೊಕ್ಕಳು ಪಾದಗಳು ಈ ಸ್ಥಾನ ಗಳಲ್ಲಿ ಬಿದ್ದರೆ ಐಶ್ವರ್ಯ ಬಂಧುಲಾಭ ಪುತ್ರಲಾಭ ಸಂತೋಷ, ವಾಹನ ಧನ ಈ ಫಲಗಳು ಉಂಟಾಗುವುವು.

## ಸಟೀಕಾ ಮುಹೂರ್ತದರ್ಪಣವು

## ಸಂ ಪೂ ರ್ಣ ವು